ನೆಲಮನೆ ವಿಜ್ಞಾನ ಮಾಲಿಕೆ - ೨

## ಜೀವರಕ್ಷಕ ವ್ಯಾಕ್ಸೀನುಗಳ ಹರಿಕಾರ

# ಡಾ॥ ವ್ಲಾಡಿಮಿರ್ ಹಾಫ್‌ಕಿನ್

ಡಾ. ಎಚ್. ಡಿ. ಚಂದ್ರಪ್ಪಗೌಡ





"ಜೀವನ ಚರಿತ್ರೆ" ಪ್ರಕಾರದಲ್ಲಿ
೨೦೦೦ ಸಾಲಿನ ಉತ್ತಮ ಕೃತಿಯೆಂದು
ಕರ್ನಾಟಕ ಸಾಹಿತ್ಯ ಅಕಾಡೆಮಿಯು
ಪುರಸ್ಕೃತ ಕೃತಿ.

# ಡಾ॥ ವ್ಲಾದಿಮಿರ್ ಹಾಫ್‌ಕಿನ್

ಜೀವ ರಕ್ಷಕ ವ್ಯಾಕ್ಸೀನುಗಳ ಹರಿಕಾರ


## ಡಾ॥ ಎಚ್.ಡಿ.ಚಂದ್ರಪ್ಪಗೌಡ

ಸಹಕಾರ

'ಶ್ರೀನಾಗಾನಂದ'



ಮಲೆನಾಡು ಸಾಹಿತ್ಯ ಪ್ರಕಾಶನ
೬೪, ಶ್ರೀನಿವಾಸ ನಿಲಯ,
ಮಿಷನ್ ಕಾಂಪೌಂಡು
ಶಿವಮೊಗ್ಗ-೫೭೭ ೨೦೧.
☎ 08182-223889



ನೆಲಮನೆ ಪ್ರಕಾಶನ
ರಂಗನಾಥನಗರ,
ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ.

**Dr. VLADIMIR HAFFIKINE**- A Biography in Kannada By Dr: H.D. CHANDRPPA GOWDA, Mission Compound Shimoga; Published by Nelamane Prakashana, Srirangapatna, Mandya District.

ã Dr. H.D. Chandrappa Gowda

First Impression : **2000**

Pages : **166 + X**

ಪ್ರತಿಗಳು : ೧೦೦೦

ಮುಖಪುಟ: **ಹಾದಿಮನಿ**

ಬೆಲೆ : **ಎಂಭತ್ತು ರೂಪಾಯಿಗಳು**

ಬೆಂಗಳೂರು ಸಂಪರ್ಕ ವಿಳಾಸ:
**ನೆಲಮನೆ ಪ್ರಕಾಶನ**
839,7ನೇ ಕ್ರಾಸ್, 9 'ಎ' ಮೇನ್
ಶ್ರೀನಗರ, ಬೆಂಗಳೂರು-560050

ಅಕ್ಷರ ಜೋಡಣೆ:
**ನೆಲಮನೆ ಗ್ರಾಫಿಕ್ಸ್**
ಶ್ರೀನಗರ, ಬೆಂಗಳೂರು.

ಮುದ್ರಕರು:
**ರವಿ ಗ್ರಾಫಿಕ್ಸ್**
ರಾಜಾಜಿನಗರ
ಬೆಂಗಳೂರು-560 010

# ಅರ್ಪಣೆ

ಈ ಕೃತಿ ರಚನೆಗೆ ಸ್ಫೂರ್ತಿ ನೀಡಿ ತುಂಬು ಹೃದಯದ ಸಹಕಾರ ನೀಡಿ ಪುಸ್ತಕ
ಪ್ರಕಟವಾಗುವ ಮೊದಲೇ ನಮ್ಮನ್ನಗಲಿದ

**ಡಾ|| ಟಿ. ವಿಶ್ವನಾಥರಾವ್**

('ಶ್ರೀನಾಗಾನಂದ')

ಅವರಿಗೆ ಗೌರವ ಪೂರ್ವಕ ನಮನದೊಂದಿಗೆ.

**— ಡಾ|| ಎಚ್.ಡಿ. ಚಂದ್ರಪ್ಪಗೌಡ**

# ಮುನ್ನುಡಿ

ಮೈಲಿ, ಪ್ಲೇಗು ಕಾಲರಾಗಳಂಥ ಸೋಂಕು ರೋಗಗಳ ಹೆಸರು ಕೇಳಿದರೇ ಮೈ ನಡುಗುವ ಕಾಲವೊಂದಿತ್ತು. ಬಾಲಕನಾಗಿದ್ದಾಗ ಹಾಗೂ ಮುಂದೆ ವೈದ್ಯನಾದ ಮೇಲೂ ಈ ವ್ಯಾಧಿಗಳೊಡನೆ ಮುಖಾಮುಖಿಯಾದ ನೆನಪುಗಳು ನನ್ನನ್ನು ಈಗಲೂ ಕಾಡುತ್ತವೆ.

ಮೈಲಿ ಬೇನೆಯನ್ನಂತೂ ಈ ಗೋಳದಿಂದಲೇ ಉಚ್ಚಾಟಿಸಲು ಸಾಧ್ಯವಾಗಿದೆ. ಪ್ಲೇಗು ಮತ್ತು ಕಾಲರಾಗಳು ವಿನಾಶದ ಅಂಚಿನಲ್ಲಿವೆ. ಭಾರತವೇ ಅವರಡೂ ರೋಗಗಳ ತವರು ಮನೆಯೆಂಬ ಪ್ರತೀತಿಯೂ ಇತ್ತು. ಇತ್ತೀಚೆಗೆ ಸೂರತ್ ನಗರದಲ್ಲಿ ಪ್ಲೇಗು ಮೈದೋರಿದಾಗ ಇಡೀ ರಾಷ್ಟ್ರವೇ ತಲ್ಲಣಿಸಿತು. ನೆರೆಹೊರೆಯ ದೇಶಗಳೂ ಗಲಿಬಿಲಿಗೊಂಡವು. ಇನ್ನು ಹಿಂದಿನ ಕಾಲಗಳಲ್ಲಿ ಇವುಗಳ ಉಪಟಳ ಹೇಗಿರುತ್ತಿತ್ತೆಂಬುದನ್ನು ಊಹಿಸುವುದೂ ಅಸಾಧ್ಯ.

ಆಧುನಿಕ ವೈದ್ಯ ವಿಜ್ಞಾನದಲ್ಲಾದ ಪ್ರಗತಿಯಿಂದ ಬಹುಪಾಲು ಸೋಂಕು ವ್ಯಾಧಿಗಳನ್ನು ಹತೋಟಿಯಲ್ಲಿರಿಸುವುದು ಸಾಧ್ಯವಾಗಿದೆ. ಆದರೂ ಪ್ಲೇಗು, ಕಾಲರಾಗಳು ಆಗಾಗ್ಗೆ ತಲೆಯೆತ್ತುತ್ತಿರುತ್ತವೆ. ಅವುಗಳ ನಿರೋಧ ಮತ್ತು ಚಿಕಿತ್ಸೆಗೆ ಯಶಸ್ವಿಯಾದ ವಿಧಾನಗಳು ಆವಿಷ್ಕಾರವಾಗಿವೆ. ಈ ಯಶಸ್ಸಿನ ಹಿಂದೆ ಹಲವಾರು ವಿಜ್ಞಾನಿಗಳು ಮತ್ತು ವೈದ್ಯರ ಅವಿರತ ಶ್ರಮ ಮತ್ತು ಬಲಿದಾನಗಳು ಅಡಗಿವೆ. ಮೈಲಿ ಬೇನೆಯ ನಿರೋಧಕ್ಕೆ ಮೊಟ್ಟ ಮೊದಲು ವ್ಯಾಕ್ಸಿನೇಷನ್ ಪದ್ಧತಿಯನ್ನು ಜಾರಿಗೆ ತಂದ (1897) ಇಂಗ್ಲೆಂಡಿನ ಎಡ್ವರ್ಡ್ ಜೆನ್ನರ್, ರೇಬೀಸ್ ರೋಗ ನಿರೋಧಕ್ಕೆ ವ್ಯಾಕ್ಸಿನೇಷನ್ ಕಂಡು ಹಿಡಿದ ಫ್ರಾನ್ಸ್‌ನ ಲೂಯಿ ಪ್ಯಾಶ್ಚರ್ (1885), ಆಂಥ್ರಾಕ್ಸ್ ಮತ್ತು ಕ್ಷಯರೋಗಗಳಿಗೆ ಕಾರಣವಾದ ಮಾರಕ ರೋಗಾಣುಗಳನ್ನು ಬಯಲಿಗೆಳೆದ ಜರ್ಮನಿಯ ರಾಬರ್ಟ್ ಕಾಖ್ (1880,1882) ಹಳದಿ ಜ್ವರದ ಸಂಶೋಧನೆಯಲ್ಲಿ ನಿರತನಾಗಿದ್ದು ಆ ವ್ಯಾಧಿಗೇ ಬಲಿಯಾದ ಜಪಾನಿನ ಹಿಡೆಯೋ ನೊಗುಚಿ (1913), ಕಾಲರಾ, ಪ್ಲೇಗ್ ರೋಗಗಳ ನಿರೋಧಕ್ಕೆ ವ್ಯಾಕ್ಸಿನೇಷನ್‌ಗಳನ್ನು ಕಂಡು ಹಿಡಿದು ಜೀವನದ ಹಂಗು ತೊರೆದು ತನ್ನ ಮೇಲೆ ಮೊದಲು ಪ್ರಯೋಗ ಮಾಡಿಕೊಂಡ ರಷ್ಯಾ ಸಂಜಾತ ವ್ಲಾದಿಮಿರ್ ಹಾಫ್‌ಕಿನ್ (1892,1897) ರಂಥ ಧೀರೋದಾತ್ತ ವಿಜ್ಞಾನಿಗಳ ತ್ಯಾಗ, ಬಲಿದಾನ ಮತ್ತು ನಿಸ್ವಾರ್ಥ ಮಾನವತಾವಾದಿಗಳಿಂದ ನಾವಿಂದು ಆರೋಗ್ಯವಂತರಾಗಿ ಸುಖ ಜೀವನ ನಡೆಸಲು ಸಾಧ್ಯವಾಗಿರುವುದು. ಅವರೆಲ್ಲರ ಜೀವನದ ಕಥೆಗಳು ಕುತೂಹಲ, ಆಶ್ಚರ್ಯ, ಕನಿಕರ ಹುಟ್ಟಿಸುತ್ತವೆ. ಅವರಿಗೆಲ್ಲಾ ನಾವೆಷ್ಟು ಚಿರಋಣಿಗಳಾದರು ಸಾಲದು.

ವ್ಲಾದಿಮಿರ್ ಹಾಫ್‌ಕಿನ್ ರಷ್ಯಾದಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಮಹಾನ್ ಕ್ರಾಂತಿಕಾರಿಯಾಗಿ ಕಷ್ಟನಷ್ಟಗಳನ್ನನುಭವಿಸಬೇಕಾಯಿತು. ಮುಂದೆ ದೇಶಭ್ರಷ್ಟನಾಗಿ

ಆವಿಷ್ಕರಿಸಿದ ಕಾಲರಾ ವ್ಯಾಕ್ಸೀನನ್ನು ತಮ್ಮ ಮೇಲೆ ಪ್ರಯೋಗಿಸಿಕೊಂಡು, ಅದು ಅಪಾಯಕಾರಿ ಯಲ್ಲವೆಂಬುದನ್ನು ಋಜುವಾತು ಮಾಡಿದರೂ ಯುರೋಪಿನ ದೇಶಗಳಲ್ಲಿ ಬಳಕೆ ಸಾಧ್ಯವಾಗಲಿಲ್ಲ. ಅನಂತರ ಭಾರತಕ್ಕೆ ಪ್ರಯಾಣಮಾಡಿ, ಇಲ್ಲಿ ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲಿ ಅದನ್ನು ಯಶಸ್ವಿಯಾಗಿ ಬಳಕೆಗೆ ತರುತ್ತಾರೆ. ಅಷ್ಟರಲ್ಲೇ ಮುಂಬಯಿಯಲ್ಲಿ ಪ್ಲೇಗ್ ಮಹಾಮಾರಿ ತಲೆದೋರಿದಾಗ ಅಲ್ಲಿಗೂ ಧಾವಿಸುತ್ತಾರೆ. ಅತ್ಯಲ್ಪ ಸಮಯದಲ್ಲೇ ಪ್ಲೇಗ್ ವ್ಯಾಕ್ಸೀನನ್ನು ಕಂಡುಹಿಡಿದು ತಮ್ಮ ಮೇಲೆ ಪ್ರಯೋಗ ನಡೆಸಿ ಅದರ ಉಪ ಯುಕ್ತತೆಯನ್ನು ಸಾಬೀತುಪಡಿಸುತ್ತಾರೆ. ಹಾಗೂ ಹತ್ತಾರು ಸಾವಿರ ಜನರಿಗೆ ಪ್ಲೇಗ್ ತಗುಲದಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾರೆ. ಆದರೂ ಅಂತಿಮ ದಿನಗಳಲ್ಲಿ ಅವರು ಎಸಗದ ತಪ್ಪಿಗೆ ಶಿಕ್ಷೆ ಅನುಭವಿಸುವಂತಾಗಿ ಭಾರತವನ್ನೇ ಬಿಟ್ಟುಹೋಗಬೇಕಾದ ವಿಪರ್ಯಾಸ ಅವರ ಪಾಲಿಗೊದಗುತ್ತದೆ.

ಆಜನ್ಮ ಬ್ರಹ್ಮಚಾರಿಯಾಗಿ ಜೀವನ ಸಾಗಿಸಿದ ವ್ಲಾದಿಮಿರ್ ಹಾಫ್‌ಕಿನ್ನರ ಜೀವನ ಚರಿತ್ರೆಯ ಅವಲೋಕನ, ಮೆಚ್ಚಿಗೆ ಅನುಕಂಪಗಳೆರಡನ್ನೂ ಉಂಟು ಮಾಡುತ್ತದೆ. ಅವರಷ್ಟು ಸಮರ್ಪಣಾಭಾವ ಹಾಗೂ ನಿಸ್ವಾರ್ಥದಿಂದ ಕಾರ್ಯಶೀಲರಾಗಿದ್ದವರು ತೀರಾ ಅಪರೂಪವೇ ಸರಿ. ಅವರ ಸಂಕ್ಷಿಪ್ತಜೀವನ ಚರಿತ್ರೆ, ಹೆಸರಾಂತ ಮಾಸಪತ್ರಿಕೆ 'ಉತ್ಥಾನ''ದಲ್ಲಿ 1986ರಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ಆಗ ಕೆಲವು ಕಂತುಗಳನ್ನು ಓದಿ, ಹಾಫ್‌ಕಿನ್ ಬಗೆಗೆ ತುಂಬಾ ಆಸಕ್ತಿಯುಂಟಾಗಿತ್ತು; ಅಲ್ಲದೆ ವಿಸ್ತಾರವಾಗಿ ಅವರ ಜೀವನ ಚರಿತ್ರೆ ಬರೆಯುವ ಹಂಬಲವೂ ನನ್ನಲ್ಲುಂಟಾಗಿತ್ತು.. ''ಮುಳ್ಳು ಹಾದಿಯ ಪಯಣಿಗ'' ಧಾರಾವಾಹಿಯ ಕೃತಿಯ ಕರ್ತೃ ಡಾ॥ಟಿ.ವಿಶ್ವನಾಥ್‌ರಾವ್ ಬಹಳ ಹಿಂದೆ ತೀರ್ಥಹಳ್ಳಿ ಹತ್ತಿರದ ಆರಗದಲ್ಲಿ ಆಯುರ್ವೇದ ವೈದ್ಯರಾಗಿದ್ದರು. ''ಶ್ರೀನಾಗಾನಂದ'' ಎಂಬ ಕಾವ್ಯನಾಮದಿಂದ ಹಲವು ಉತ್ಕೃಷ್ಟ ಕತೆ, ನಾಟಕ, ವೈದ್ಯಕೀಯ ಲೇಖನಗಳನ್ನು ಬರೆದು ಹೆಸರುಗಳಿಸಿದ್ದವರು. ಎಂಬತ್ತೈದರ ವಯೋವೃದ್ಧ ಡಾ॥ರಾವ್ ಹರಿಯಾಣದ ಅಮರನಗರದ ಮಹರ್ಷಿ ಆಯುರ್ವೇದ ಪ್ರತಿಷ್ಠಾನದಲ್ಲಿ ಈಗಲೂ ಸಂಶೋಧನಾ ನಿರತರಾಗಿದ್ದಾರೆ. ''ಉತ್ಥಾನ'' ಪತ್ರಿಕೆಯ ಸಂಪಾದಕ ಶ್ರೀ ಎಸ್.ಆರ್. ರಾಮಸ್ವಾಮಿಯವರ ಮೂಲಕ ಅವರನ್ನು ಎರಡು ವರ್ಷಗಳ ಹಿಂದೆ ಸಂಪರ್ಕಿಸಿದಾಗ ಬಿಚ್ಚುಮನಸ್ಸಿನಿಂದ ನನ್ನ ಯೋಜನೆಯನ್ನು ಅನುಮೋದಿಸಿದರಲ್ಲದೆ ಎಲ್ಲಾ ಸಹಾಯ, ಸಹಕಾರಗಳನ್ನಿತ್ತರು. ಅವರು ಹಿಂದೆ ಸಂಗ್ರಹಿಸಿದ್ದ ಆಕರ ಗ್ರಂಥಗಳೂ ನನಗೆ ಲಭ್ಯವಾಗುವಂತೆ ಏರ್ಪಾಡು ಮಡಿದರು. ಒಂದು ರೀತಿಯಲ್ಲಿ ಅವರ ಕೃತಿಯೇ ಇಲ್ಲಿ ಮರುಹುಟ್ಟು ಪಡೆದಂತಾಗಿದೆ. ಅವರ ಸಹೃದಯ ಸಹಕಾರಕ್ಕೆ ನಾನೆಷ್ಟು ಋಣಿಯಾಗಿದ್ದರೂ ಸಾಲದೆನಿಸುತ್ತದೆ.

ಕೃತಿಯ ರಚನೆಯಲ್ಲಿ ''ಉತ್ಥಾನ''ದ ಶ್ರೀ ಎಸ್.ಆರ್.ರಾಮಸ್ವಾಮಿಯವರ ಸಹಕಾರ ತುಂಬಾ ಅನನ್ಯವೆಂದೇ ಹೇಳಬೇಕು. ಈ ಕಾರ್ಯದ ಪ್ರಸ್ತಾವನೆಯಾದಗಿನಿಂದ ಪ್ರತಿಹಂತದಲ್ಲೂ ನನಗೆ ಮಾರ್ಗದರ್ಶನ ನೀಡಿ ಸಹಾಯ ಮಾಡಿದ್ದಾರೆ. ಅವರಿಗೆ ನನ್ನ

ಫ್ರಾನ್ಸ್ ದೇಶಕ್ಕೆ ತೆರಳಿ ಅಲ್ಲಿ ವಿಜ್ಞಾನಿಯಾಗಿ ರೂಪುಗೊಳ್ಳುತ್ತಾರೆ. ಅವರು ಹೃತ್ಪೂರ್ವಕ ಕೃತಜ್ಞತೆಗಳು. ಡಾ।। ವಿಶ್ವನಾಥರಾವ್ ಅವರ ಪ್ರೋತ್ತೇಜನ ಮತ್ತು ಸಹಕಾರದಿಂದ ರಚನೆಯಾದ ಈ ಕೃತಿ ಅಚ್ಚಾಗುವುದರೊಳಗೇ ಅವರು ದೈವಾಧೀನರಾದುದು ಅತ್ಯಂತ ವಿಷಾದಕರ ಸನ್ನಿವೇಶನ್ನುಂಟು ಮಾಡಿದೆ. ಅವರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ವಿನಮ್ರವಾಗಿ ಪ್ರಾರ್ಥಿಸುತ್ತೇನೆ.

ಕೃತಿಯ ರಚನೆ ಎರಡು ವರ್ಷಗಳ ಹಿಂದೆ ಶುರುವಾಗಿದ್ದರೂ ಕೆಲವು ವೈಯಕ್ತಿಕ ಅನಾನುಕೂಲತೆಗಳಿಂದ ಸಕಾಲದಲ್ಲಿ ಮುಗಿಸಲಾಗಲಿಲ್ಲ. ಅದು ಮುಗಿಯುವ ಹಂತದಲ್ಲಿದ್ದಾಗ ಮಿತ್ರರಾದ ಪ್ರೊ. ನೆಲಮನೆ ದೇವೇಗೌಡರು ನನ್ನನ್ನು ಸಂಪರ್ಕಿಸಿ ಅದರ ಪ್ರಕಟಣೆಯ ಜವಾಬ್ದಾರಿಯನ್ನು ವಹಿಸಿಕೊಂಡರು. ಪುಸ್ತಕವನ್ನು ಅಚ್ಚುಕಟ್ಟಾಗಿ ಮತ್ತು ಆಕರ್ಷಣೀಯವಾಗಿ ಹೊರತಂದಿರುವುದಕ್ಕೆ ಅವರಿಗೆ ತುಂಬಾ ಋಣಿಯಾಗಿದ್ದೇನೆ.

28.6.2000 **ಡಾ।। ಎಚ್.ಡಿ.ಚಂದ್ರಪ್ಪಗೌಡ**

ಶಿವಮೊಗ್ಗ.

# ಪರಿವಿಡಿ

# ಪ್ರಸ್ತಾವನೆ

ನಮ್ಮ ಸಂಸತ್ತಿನ ಅಧಿವೇಶನ ಜರುಗುವ ದಿನಗಳಲ್ಲಿ ''ಸಂಸತ್ತಿನಲ್ಲಿ ಇಂದು'' ಎಂಬ ವಿಶೇಷ ಸಮಾಚಾರ ದೂರದರ್ಶನದಲ್ಲಿ ಬಿತ್ತರವಾಗುವುದನ್ನು ನೀವು ನೋಡಿರಬಹುದು. ಮೊದಲಿಗೆ, ಆ ಸಮಾಚಾರ ಆರಂಭವಾಗುವ ಸೂಚನೆಯಾಗಿ ಮೂರು ಶಿಲಾ ಪ್ರತಿಮೆಗಳ ದರ್ಶನ ಮಾಡಿಸುತ್ತಾರೆ. ಅವುಗಳಲ್ಲಿ ಒಂದು ರಾಷ್ಟ್ರಪಿತ ಮಾಹಾತ್ಮ ಗಾಂಧಿಯವರದ್ದು; ಇನ್ನೊಂದು ಸಂವಿಧಾನ ಶಿಲ್ಪಿ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರದ್ದು; ಮೂರನೆಯದು ಸ್ವಲ್ಪ ಉದ್ದ ತಲೆ ಕೂದಲಿನ ಗಡ್ಡದಾರಿ ವಯೋವೃದ್ಧರದ್ದು; ಮೊದಲ ನೋಟಕ್ಕೆ ಗುರುದೇವ್ ರವೀಂದ್ರನಾಥ ಟ್ಯಾಗೋರ್‌ರದ್ದಿರಬಹುದೆನಿಸಿದರೂ ಅವರದ್ದಲ್ಲ. ಅದು ಮಹರ್ಷಿ ಅರವಿಂದೋ ಅವರ ಪ್ರತಿಮೆ; ಅರವಿಂದೋ ಅವರ ಖ್ಯಾತಿ ಈಗಿನವರನೇಕರಿಗೆ ಪರಿಚಯವಿದ್ದಂತಿಲ್ಲ; ಆಧ್ಯಾತ್ಮಿಕ ವಿಷಯಗಳಲ್ಲಿ ಆಸಕ್ತಿ ಇರುವವರಿಗೆ ಅವರು ಸುಪರಿಚಿತರು. ಆದರೂ ಸಂಸತ್ ಭವನದೆದುರು ಅವರ ಶಿಲಾಪ್ರತಿಮೆಯ ಪ್ರಸ್ತುತಿ ಏನು ಎಂಬ ಅನುಮಾನ ಉಳಿದು ಬಿಡುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಮೊದಲ ವರ್ಷಗಳಲ್ಲಿ ಅವರೊಬ್ಬ ಮಹಾನ್ ದೇಶಭಕ್ತ; ಆಗಿನ ಆಂದೋಳನದ ಮುಂಚೂಣಿಯಲ್ಲಿದ್ದ ಕ್ರಾಂತಿಯ ಕಿಡಿ; ಆಳರಸರ ಪೋಲಿಸ್‌ದಳ ಆಕಸ್ಮಾತ್ತಾಗಿ ಎದುರಾದರೆ ಅವರನ್ನು ಗುಂಡಿಕ್ಕೆ ಕೊಲ್ಲಬಹುದಾಗಿತ್ತು. ಆದರೆ ಅದು ಸಾಧ್ಯವಾಗಿರಲಿಲ್ಲ. ಕೆಲಕಾಲ ಅವರಿಂದ ಕಣ್ಮರೆಯಾಗಿರಲು ಆಗಿನ ಫ್ರೆಂಚ್ ವಸಾಹತಾಗಿದ್ದ ಪಾಂಡಿಚೇರಿ ಪ್ರದೇಶಕ್ಕೆ ನುಸುಳಿಕೊಂಡರು; ಬ್ರಿಟಿಷರು ಅವರನ್ನು ಅಲ್ಲಿ ಬಂಧಿಸುವಂತಿರಲಿಲ್ಲ. ಹಿಂದಿನಿಂದಲೂ ಆಧ್ಯಾತ್ಮ ವಿಷಯಗಳಲ್ಲಿ ಆಸಕ್ತಿ ಹೊಂದಿದ್ದ ಅರವಿಂದೋ ಘೋಷ್ ಪಾಂಡಿಚೇರಿಯಲ್ಲಿ ಹಿಂದಿನ ದಾರಿಯನ್ನು ತ್ಯಜಿಸಿ ಸನ್ಯಾಸಿಯಾದರು; ಅಂತಿಮವಾಗಿ ಮಹಾಮಾನವ, ಮಹಾಯೋಗಿ ಹಾಗೂ ಮಹರ್ಷಿ ಅರವಿಂದೋ ಆದರು; ಜಗತ್ತಿಗೆ ಬೆಳಕು ತೋರಿಸುವ ದಾರಿದೀಪವಾದರು.

ಅರವಿಂದೋ ಘೋಷ್ ಬಂಗಾಳದ ಸಿರಿವಂತ ಸುಸಂಸ್ಕೃತ ಕುಟುಂಬದವರು. ಇಂಗ್ಲೆಂಡಿಗೆ ಹೋಗಿ ಆಗಿನ ಪ್ರತಿಷ್ಠಿತ ಇಂಡಿಯನ್ ಸಿವಿಲ್ ಸರ್ವಿಸ್ (ಐ.ಸಿ.ಎಸ್) ಪರೀಕ್ಷೆಗೆ ಕುಳಿತು ಉಚ್ಚ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದರು. ತಾಯ್ನಾಡಿಗೆ ಹಿಂತಿರುಗಿದ ಅವರು ಬರೋಡ ರಾಜ್ಯದಲ್ಲಿ ಉನ್ನತ ಹುದ್ದೆಯನ್ನೂ ಅಲಂಕರಿಸಿದ್ದರು. ಆದರೆ ಬಾಲ್ಯದಿಂದಲೂ ಬಂಗಾಳದ ಕ್ರಾಂತಿಕಾರಿಗಳ ಒಡನಾಟವಿದ್ದ ಅರವಿಂದರು ಗುಟ್ಟಾಗಿ ಬ್ರಿಟಿಷರ ವಿರುದ್ಧ ಕ್ರಾಂತಿಕಾರಿಗಳಿಗೆ ಸಹಾಯ ಮಾಡುವುದನ್ನು ಬಿಡಲಿಲ್ಲ. ಅಂತಿಮವಾಗಿ

ಸರ್ಕಾರೀ ಸೇವೆಯನ್ನು ತ್ಯಜಿಸಿ ಕ್ರಾಂತಿಕಾರಿ ರಾಜಕೀಯಕ್ಕೇ ಇಳಿದರು. ಬ್ರಿಟಿಷರನ್ನು ಟೀಕಿಸಿ ಕಟುವಾದ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಬಹಳ ಕಾಲ ಭೂಗತರಾಗಿದ್ದು ಕೊಂಡು ಪೊಲೀಸರಿಗೆ ಸಿಗುತ್ತಿರಲ್ಲಿಲ್ಲ. ಸದಾ ಅವರ ಬೇಟೆಯಲ್ಲಿರುತ್ತಿದ್ದ ಪೊಲೀಸರ ಕಣ್ತಪ್ಪಿಸಿ ಪಾಂಡಿಚೆರಿಗೆ ನುಸುಳಿದರು. ಅಲ್ಲಿ ಆಧ್ಯಾತ್ಮಿಕವಾಗಿ ಮೇರು ಸದೃಶ ಸಾಧನೆ ಅವರದ್ದಾಯಿತು. ಅವರ ಸಾಧನೆ, ಸಂದೇಶ, ಮಾರ್ಗದರ್ಶನಗಳು ಇತಿಹಾಸದ ಪುಟಗಳಲ್ಲಿ ಸೇರಿ ಹೋಗಿವೆ. ರಾಜಕೀಯದಲ್ಲೇ ಮುಂದುವರಿದಿದ್ದರೆ ಗಾಂಧೀ-ನೆಹರು ಮುಂತಾದವರಿಗೆ ಹೆಗಲೆಣೆಯಾಗುತ್ತಿದ್ದರು. ಆಧ್ಯಾತ್ಮಿಕವೇ ಅಲ್ಲದೆ ಸ್ವಾತಂತ್ರ್ಯ ಸಮರಕ್ಕೂ ಅವರು ಸಲ್ಲಿಸಿದ ಸೇವೆಯ ದ್ಯೋತಕವೆ ಸಂಸತ್ ಭವನದೆದುರು ಅವರ ಪ್ರತಿಮೆಗೆ ಕಾರಣವಿರಬೇಕು.

ಸಮಾಜದ ಇತರ ಕ್ಷೇತ್ರಗಳಲ್ಲೂ ಈ ತರಹೆಯ ಪರಿವರ್ತನೆಗೊಳಗಾದವರು ತೀರಾ ವಿರಳ. ಅಪರೂಪಕ್ಕೆ ಅಲ್ಲೊಬ್ಬರು ಇಲ್ಲೊಬ್ಬರು ಸಿಗಬಹುದು. ವೈಜ್ಞಾನಿಕ ಕ್ಷೇತ್ರದಲ್ಲಿ ಹೆಸರುಗಳಿಸಿದವರೊಬ್ಬರು ಇಂತ ಪರಿವರ್ತನೆಗೊಳಗಾದ ಜೀವನ ವೃತ್ತಾಂತವನ್ನು ತಿಳಿಸುವುದು ಈ ಕೃತಿಯ ಉದ್ದೇಶ. ರಷ್ಯಾದ ವ್ಲಾದಿಮಿರ್ ಹಾಫ್‌ಕಿನ್ ತಮ್ಮ ವಿದ್ಯಾರ್ಥಿದೆಸೆಯಲ್ಲಿ ಆರವಿಂದೋ ಘೋಷ್‌ರಂತೆ ಮಹಾನ್ ಕ್ರಾಂತಿಕಾರಿಯಾಗಿದ್ದವರು; ರಝಾರ್ ದೊರೆಯ ನಿರಂಕುಶ ರಾಜ್ಯಾಡಳಿತದ ವಿರುದ್ಧ ರಷ್ಯಾದ ಆಗಿನ ಕ್ರಾಂತಿಕಾರಿಗಳೊಡನೆ ಹೆಗಲೆಣೆಯಾಗಿ ಹೋರಾಟ ನಡೆಸಿದರು. ಸೆರೆವಾಸ, ವಿಶ್ವವಿದ್ಯಾಲಯದಿಂದ ಉಚ್ಛಾಟನೆ, ಅಂತಿಮವಾಗಿ ಬೇರೊಂದು ದೇಶಕ್ಕೆ ಕಣ್ತಪ್ಪಿಸಿ ನುಸುಳಿ ಹೋಗಲೂ ಬೇಕಾಯಿತು. ಅಂತಿಮವಾಗಿ ವಿದ್ಯಾರ್ಥಿದೆಸೆಯಲ್ಲಿ ಮನಸೆಳೆದಿದ್ದ ಜೀವಶಾಸ್ತ್ರದ ವಿಷಯಗಳಲ್ಲಿ ಹೆಚ್ಚಿನ ಆಸಕ್ತಿ ಮೂಡುತ್ತದೆ. ಆ ದಿಸೆಯಲ್ಲಿ ಸಂಶೋಧನೆಗಳತ್ತ ಅವರ ಜೀವಮಾನವೆಲ್ಲಾ ಮುಡಿಪಾಯಿತು. ಆ ಕಾಲದಲ್ಲಿ ಅತ್ಯಂತ ಮಾರಕ ಸಾಂಕ್ರಾಮಿಕ ವ್ಯಾಧಿಗಳೆಂದು ಕುಖ್ಯಾತಿ ಪಡೆದಿದ್ದ ಕಾಲರಾ ಮತ್ತು ಪ್ಲೇಗ್‌ಗಳ ವಿರುದ್ಧ ಕಾರ್ಯವೆಸಗುವ ಲಸಿಕೆಗಳನ್ನು ಕಂಡು ಹಿಡಿಯುವಲ್ಲಿ ಯಶಸ್ವಿಯಾದರು. ಆ ಕಾರ್ಯಗಳಲ್ಲಿ ತಮ್ಮ ಜೀವವನ್ನೇ ಪಣವಿಟ್ಟ ಧೀರೋದಾತ್ತ ವಿಜ್ಞಾನಿ ಹಾಫ್‌ಕಿನ್. ಅವರ ಜೀವಮಾನದ ಬಹುಭಾಗವನ್ನು ಭಾರತದ ಸೇವೆಯಲ್ಲೇ ಕಳೆದುದು ಒಂದು ವಿಶೇಷವೆ. ಆದರೆ ಜೀವನ ಸಂಜೆಯಲ್ಲಿ ಅವರ ಮೇಲೆ ವಿನಾಕಾರಣ ಸಲ್ಲದ ಅಪವಾದ ಹೊರಿಸಿ, ಕೆಲಸದಿಂದ ವಜಾ ಆಗಬೇಕಾದದ್ದು ಒಂದು ವಿಪರ್ಯಾಸವೇ ಸರಿ. ಆದರೂ ಹಾಫ್‌ಕಿನ್‌ರ ಕೀರ್ತಿ ಪತಾಕೆ ಶಾಶ್ವತವಾಗಿ ಹಾರಾಡುತ್ತಿದೆ. ಇತ್ತೀಚೆಗೆ ಭಾರತದಲ್ಲಿ ಪ್ಲೇಗ್ ಮಹಾಮಾರಿ ತಲೆದೋರಿದಾಗ ಮುಂಬಯಿಯಲ್ಲಿರುವ ಅವರ ಸ್ಮಾರಕವಾಗಿರುವ ಹಾಫ್‌ಕಿನ್ ಪ್ರಯೋಗಾಲಯದ ಲಸಿಕೆಯೇ ನಮ್ಮವರ ರಕ್ಷಣೆಗೆ ಬಂದದ್ದನ್ನು ಮರೆಯಲಾದೀತೇ? ಕಲ್ಲುಮುಳ್ಳುಗಳ ತೊಡಕಿನ ಹಾದಿಯಲ್ಲಿ ಪಯಣ ಮಾಡಿದ ವ್ಲಾದಿಮಿರ್ ಹಾಫ್‌ಕಿನ್ನರ ಜೀವನ ವೃತ್ತಾಂತ ವಿಜ್ಞಾನಿಗಳಿಗೆ ಆದರಲ್ಲೂ ಯುವಕರಿಗೆ ದಾರಿದೀಪವಾಗಬೇಕು.

೧

# ಬಾಲ್ಯ, ವಿದ್ಯಾಭ್ಯಾಸ-ಕ್ರಾಂತಿ ಪರ್ವ ಆರಂಭ

ವ್ಲಾದಿಮಿರ್ ಹಾಫ್‌ಕಿನ್ನರು ರಷ್ಯಾದ ಯೆಹೂದ್ಯ ಜನಾಂಗಕ್ಕೆ ಸೇರಿದವರು. ಅವರ ತಂದೆಯ ಹೆಸರು ಆರಾನ್ ವೂಲ್ಫೆ ಖಾವ್ಕಿನ್ (ಖಾವ್ಕಿನ್ ಪದ ರಷ್ಯಾ ಭಾಷೆಯಲ್ಲಿ ಹಾಫ್‌ಕಿನ್ ಎಂಬುದಕ್ಕೆ ಸರಿಸಮಾನ); ತಾಯಿ ರೋಸೆಲ್ಲೇ ಲ್ಯಾಂಡ್ ಬರ್ಗ್. ಶಿಕ್ಷಕ ವೃತ್ತಿಯ ಆರಾನ್ ಹಾಫ್‌ಕಿನ್ನರಿಗೆ ಆರು ಜನ ಮಕ್ಕಳು; ಅವರಲ್ಲಿ ಮೂರನೆಯವರೇ ವ್ಲಾದಿಮಿರ್. ಅವರಿಗೆ ಏಳು ವರ್ಷಗಳಾಗುವಷ್ಟರಲ್ಲೇ ತಾಯಿ ತೀರಿಕೊಂಡರು. ತಂದೆಗೆ ದೊಡ್ಡದಾದ ಕುಟುಂಬ ನಿರ್ವಹಣೆ ತುಂಬಾ ಕಷ್ಟವಾಗುತ್ತಿತ್ತು. ಸರ್ಕಾರೀ ಕೆಲಸದ ನಿಮಿತ್ತ ಬಹಳ ಸಮಯ ಪರ ಊರುಗಳಲ್ಲಿರ ಬೇಕಾಗುತ್ತಿತ್ತು. ವ್ಲಾದಿಮಿರ್‌ಗೆ ಮನೆಯಲ್ಲಿ ತಾಯಿ-ತಂದೆಗಳಿರದ ಒಬ್ಬಂಟಿ ಜೀವನ; ಜೊತೆಗೆ ತಾನೇ ಸಂಸಾರ ನಿರ್ವಹಿಸುವ ಜವಾಬ್ದಾರಿ ಕೂಡ. ದುಃಖತಪ್ತ ಬೇಸರದ ಜೀವನ ಎಳೆಯ ವಯಸ್ಸಿನಲ್ಲೇ ಅವರ ಬೆನ್ನು ಹತ್ತಿತು.

ಬಾಲಕ ವ್ಲಾದಿಮಿರ್‌ಗೆ ವಿದ್ಯಾಭ್ಯಾಸದಲ್ಲಿ ತೊಡಗಿಕೊಳ್ಳಬೇಕೆಂಬ ಅಪರಿಮಿತ ಉತ್ಸಾಹವಿತ್ತು. ಆದರೆ ಆರ್ಥಿಕವಾಗಿ ದುರ್ಬಲ ಸ್ಥಿತಿಯಲ್ಲಿದ್ದ ತಂದೆಗೆ ಎಲ್ಲಾ ಮಕ್ಕಳ ವಿದ್ಯಾಭ್ಯಾಸ ಮತ್ತು ಸಂಸಾರ ನಿರ್ವಹಣೆಗೆ ಹಣಕಾಸುಗಳನ್ನು ಒದಗಿಸುವುದು ದುಸ್ತರವಾಗಿತ್ತು. ವ್ಲಾದಿಮಿರ್‌ರ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯುವವರೆಗೂ ಅವರ ತಾಯಿಯ ತಂದೆ-ಅಜ್ಜ, ಸ್ವಲ್ಪ ಮಟ್ಟಿಗೆ ಹಣಕಾಸಿನ ಸಹಾಯ ಮಾಡಿದ್ದರು.

ವ್ಲಾದಿಮಿರ್‌ರ ಹೈಸ್ಕೂಲು ವಿದ್ಯಾಭ್ಯಾಸ ಅವರು ತಂದೆ ಉದ್ಯೋಗದಲ್ಲಿದ್ದ ಬರ್ಡಿಯಾನ್‌ಸ್ಕ ಎಂಬ ಊರಲ್ಲಿ ಮುಂದುವರಿಯಿತು. ಶಾಲೆಯ ಖರ್ಚಿಗೆ ತಂದೆ ಕೊಡುತ್ತಿದ್ದ ಕೆಲವು ಕೋಪೆಕ್‌ಗಳ ಜೊತೆಗೆ ಅವರ ಚಿಕ್ಕಪ್ಪ ಕೊಡುತ್ತಿದ್ದ ತಿಂಗಳಿಗೆ ಹತ್ತು ರೂಬೆಲ್‌ಗಳು ತುಂಬ ಸಹಾಯಕವಾದವು. ಕಷ್ಟ ಪಟ್ಟು ಓದುವುದು ವ್ಲಾದಿಮಿರ್‌ರ ಸ್ವಾಭಾವಿಕ ಗುಣವೇ ಆಗಿತ್ತು; ಅಲ್ಲಿನ ಪುಸ್ತಕ ಭಂಡಾರದಲ್ಲಿ ಅವರು ಸದಾ ತಲ್ಲೀನರಾಗಿರುವುದನ್ನು ನೋಡಬಹುದಾಗಿತ್ತು; ವಿಜ್ಞಾನದ ವಿಷಯಗಳಲ್ಲಿ ಅವರು ಹೆಚ್ಚು ಆಸಕ್ತಿ ಹೊಂದಿದ್ದರು; ಅದರಲ್ಲೂ ಪ್ರಕೃತಿ ವಿಜ್ಞಾನದ ವಿಷಯಗಳಿಗ ಹೆಚ್ಚಿನ ಗಮನ ಕೊಡುತ್ತಿದ್ದರು. ಪ್ರತಿಯೊಂದು ತರಗತಿಯಲ್ಲೂ ಉತ್ತಮ ದರ್ಜೆಯಲ್ಲೇ ತೇರ್ಗಡೆ

ಯಾಗುತ್ತಿದ್ದರು. ಬಿಡುವಿನ ಸಮಯಗಳಲ್ಲಿ ವ್ಯಾಯಾಮ-ಕಸರತ್ತುಗಳಲ್ಲಿ ತೊಡಗಿಸಿಕೊಂಡು ಒಳ್ಳೆಯ ದೇಹದಾರ್ಢ್ಯವನ್ನೂ ಸಹ ಪಡೆದುಕೊಂಡಿದ್ದರು.

ಪ್ರಕೃತಿ-ವಿಜ್ಞಾನ ವಿಷಯಗಳ ಬಗೆಗೆ ಒಲವಿದ್ದ ವ್ಲಾದಿಮಿರ್ ಆ ಬಗೆಗೆ ಉನ್ನತ ವ್ಯಾಸಂಗ ಮಾಡಲು ಒಡೆಸ್ಸಾ ವಿಶ್ವವಿದ್ಯಾಲಯಕ್ಕೆ ಸೇರಿಕೊಳ್ಳುವ ಅಭಿಲಾಷೆ ಹೊಂದಿದ್ದರು. ತಂದೆಯ ಆರ್ಥಿಕ ಪರಿಸ್ಥಿತಿ, ಬಡತನದ ಜೀವನದ ಬವಣೆಗಳಿದ್ದರೂ ಹೇಗೋ 1879ರಲ್ಲಿ ಆ ವಿಶ್ವವಿದ್ಯಾಲಯಕ್ಕೆ ಸೇರಿಕೊಂಡರು. ತಮ್ಮ ಬಿಡುವಿನ ಸಮಯಗಳಲ್ಲಿ ಕೆಳವರ್ಗದ ವಿದ್ಯಾರ್ಥಿಗಳಿಗೆ ಖಾಸಗಿ ಪಾಠಮಾಡುವುದರಿಂದ ಸ್ವಲ್ಪ ಹಣಗಳಿಸುತ್ತಿದ್ದರು; ಅಲ್ಲದೆ ಅವರ ಹಿರಿಯ ಮಲ-ಸಹೋದರನೊಬ್ಬನೂ ಆಗಾಗ್ಗೆ ಸಹಾಯ ಮಾಡುತ್ತಿದ್ದನು. ಮುಂದೆ ಕಾಲಾಂತರದಲ್ಲಿ (1884) ವಿಜ್ಞಾನದ ವಿಷಯದಲ್ಲಿ ಡಾಕ್ಟರ್ ಆಫ್‌ಸೈನ್ಸ್ ಪದವಿಯನ್ನು ಅತ್ಯುತ್ತಮ ದರ್ಜೆಯಲ್ಲಿ ತಮ್ಮದಾಗಿಸಿಕೊಂಡರು. ಆದರೆ ಅವರು ಅಲ್ಲಿ ವ್ಯಾಸಂಗನಿರತರಾಗಿದ್ದ ಸಮಯದಲ್ಲಿ ರಷ್ಯಾದ ಎಲ್ಲಾ ಕಡೆ ಝಾರ್ ದೊರೆಯ ದುರಾಡಳಿತದ ವಿರುದ್ಧ ಜರುಗುತ್ತಿದ್ದ ಕ್ರಾಂತಿಕಾರಿ ಚಳುವಳಿಯಲ್ಲಿಯೂ ಸಕ್ರಿಯವಾಗಿ ಭಾಗವಹಿಸಿ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು.

## ಕ್ರಾಂತಿ ಪರ್ವ

ವ್ಲಾದಿಮಿರ್ ಹಾಫ್‌ಕಿನ್ನರ ಜೀವನ ವೃತ್ತಾಂತವನ್ನು ಮುಂದುವರಿಸುವ ಮುನ್ನ ರಷ್ಯಾ ದೇಶದ ಆಗಿನ ಸಾಮಾಜಿಕ ಮತ್ತು ರಾಜಕೀಯ ಬೆಳವಣಿಗೆಗಳ ಬಗೆಗೆ ಸ್ವಲ್ಪ ಪರಿಚಯ ಉಚಿತವೆನಿಸುತ್ತದೆ.

ಏಷ್ಯಾ ಮತ್ತು ಯುರೋಪ ಖಂಡಗಳ ವಿಶಾಲ ಪ್ರದೇಶಗಳಲ್ಲಿ ರಷ್ಯಾ ಚಕ್ರಾಧಿಪತ್ಯ ಹರಡಿಕೊಂಡಿತ್ತು. ಶತಶತಮಾನಗಳಿಂದಲೂ ಝಾರ್‌ಮನೆತನದ ಚಕ್ರವರ್ತಿಗಳು ನಿರಂಕುಶ ಪ್ರಭುಗಳಾಗಿ ಮೆರೆಯುತ್ತಿದ್ದರು. ತಮ್ಮ ಐಷಾರಾಮ ಜೀವನಕ್ಕೆ ಅನುಕೂಲವಾಗಲು ಅಲ್ಲಿಯ ಸಂಪತ್ತನ್ನೆಲ್ಲಾ ಕೊಳ್ಳೆಹೊಡೆಯುತ್ತಿದ್ದರು. ತಮ್ಮ ಮನೆತನದ ಆಡಳಿತವನ್ನು ಉಳಿಸಿಕೊಳ್ಳಲು ಕ್ರೂರ ಹಾಗೂ ದಬ್ಬಾಳಿಕೆಯ ಆಡಳಿತ ನಡೆಸುವುದಕ್ಕೆ ಅವರು ಹೆಸರಾಗಿದ್ದರು. ದಾರಿದ್ರ್ಯ, ಬಡತನದ ಕಷ್ಟಕೋಟಲೆಗಳಿಂದ ಬೆಂದು ಬಸವಳಿಯುತ್ತಿದ್ದ ತಮ್ಮ ಪ್ರಜೆಗಳ ಜೀವನ ಕ್ರಮ ಅವರ ಮೇಲೆ ಯಾವ ಪರಿಣಾಮಗಳನ್ನೂ ಉಂಟುಮಾಡುತ್ತಿರಲಿಲ್ಲ. ಹಾಗಂತ ಜನಸಮೂಹ ಸುಮ್ಮನೆ ಸಹಿಸಿಕೊಂಡೂ ಇರುತ್ತಿರಲಿಲ್ಲ. ಆಗಾಗ್ಗೆ ದಂಗೆ, ಪ್ರತಿಭಟನೆ ಮತ್ತು ಚಳವಳಿಗಳು ನಡೆಯುತ್ತಲೇ ಇದ್ದವು. ಹಾಗೆ ಮುಂದುವರೆಯುತ್ತಿದ್ದ ದೌರ್ಜನ್ಯಗಳ ವಿರುದ್ಧ ನಡೆಯುತ್ತಿದ್ದ ಪ್ರತಿಭಟನೆಗಳ ಅಂತಿಮ ಪರಿಣಾಮವೇ ೧೯೧೭ರಲ್ಲಿ ಜರುಗಿದ ಮಹಾನ್ ಅಕ್ಟೋಬರ್ ಕ್ರಾಂತಿ. ಇಂತಹ ಅನ್ಯಾಯ ಅಸಮಾನತೆಗಳ ಹಿನ್ನಲೆಯಿಂದಲೇ ಜರ್ಮನಿಯ ಕಾರ್ಲ್‌ಮಾರ್ಕ್ಸ್ "ಸಮತಾವಾದ" ತತ್ವಗಳನ್ನು ಪ್ರತಿಪಾದಿಸಿದ್ದು. ರಷ್ಯಾದ ವಿ.ಐ.ಲೆನಿನ್ ಆ ತತ್ವಗಳನ್ನು

ಜಾರಿಗೆ ತಂದುದರ ಪರಿಣಾಮವೇ ಅಕ್ಟೋಬರ್ ಕ್ರಾಂತಿ. ಆದರಿಂದಲೇ ಝಾರ್ ದೊರೆಗಳ ಮನೆತನವೇ ನಿರ್ನಾಮವಾಯಿತು; ಸೋಸಿಯಲಿಸ್ಟ ಸೋವಿಯೇಟ್ ಗಣರಾಜ್ಯ ಉದಯವಾಯಿತು.

ವ್ಲಾದಿಮಿರ್ ಹಾಫ್‌ಕಿನ್ ಒಡೆಸ್ಸಾ ವಿಶ್ವವಿದ್ಯಾಲಯ ಸೇರಿಕೊಳ್ಳುವುದಕ್ಕೆ ಮೊದಲೇ ಬಹಳ ಕಾಲದಿಂದಲೂ ರಷ್ಯಾ ದೇಶದಾದ್ಯಂತ ಝಾರ್ ದೊರೆಗಳ ದುರಾಡಳಿತಗಳ ವಿರುದ್ಧ ಕ್ರಾಂತಿ ಕಿಡಿಗಳು ಆಗಾಗ್ಗೆ ಹತ್ತಿ ಉರಿಯುತ್ತಲೇ ಇದ್ದವು. ಆ ರೀತಿಯ ಅಶಾಂತ ಪರಿಸ್ಥಿತಿ ವಿಶ್ವವಿದ್ಯಾಲಯಗಳಲ್ಲೂ ಸಾಮಾನ್ಯವಾಗಿ ತಲೆದೋರುತ್ತಲೂ ಇದ್ದವು. ಅಂತಹ ಪರಿಸ್ಥಿತಿಗಳು ಉದ್ಭವಿಸಿದಾಗ ಹಾಫ್‌ಕಿನ್ ಅದರ ಸುಳಿಯಿಂದ ತಪ್ಪಿಸಿಕೊಳ್ಳಲಾಗುತ್ತಿರಲಿಲ್ಲ. ಮೊದಲೇ ಅವರಲ್ಲಿ ಸುಪ್ತವಾಗಿದ್ದ ಪ್ರತಿಭಟನಾ ಸ್ವಭಾವಕ್ಕೆ ಈಗ ನೀರೆರೆದು ಪೋಷಣೆ ಮಾಡಿದಂತಾಯಿತು. ಬಡ ವಿದ್ಯಾರ್ಥಿಯೆಂದು ವಿಶ್ವವಿದ್ಯಾಲಯದವರು ಒದಗಿಸುತ್ತಿದ್ದ ವಿನಾಯಿತಿಗಳನ್ನು ಹಿಂತೆಗೆದುಕೊಳ್ಳುವ ಸಾಧ್ಯತೆಗಳಿದ್ದರೂ ವ್ಲಾದಿಮಿರ್ ಕ್ರಾಂತಿಯ ಹಾದಿಯಿಂದ ಹಿಂದೆಗೆಯುತ್ತಿರಲಿಲ್ಲ; ವಿದ್ಯಾರ್ಥಿಗಳ ಪ್ರತಿಭಟನೆಯ ಕಾರ್ಯಕ್ರಮಗಳಲ್ಲಿ ಗುಟ್ಟಾಗಿ ಭಾಗವಹಿಸುತ್ತಿದ್ದರು.

ಒಡೆಸ್ಸಾ ವಿಶ್ವವಿದ್ಯಾಲಯ- ಇಂಪೀರಿಯಲ್ ನವೋರೋಸಿಸ್ಕ್ ವಿಶ್ವವಿದ್ಯಾಲಯ ಆ ಪ್ರದೇಶದಲ್ಲಿ ಒಂದು ಅತ್ಯುತ್ತಮ ಜ್ಞಾನ ದೇಗುಲವೆಂಬ ಖ್ಯಾತಿಪಡೆದಿತ್ತು. ಅಂತಹ ಒಂದು ವಿದ್ಯಾಸಂಸ್ಥೆ ಒಡೆಸ್ಸಾದಲ್ಲಿರುವುದು ಅಲ್ಲಿಯ ನಾಗರಿಕರಿಗೆ ಹೆಮ್ಮೆ ಪಡುವಂತಾಗಿತ್ತು. ಆ ನಗರದವರೇ ಅಲ್ಲದೆ ಸುತ್ತಮುತ್ತಲ ಪ್ರದೇಶಗಳವರು ಮತ್ತು ವಿವಿಧ ಜನಾಂಗದವರೂ ಸಹ ತಮ್ಮ ಮಕ್ಕಳನ್ನು ಒಳ್ಳೆಯ ನ್ಯಾಯವಾದಿಗಳಾಗಿಯೋ, ವೈದ್ಯರಾಗಿಯೋ ಶಿಕ್ಷಕರನ್ನಾಗಿಯೋ ಮಾಡಿಸಲು ಆ ವಿಶ್ವವಿದ್ಯಾಲಯಕ್ಕೆ ಸೇರಿಸುವುದಕ್ಕೆ ಹಾತೊರೆಯು ತ್ತಿದ್ದರು. ಪೋಲೆಂಡಿನವರು, ಆರ್ಮೇನಿಯನ್ನರು, ಜಾರ್ಜಿಯಾದವರು, ಮಾಲ್ಡೋವಿಯಾ ದವರು, ಬಲ್ಗೇರಿಯಾದ ಕಡೆಯವರೆಲ್ಲ ಅಲ್ಲಿ ಸೇರಿರುತ್ತಿದ್ದರು; ಯೆಹೂದಿ ಜನಾಂಗದವರು ಅದನ್ನು ಆರಿಸಿ ಬರುತ್ತಿದ್ದರು. ಹಾಗೆ ವಿವಿಧ ಮೂಲಗಳಿಂದ ಬಂದು ಅಲ್ಲಿ ಸೇರಿದ್ದ ವಿದ್ಯಾರ್ಥಿ ಸಮೂಹದವರಲ್ಲಿ ಆಗಾಗ್ಗೆ ಸಣ್ಣಪುಟ್ಟ ವಾಗ್ವಾದ, ತಿಕ್ಕಾಟ ಮತ್ತು ಗಲಭೆಗಳು ನಡೆಯುತ್ತಿದ್ದುದು ಸ್ವಾಭಾವಿಕವೆ. ಆದರೂ ಅಲ್ಲಿಯ ಕೆಲಸ ಕಾರ್ಯಗಳು ಸುಸೂತ್ರವಾಗಿಯೇ ನಡೆದುಕೊಂಡು ಹೋಗುತ್ತಿದ್ದುವು. ಆದರಿಂದ ನಾಗರೀಕರು ಅಲ್ಲಿಯ ಸಣ್ಣಪುಟ್ಟ ಗೊಂದಲಗಳ ಬಗೆಗೆ ವಿಚಲಿತರಾಗುತ್ತಿರಲಿಲ್ಲ.

ಆದರೆ ೧೮೮೧ರ ನವೆಂಬರ್ ೩೦ರಂದು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಮೂಹದಲ್ಲಿ ಭುಗಿಲೆದ್ದ ಗೊಂದಲ ಸರಕಾರದವರನ್ನೇ ಅಲ್ಲದೆ ಸಾರ್ವಜನಿಕರ ತೀವ್ರ ಗಮನ ಸೆಳೆಯಿತು. ಗಲಭೆಯ ವಾತಾವರಣ ಶುರುವಿಗೆ ವಿಶ್ವವಿದ್ಯಾಲಯದ ಕಾನೂನು ಕಾಲೇಜಿನ ವಿದ್ಯಾರ್ಥಿ ಸಮೂಹದಲ್ಲಿ ಮೊದಲಾಯಿತು. ಕಾನೂನು ಕಾಲೇಜಿನ ನ್ಯಾಯಶಾಸ್ತ್ರದ ಸಿದ್ಧಾಂತಗಳ ಬೋಧಕ ಪ್ರೊ : ಚಿಜೋವ್ ಅವರ ಬೋಧನಾ

ವಿಧಾನಗಳು ವಿದ್ಯಾರ್ಥಿಗಳಿಗೆ ಸರಿಹೋಗದಿದ್ದುದೇ ಅಂದಿನ ಅಶಾಂತಿಗೆ ಕಾರಣ ವಾದಂತಿತ್ತು. ಆ ವಿಷಯದ ಪಾಠಪ್ರವಚನಗಳನ್ನು ಬೋಧಿಸುವಲ್ಲಿ ಪ್ರೊ.ಚಿಜೋವ್ ಅಸಮರ್ಥರಾಗಿದ್ದರೆನ್ನುವುದು ಬಹುಜನ ವಿದ್ಯಾರ್ಥಿಗಳ ಅಭಿಪ್ರಾಯವಾಗಿತ್ತಂತೆ. ವಿಶ್ವವಿದ್ಯಾಲಯಗಳಂಥ ಸಂಸ್ಥೆಗಳಲ್ಲಿ ಅಂತಹ ಭಿನ್ನಾಭಿಪ್ರಾಯಗಳುಂಟಾಗುವುದು ಅಸಹಜವಲ್ಲ.

ಮೊದಲ ಮತ್ತು ಎರಡನೆಯ ಕಾನೂನು ತರಗತಿಗೆ ಸೇರಿದ ಸುಮಾರು ಅರವತ್ತು ವಿದ್ಯಾರ್ಥಿಗಳು ಕಾಲೇಜಿನ ಪಡಸಾಲೆಯ ತುದಿಯೊಂದರಲ್ಲಿ ಗುಂಪು ಸೇರಿ ಮೊದಲು ಗಲಾಟೆಯೆಬ್ಬಿಸಿದರು. ಪ್ರೊ : ಚಿ ಜೋವ್‌ರನ್ನು ಹುದ್ದೆಯಿಂದ ವಜಾ ಮಾಡಬೇಕೆಂಬುದು ಅವರಪ್ರಮುಖ ವಾದವಾಗಿತ್ತು. ಕೆಲವು ಅಧ್ಯಾಪಕ ವರ್ಗದವರು ಅಲ್ಲಿಗೆ ಬಂದು ವಿದ್ಯಾರ್ಥಿಗಳನ್ನು ಸಮಾಧಾನಪಡಿಸಲು ಪ್ರಯತ್ನಿಸಿದರು; ಅವರೆಲ್ಲರ ಗೌರವಾದರಗಳಿಗೆ ಪಾತ್ರರಾದ ಕಾಲೇಜಿನ ಡೀನ್‌ರು ಸಹಾ ಅಲ್ಲಿಗೆ ಬಂದು ಸಾಂತ್ವನಗೊಳಿಸಲು ನೋಡಿದರು. ಅವಾವುದಕ್ಕೂ ವಿದ್ಯಾರ್ಥಿಗಳು ಮಣಿಯಲಿಲ್ಲ. ಡೀನ್‌ರ ಹಿತವಾದಗಳನ್ನು ಧಿಕ್ಕರಿಸಿ ಚಪ್ಪಾಳೆ ತಟ್ಟಿ, ಸೀಟಿ ಹಾಕಿ ಆಬ್ಬರದ ದನಿಯಲ್ಲಿ ಗಲಾಟೆಯನ್ನು ಮುಂದುವರಿಸಿದರು. ಬೇಸತ್ತ ಅದ್ಯಾಪಕ ವೃಂದದವರು ವಿದ್ಯಾರ್ಥಿ ಮುಖಂಡರನ್ನು ದಂಡಿಸುವ ಸಲುವಾಗಿ ಕೆಲವರ ಹೆಸರನ್ನು ಪಟ್ಟಿಮಾಡಿಕೊಂಡರೂ ಅವರಾರೂ ವಿಚಲಿತರಾಗಲಿಲ್ಲ.

ಮೇಲ್ನೋಟಕ್ಕೆ ಪ್ರೊ: ಚಿಜೋವ್ ಪ್ರಕರಣ ಅಂದಿನ ಗಲಾಟೆಗಳಿಗೆ ಕಾರಣವೆನಿಸುವಂತಿದ್ದರೂ, ವಾಸ್ತವವಾಗಿ ಅದೇ ನಿಜವಾದ ಕಾರಣವಾಗಿರಲಿಲ್ಲ. ವಿಶ್ವವಿದ್ಯಾಲಯದ ಅಧ್ಯಾಪಕ ವರ್ಗಗಳ ನಡುವೆಯೂ ರಾಜಕೀಯ ಭಿನ್ನಾಭಿಪ್ರಾಯ ಗಳಿದ್ದವು. ಅವು ಒಂದೊಂದು ಸಾರಿ ಯಾವುದೋ ಕ್ಷುಲ್ಲಕ ಕಾರಣಗಳಿಂದಾಗಿ ಭುಗಿಲೆದ್ದು ಅಲ್ಲಿಯ ಶಾಂತ ವಾತಾವರಣವನ್ನು ಕದಡಿಸುತ್ತಿದ್ದವು; ಅದು ವಿದ್ಯಾರ್ಥಿವೃಂದಕ್ಕೂ ಒಂದೊಂದು ಸಾರಿ ಹರಡುತ್ತಿದ್ದುದು ಅಪರೂಪವಾಗೇನೂ ಇರಲಿಲ್ಲ. ಈ ಸಾರಿ ಗೆರ್ಟ್ಸ್‌ಸ್ಟೆನ್‌ಸ್ಟೆಯ್ನ್ ಎಂಬ ವಿದ್ಯಾರ್ಥಿಯ ಪ್ರಬಂಧವೊಂದರ ಯೋಗ್ಯತೆಯನ್ನು ನಿರ್ಣಯಿ ಸುವುದರಲ್ಲುಂಟಾದ ಭಿನ್ನಾಭಿಪ್ರಾಯವೇ ಈ ಗಲಭೆಯ ಕಾರಣವಾಗಿತ್ತೆನ್ನಲಾಗಿದೆ.

ಗೆರ್ಟ್ಸ್‌ಸ್ಟೆನ್‌ಸ್ಟೆಯ್ನ್, ಒಬ್ಬ ಪ್ರತಿಭಾವಂತ ವಿದ್ಯಾರ್ಥಿ. ಸ್ನಾತಕೋತ್ತರ ಪದವಿ ಗಳಿಸಲೋಸುಗ ವಿದ್ವತ್‌ಪೂರ್ಣ ಮಹಾ ಪ್ರಬಂಧವೊಂದನ್ನು ವಿಶ್ವವಿದ್ಯಾಲಕ್ಕೆ ಸಲ್ಲಿಸಿದ್ದ. ಆ ಪ್ರಬಂಧವನ್ನು ಪರಿಶೀಲಿಸಿದ ರಾಜಕೀಯ ಅರ್ಥಶಾಸ್ತ್ರದ ಪ್ರಾಧ್ಯಾಪಕರಾದ ಪ್ರೊ:ಪೋಸ್ನಿಕೋವ್ ಅದನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಅವನಿಗೆ ಸ್ನಾತಕೋತ್ತರ ಪದವಿಯನ್ನು ನೀಡಬಹುದೆಂದೂ ಶಿಫಾರಸ್ಸು ಸಹಾ ಮಾಡಿದ್ದರು. ವಿದ್ಯಾರ್ಥಿ ಸಮೂಹದಲ್ಲಿ ಪ್ರೊ: ಪೋಸ್ನಿಕೋವ್ ತುಂಬಾ ಜನಪ್ರಿಯತೆ ಗಳಿಸಿಕೊಂಡಿದ್ದವರು. ಆದರೆ ಡೀನ್ ಪಟ್ಲಾಯೇವಸ್ಕಿಯವರು ಆ ಪ್ರಬಂಧದಲ್ಲಿ ರಾಜದ್ರೋಹಾತ್ಮಕವಾದ ಕೆಲವು ಆಕ್ಷೇಪಾರ್ಹ ವಿಷಯಗಳಿವೆಯೆಂದು ಅದನ್ನು ವಿರೋಧಿಸಿದರು. ವಿದ್ಯಾರ್ಥಿಗೆ ಅದರಿಂದ

ಸ್ನಾತಕೋತ್ತರ ಪದವಿಯನ್ನು ನೀಡುವುದಕ್ಕೆ ತಮ್ಮ ಸಮ್ಮತಿ ನೀಡಲಿಲ್ಲ. ಡೀನ್‌ರು ಪ್ರತಿಭಾವಂತ ವಿದ್ಯಾರ್ಥಿಯೊಬ್ಬನಿಗೆ ಅನ್ಯಾಯವೆಸಗುತ್ತಿದ್ದಾರೆಂಬ ಭಾವನೆ ವಿದ್ಯಾರ್ಥಿ ಸಮೂಹದಲ್ಲಿ ಉಂಟಾಯಿತು. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಅವರು ವಿದ್ಯಾರ್ಥಿಗಳ ರಾಜಕೀಯ ಚಟುವಟಿಕೆಗಳ ಬಗೆಗೆ ಪೊಲೀಸರಿಗೆ ಗುಪ್ತ ವರದಿ ನೀಡುತ್ತಾರೆಂಬ ಗುಮಾನಿಗಳೂ ಇದ್ದವು. ಆದುದರಿಂದ ಚಿಜೋವ್ ಪ್ರಕರಣ ವಿದ್ಯಾರ್ಥಿ ಸಮೂಹದಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಸುಪ್ತವಾಗಿದ್ದ ಅಸಮಾಧಾನ ಭುಗಿಲೆಂದು ಹತ್ತಿಕೊಂಡಿತು

ಈ ಸಾರಿ ವಿಶ್ವವಿದ್ಯಾಲಯದಲ್ಲುಂಟಾದ ಕ್ಷೋಭೆಯ ವಿಷಯ ಬಹುಬೇಗ ಸಾರ್ವಜನಿಕರ ಗಮನ ಸೆಳೆಯಿತು. ಅವರಲ್ಲಿ ಕೆಲವರು ಭಾವೋದ್ರೇಕಕ್ಕೊಳಗಾದರು. ಹಲವರು ಡೀನ್‌ರ ನಿಲುವನ್ನು ಸಮರ್ಥಿಸಿದರೆ, ಮತ್ತೆ ಕೆಲವರು ವಿದ್ಯಾರ್ಥಿಗಳ ಪರವಹಿಸಿದರು. ಒಂದು ಹಂತದಲ್ಲಿ ವಿದ್ಯಾರ್ಥಿಗಳ ನಿಲುವನ್ನು ಎದುರಿಸಲಾಗದೆ ಡೀನರೇ ತಮ್ಮ ನಿಲುವನ್ನು ಬದಲಾಯಿಸಿಕೊಂಡು ಹಿಂದೆಗೆಯಬೇಕಾಯಿತು! ಈ ಎಲ್ಲಾ ವಿಷಯಗಳನ್ನು ಒಡೆಸ್ಸಾ ನಗರದ ಗೌವರ್ನರ್ ಜನರಲ್‌ರು ಪೊಲೀಸ್ ಇಲಾಖೆಯ ಮುಖ್ಯಸ್ಥರಾದ ಕರ್ನಲ್ ಪರ್ಷಿನ್‌ರು ವಿಚಾರಣೆ ಮಾಡಿ ವರದಿ ಸಲ್ಲಿಸುವಂತೆ ಆದೇಶ ನೀಡಿದರು.

''ಒಡೆಸ್ಸಾ ನಗರದಲ್ಲಿ ಕೆಲ ಸಮಯದಿಂದ ಕಂಡು ಬರುತ್ತಿರುವ ಸಾಮಾಜಿಕ ಕ್ಷೋಭೆ ಮತ್ತು ಕ್ರಾಂತಿಕಾರಕ ವಾತಾವರಣದ ಪ್ರಭಾವಗಳು ವಿಶ್ವವಿದ್ಯಾಯಲಯದ ''ಗೋಡೆ''ಗಳ ಮೂಲಕ ಒಸರುತ್ತಿದ್ದುದೇ ಅಲ್ಲಿನ ಅಶಾಂತತೆಗೂ ಕಾರಣವಾಗುತ್ತಿದೆ ಯೆಂದು ಪೋಲಿಸ್‌ಮುಖ್ಯಾಧಿಕಾರಿಗಳು ವರದಿ ಮಾಡಿದರು. ಅವರು ಮುಂದು ವರಿದು-ಡೀನ್ ಪಟ್ಲಾಯೇ ವಸ್ಕಿಯವರು ಎದುರಿಸುತ್ತಿರುವುದು ಈ ಸೆಣಸಾಟಗಳ ಪರಿಣಾಮಗಳನ್ನೇ; ಬೋಧಕ ವರ್ಗದವರಲ್ಲೂ ಸೈದ್ಧಾಂತಿಕವಾಗಿ ಪರಸ್ಪರ ವಿರೋಧಾಭಿಪ್ರಾಯಗಳಿರುವ ಎರಡು ಗುಂಪುಗಳಾಗಿವೆ; ಸಾರ್ವಜನಿಕರು ಮತ್ತು ಕೆಲವು ಅಧಿಕಾರಿಗಳು ಒಂದು ಬೋಧಕ ವರ್ಗವನ್ನು ಬೆಂಬಲಿಸಿದರೆ, ಇನ್ನೊಂದು ವರ್ಗದವರು ಬೋಧಕರು ಮತ್ತು ವಿದ್ಯಾರ್ಥಿಗಳ ಮತ್ತೊಂದು ಗುಂಪನ್ನು ಬೆಂಬಲಿಸುತ್ತಿದ್ದಾರೆ; ಈ ಸನ್ನಿವೇಶದ ದುರುಪಯೋಗ ಪಡಿಸಿಕೊಂಡು ವಿದ್ಯಾರ್ಥಿಗಳನ್ನು ವ್ಯವಸ್ಥೆಯ ವಿರುದ್ಧ ಎತ್ತಿಕಟ್ಟುವ ಪ್ರವೃತ್ತಿ ಚಿಗುರೊಡೆದು ಬೆಳೆಯಲಾರಂಭಿಸಿದೆ. ಅವರೆಲ್ಲಾ ಸರ್ಕಾರದ ಧ್ಯೇಯೊದ್ದೇಶಗಳ ವಿರುದ್ಧ ಕಾರ್ಯ ವೆಸಗುತ್ತಿದ್ದಾರೆ; ಪರಿಸ್ಥಿತಿ ಹೀಗೆಯೇ ಮುಂದು ವರಿದರೆ ಚಳವಳಿ ಬೃಹದಾಕಾರ ತಳೆಯಬಲ್ಲುದು'' ಎಂದು ಮುಂತಾಗಿ ವರದಿ ಮಾಡಿದ್ದರು. ಜೊತೆಗೆ ಪೊಲೀಸ್ ಮುಖ್ಯಾಧಿಕಾರಿಗಳು ಆ ಚಳುವಳಿಯ ಮುಂಚೂಣಿ ಯಲ್ಲಿರುವ ಸಾರ್ವಜನಿಕರೇ ಅಲ್ಲದೆ ವಿಶ್ವವಿದ್ಯಾಲಯದ ಘನತೆವೆತ್ತ ಹಲವು ಪ್ರಾಧ್ಯಾಪಕರ ಹೆಸರುಗಳನ್ನು ಪಟ್ಟಿ ಮಾಡಿದ್ದರು; ಚಳುವಳಿಯಲ್ಲಿ ಭಾಗವಹಿಸುತ್ತಿದ್ದ ಹಲವು ವಿದ್ಯಾರ್ಥಿಗಳ ಹೆಸರುಗಳನ್ನೂ ಪಟ್ಟಿಯಲ್ಲಿ ಸೇರಿಸಿದ್ದರು.

ಕರ್ನಲ್ ಪರ್ಷಿನ್‌ರವರದಿ ವಿಶ್ವವಿದ್ಯಾಲಯದ ನ್ಯಾಯಮಂಡಳಿಯ ಪರಿಶೀಲನೆಗೊಳಗಾಯಿತು. ಹದಿನೇಳುಮಂದಿ ವಿದ್ಯಾರ್ಥಿಗಳು ತಪ್ಪಿತಸ್ಥರೆಂದು ಗುರುತಿಸಿ, ಅವರಿಗೆ ಶಿಕ್ಷೆ ವಿಧಿಸಬೇಕೆಂದು ನ್ಯಾಯಮಂಡಳಿ ತೀರ್ಪುನೀಡಿತು; ಗಲಭೆಯನ್ನು ಪ್ರಚೋದಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದರೆನ್ನಲಾದ ಮೂವರು ವಿದ್ಯಾರ್ಥಿಗಳನ್ನು ವಿಶ್ವವಿದ್ಯಾಲಯದಿಂದ ಉಚ್ಚಾಟಿಸಿ ಹೊರಗೆ ಹಾಕಬೇಕೆಂದು ಅದು ಶಿಫಾರಸ್ಸು ಮಾಡಿತ್ತು. ಅವರಲ್ಲಿ ಪ್ರಕೃತಿ ವಿಜ್ಞಾನ ವಿಷಯದ ಎರಡನೆ ತರಗತಿಯ ವಿದ್ಯಾರ್ಥಿ ವ್ಲಾದಿಮಿರ್ ಹಾಫ್‌ಕಿನ್ ಒಬ್ಬರಾಗಿದ್ದರು!

ವ್ಲಾದಿಮಿರ್ ಹಾಫ್‌ಕಿನ್ನರಿಗೆ ಆಗಿನ್ನೂ ಇಪ್ಪತ್ತೊಂದು ವರುಷ. ನೀಳಕಾಯದ, ಕಿರಿದಾದ ಭುಜಗಳ ಮಂದಸ್ಮಿತ ಹಸುಗೂಸಿನಂತೆ ವ್ಲಾದಿಮಿರ್ ಕಾಣಿಸುತ್ತಿದ್ದರಂತೆ. ಅಂತಹ ಯುವಕನೊಬ್ಬ ಗಲಭೆ-ಗಲಾಟೆಗಳಂತ ಕ್ರಾಂತಿಕಾರಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾನೆಂಬುದನ್ನು ಯಾರೂ ನಂಬುವಂತಿರಲಿಲ್ಲ. ಎಳೆಯ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡಿದ್ದ ಅವರು ಸದಾ ಮೌನಿಯಾಗಿರುತ್ತಿದ್ದರು. ಯಾವಾಗಲೂ ಏಕಾಂಗಿಯಾಗಿಯೇ ಕಾಲ ಕಳೆಯುತ್ತಿದ್ದರು; ಜ್ಞಾನಾರ್ಜನೆಗಾಗಿ ಪುಸ್ತಕಗಳ ಅಭ್ಯಾಸದಲ್ಲಿ ನಿರಂತರವಾಗಿ ತೊಡಗಿರುತ್ತಿದ್ದರು. ಅವರ ಇಂತಹ ಗುಣ ಲಕ್ಷಣಗಳನ್ನು ಗಮನಿಸುತ್ತಿದ್ದ ಒಡೆಸ್ಸಾ ನಗರದ ಆಡಳಿತಾಧಿಕಾರಿ ವ್ಲಾದಿಮಿರ್ ಒಬ್ಬ ಸಭ್ಯ ವಿದ್ಯಾರ್ಥಿ ಹಾಗೂ ವಿಧೇಯ ನಾಗರಿಕ ಎಂದು ಪ್ರಶಸ್ತಿ ಪತ್ರವನ್ನೂ ನೀಡಿದ್ದರಂತೆ!

ಆದರೆ ವ್ಲಾದಿಮಿರ್‌ರಂಥವರ ಅಂತರ್ಯದಲ್ಲಿ ಯಾವ ಭಾವನೆಗಳಿರುತ್ತಿದ್ದವೆಂದು ತಿಳಿಯುವುದು ಅಷ್ಟು ಸುಲಭವಲ್ಲ. ಯಾರಿಗೂ ತಿಳಿಯದ ರೀತಿಯಲ್ಲಿ ಅವರು ಕ್ರಾಂತಿಕಾರಿ ದಳವನ್ನು ಸೇರಿಕೊಂಡಿದ್ದರು; ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಗುಟ್ಟಾಗಿ ಕೆಲಸಾರಿ ಭಾಗವಹಿಸುತ್ತಲೂ ಇದ್ದರು; ಆದರೂ ಪೊಲೀಸರ ಕಣ್ಣಿಗೆ ಬೀಳದಂತೆ ಎಚ್ಚರ ವಹಿಸುತ್ತಿದ್ದರು; ಅವರ ಕಡತಗಳಲ್ಲಿ ದಾಖಲೆಯಾಗಲಿಲ್ಲ; ಇಲ್ಲವೇ ಯಾವುದೇ ಸಂದರ್ಭಗಳಲ್ಲಿ ನ್ಯಾಯಾಲಯಗಳಲ್ಲಿ ಶಿಕ್ಷೆಗೊಳಗಾಗಿ ಇರಲಿಲ್ಲ.

ಬರ್ಡಿಯಾನ್‌ಸ್ಕನ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗಲೇ ಪ್ರಕೃತಿ-ವಿಜ್ಞಾನ ವಿಷಯಗಳ ಬಗೆಗೆ ವ್ಲಾದಿಮಿರ್‌ರಲ್ಲಿ ಆಸಕ್ತಿಯುಂಟಾಗಿತ್ತು. ಒಡೆಸ್ಸಾ ವಿಶ್ವವಿದ್ಯಾಲಯವನ್ನು ಸೇರಿದ ನಂತರವಂತೂ ಆ ಬಗೆಗಿನ ಒಲವು ಚಿಗುರೊಡೆದು ಹೆಮ್ಮರವಾಗಿ ಬೆಳೆಯಲಾರಂಭಿಸಿತ್ತು.ಅಲ್ಲಿ ಪ್ರಾಣಿಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಮೆಕ್ನಿಕೋವ್ ಅವರ ಗಮನ ಇವರ ಮೇಲೆ ಹರಿಯುವಂತಾಯಿತು. ಅವರು ನಡೆಸುತ್ತಿದ್ದ ಪಾಠಪ್ರವಚನ, ಪ್ರದರ್ಶಿಸುತ್ತಿದ್ದ ಶಿಷ್ಯವಾತ್ಸಲ್ಯಗಳೆಲ್ಲಾ ವ್ಲಾದಿಮಿರ್ ಮೇಲೆ ತುಂಬಾ ಪ್ರಭಾವ ಬೀರಿತು. ಬರುಬರುತ್ತಾ ಅವರು ತಮ್ಮ ಹೆಚ್ಚಿನ ಸಮಯವನ್ನೆಲ್ಲಾ ಮೆಕ್ನಿಕೋವ್ ಜೊತೆ ಅವರ ಪ್ರಯೋಗಾಲಯದಲ್ಲೇ ಕಳೆಯಲಾರಂಭಿಸಿದರು; ಮೆಕ್ನಿಕೋವ್ ಅವರ ಆರಾಧ್ಯ ದೈವವೇ ಆಗಿಬಿಟ್ಟರು. ಪ್ರಾಣಿಶಾಸ್ತ್ರದ ವಿಷಯದಲ್ಲೂ ಅವರಲ್ಲಿ ಹೆಚ್ಚಿನ ಆಸಕ್ತಿ ಕುದುರ

ಲಾರಂಭಿಸಿತು. ಪ್ರೊ : ಮೆಕ್ನಿಕೋವ್ ಪ್ರಾಣಿಶಾಸ್ತ್ರದ ಅಧ್ಯಯನ ಮತ್ತು ಸಂಶೋಧನೆಗಳಿಗಾಗಿ ಆಗಾಗ್ಗೆ ಪ್ರಯಾಣ ಬೆಳಸುತ್ತಿದ್ದ ಕಡೆಗಳಿಗೆಲ್ಲಾ ವ್ಲಾದಿಮಿರ್‌ರನ್ನು ಕರೆದುಕೊಂಡು ಹೋಗುವುದು ವಾಡಿಕೆಯಾಯಿತು. ಮುಂದೆ ಅವರೊಬ್ಬ ಉತ್ತಮ ಪ್ರಾಣಿಶಾಸ್ತ್ರಜ್ಞರಾಗುವ ಸೂಚನೆಗಳು ಆಗ ಕಂಡು ಬರುತ್ತಿದ್ದವಂತೆ. ಸಮುದ್ರದಲ್ಲಿನ ಒಂದು ಬಗೆಯ ಮಿಣಿಜೀವಿಗಳ ಬಗ್ಗೆ ಹೆಚ್ಚಿನ ಸಂಶೋಧನೆಗಳನ್ನು ನಡೆಸುವ ಅಭಿಲಾಷೆ ಅವರಲ್ಲಿ ಆಗಲೇ ಉಂಟಾಗಿದ್ದು.

ಅಷ್ಟೆಲ್ಲಾ ಆಶೆ ಆಕಾಂಕ್ಷೆಗಳ ಕನಸು ಕಾಣುತ್ತಿದ್ದ ವ್ಲಾದಿಮಿರ್ ಹಾಫ್‌ಕಿನ್ನರ ಭವಿಷ್ಯ ನುಚ್ಚುನೂರಾಗುವ ಹಂತ ೧೮೮೧ರ ನವೆಂಬರ್‌ನಲ್ಲಿ ವಿಶ್ವವಿದ್ಯಾಲಯದಲ್ಲಿ ಜರುಗಿದ ಗಲಭೆಗಳ ಸಮಯದಲ್ಲಿ ಗೋಚರವಾಗುವಂತಿದ್ದವು.

## ಪ್ರೊ: ಮೆಕ್ನಿಕೋವರ ಪ್ರಭಾವ

ಹಾಫ್‌ಕಿನ್ನರೂ ಸೇರಿದಂತೆ ಮೂವರು ವಿದ್ಯಾರ್ಥಿಗಳನ್ನು ವಿಶ್ವವಿದ್ಯಾಲಯದಿಂದ ಹೊರಹಾಕುವ ಸುದ್ದಿ ಹೊರಬರುತ್ತಿದ್ದಂತೆಯೇ ಇತರ ವಿದ್ಯಾರ್ಥಿಗಳ ರೋಷ ಉಕ್ಕಿ ಹರಿಯಿತು. ವಿಶ್ವವಿದ್ಯಾಲಯದ ಸಭಾಂಗಣದಲ್ಲಿ ನೂರಾರು ವಿದ್ಯಾರ್ಥಿಗಳು ಸಭೆ ಸೇರಿ ಆಡಳಿತಾಧಿಕಾರಿಗಳ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸಿದರು. ಆ ಸಭೆ ಹಲವಾರು ಗಂಟೆಗಳು ಮುಂದುವರಿದರೂ ಮುಗಿಯುವಂತಿರಲಿಲ್ಲ. ವಿದ್ಯಾರ್ಥಿಗಳ ದೃಢ ನಿಲುವು ಅಲ್ಲಿಯ ಪ್ರಾಧ್ಯಾಪಕರೆಲ್ಲರ ಸಹಾನುಭೂತಿ ಪಡೆಯುವಲ್ಲಿ ಯಶಸ್ವಿಯಾಯಿತು. ವಿಶ್ವವಿದ್ಯಾಲಯದ ಅಕೆಡಮಿಕ್ ಕೌನ್ಸಿಲ್ ಸಭೆ ಸೇರಿ ವಿದ್ಯಾರ್ಥಿಗಳನ್ನು ಹೊರಹಾಕುವ ಆದೇಶವನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂಬ ಬಹುಮತದ ನಿರ್ಣಯ ಮಾಡಿತು.

ಪ್ರಾಧ್ಯಾಪಕ ವರ್ಗದವರ ಈ ಬಗೆಯ ವರ್ತನೆ ಪೊಲೀಸ್ ಇಲಾಖೆಯವರ ಗಮನ ಸೆಳೆಯಿತು. ಮುಂದೆ ಅವರ ಕಾರ್ಯಕಲಾಪಗಳ ಬಗೆಗೆ ಹೆಚ್ಚಿನ ನಿಗಾ ಇಡಲಾರಂಭಿಸಿದರು. ಪ್ರತಿಯೊಬ್ಬ ಪ್ರಾಧ್ಯಾಪಕರ ಬಗೆಗೂ ವೈಯಕ್ತಿಕ ದಾಖಲಾತಿಯ ಕಡತಗಳನ್ನು ಇಟ್ಟರು. ವಿಷಯ ಶಿಕ್ಷಣ ಮಂತ್ರಿಗಳ ಗಮನಕ್ಕೂ ಬಂದಿತು. ಅವರಿಗೂ ಪ್ರಾಧ್ಯಾಪಕರುಗಳ ವರ್ತನೆ ವಿಶ್ವವಿದ್ಯಾಲಯದ ಏಳಿಗೆಯ ದೃಷ್ಟಿಯಿಂದ ಹಿತಕರವಾದುದಲ್ಲವೆನಿಸಿತು. ಅವರೆಲ್ಲಾ ಮುಂದೆ ಸಭ್ಯರೀತಿಯಲ್ಲಿ ವರ್ತಿಸಬೇಕೆಂದು ಎಚ್ಚರಿಕೆ ಇತ್ತರು!

ಇಷ್ಟೆಲ್ಲಾ ಜರುಗುತ್ತಿದ್ದರೂ, ವಿದ್ಯಾರ್ಥಿಗಳ ನಡತೆಯ ಬಗೆಗೆ ಜರುಗಿದ ವಿಚಾರಣೆಗಳ ಸಂದರ್ಭದಲ್ಲಿ ಹಾಫ್‌ಕಿನ್‌ರ ಬಗೆಗೆ ಒಳ್ಳೆಯ ಅಭಿಪ್ರಾಯಗಳೇ ಮೂಡಿಬಂದವಂತೆ. ಸ್ವತಃ ಪ್ರೊ: ಮೆಕ್ನಿಕೋವ್ ಅವರೇ ಮುತುವರ್ಜಿವಹಿಸಿ ಅವರನ್ನು ಮತ್ತೆ ತರಗತಿಗಳಿಗೆ ಸೇರಿಸುವ ಶಿಫಾರಸ್ಸು ಮಾಡಿದರು; ಅದರಂತೆ ನಿರ್ಣಯವೂ ಆಯಿತು. ಆದರೆ ಅವರನ್ನು ಸೇರಿಸಿಕೊಳ್ಳುವ ಮೊದಲು ಕೆಲವು ಷರತ್ತುಗಳನ್ನು ವಿಧಿಸಲಾಯಿತು.

ವ್ಲಾದಿಮಿರ್ ಮುಂದೆ ವಿಶ್ವವಿದ್ಯಾಲಯದ ಕಾನೂನು ಕಟ್ಟಲೆಗಳಿಗೆ ಬಾಧ್ಯರಾಗಿರಬೇಕು; ಮತ್ತೆ ಇಂತಹ ಪ್ರಕರಣಗಳಲ್ಲಿ ಭಾಗಿ ಆದದ್ದು ಕಂಡು ಬಂದರೆ ವಿಶ್ವವಿದ್ಯಾಲಯದಿಂದ ಹೊರ ಹಾಕುವಲ್ಲಿ ಅವರು ಪ್ರತಿಭಟಿಸುವಂತಿಲ್ಲ. ಹಾಫ್‌ಕಿನ್ ಆ ರೀತಿಯಲ್ಲಿ ಮುಚ್ಚಳಿಕೆ ಬರೆದುಕೊಟ್ಟು ತರಗತಿಗಳಿಗೆ ಹಾಜರಾದರು.

ಹಾಫ್‌ಕಿನ್ನರಿಗೆ ೧೮೮೩ರ ಜನವರಿ ಏಳರಂದು ಮೆಟ್ರಿಕ್ಯುಲೇಷನ್ ಸರ್ಟಿಫಿಕೇಟ್ ದೊರೆಯಿತು. ಅದರಿಂದಾಗಿ ಪ್ರಯೋಗಾಲಯಗಳಿಗೆ ಹಾಜರಾಗುವ ಅರ್ಹತೆ ದೊರೆತಂತಾಯಿತು; ಹಾಗೂ ತಾವು ನಿಯೋಜಿಸಿಕೊಂಡ ಪ್ರಯೋಗಗಳಲ್ಲಿ ತೊಡಗಿಸಿಕೊಂಡರು. ಯಥಾಪ್ರಕಾರ ಬಡ ವಿದ್ಯಾರ್ಥಿಗಳಿಗೆ ಮೀಸಲಾದ ಅಡಿಗೆ ಮನೆಯ ಅಗ್ಗದ ಊಟದ ಸೌಲಭ್ಯ ಮುಂದುವರಿಯಿತು. ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲವೆಂದು ಮುಚ್ಚಳಿಕೆ ಬರೆದುಕೊಟ್ಟಿದ್ದರೂ ನರೋದ್ನಾಯ ವೋಲ್ಯಾ ಪಾರ್ಟಿಯು ತಮಗೆ ನಿಯಮಿಸಿದ ದೈನಂದಿನ ಕೆಲಸ ಕಾರ್ಯಗಳೇ ಅಲ್ಲದೆ ಅದರ ಕ್ರಾಂತಿಕಾರೀ ವಿಷಯಗಳ ಅಭ್ಯಾಸ ಕೂಟಗಳಲ್ಲೂ ಗುಟ್ಟಾಗಿ ಭಾಗವಹಿಸುವುದನ್ನು ಮುಂದುವರಿಸಿದರು!

ವ್ಲಾದಿಮಿರ್ ಬಹುಪಾಲು ಏಕಾಂಗಿಯಾಗಿಯೇ ಇರುತ್ತಿದ್ದರು; ಸೌಮ್ಯ ಸ್ವಭಾವದ ಅಂತರ್ಮುಖಿಯಾದವರಂತೆಗೋಚರಿಸುತ್ತಿದ್ದರೂ ಗುಂಪಿನಲ್ಲಿ ಸಂಭಾಷಣೆಗಳು ಜರುಗುತ್ತಿದ್ದಾಗ, ಗಮನವಾದದ್ದೇನಾದರೂ ಹೇಳುವುದಿದ್ದರೆ ಮಾತ್ರ ಅವರು ಅದರಲ್ಲಿ ಭಾಗಿಯಾಗುತ್ತಿದ್ದರು. ಇಲ್ಲವೇ ತಾತ್ವಿಕ ಹಾಗೂ ವೈಜ್ಞಾನಿಕ ವಿಷಯಗಳ ಬಗೆಗೆ ಮಾತ್ರ ತಮ್ಮ ವ್ಯಾಖ್ಯಾನ ಮಂಡಿಸುತ್ತಿದ್ದರು. ಹಾಗಾಗಿ ಅವರ ಸಾಮಾನ್ಯ ಪರಿಚಯವಿದ್ದವರಿಗೆ ಅವರೊಬ್ಬ ಕ್ರಾಂತಿಕಾರಿ ಮನೋಭಾವದವರೆಂದು ನಿರ್ಣಯಿಸಲು ಸಾಧ್ಯವಾಗುತ್ತಿರಲಿಲ್ಲ.

## ಪೊಲೀಸರ ಕಣ್ಗಾವಲು

ಬಹುಶಃ ಈ ಹಂತದಲ್ಲಿ ವ್ಲಾದಿಮಿರ್ ಬರ್ಡಿಯನ್‌ಸ್ಕದ ಹೈಸ್ಕೂಲು ವಿದ್ಯಾರ್ಥಿಯಾಗಿದ್ದ ಸಮಯದ ಕೆಲವು ವಿಷಯಗಳನ್ನು ಪ್ರಸ್ತಾಪಿಸಬಹುದೆನಿಸುತ್ತದೆ. ಆ ಶಾಲೆ ದಕ್ಷಿಣ ರಷ್ಯಾ ಪ್ರದೇಶದಲ್ಲೆಲ್ಲಾ ತುಂಬಾ ಉದಾತ್ತ ಧ್ಯೇಯಗಳನ್ನು ಹೊಂದಿದ ಸಂಸ್ಥೆಯೆಂದು ಪ್ರಖ್ಯಾತಿ ಪಡೆದಿತ್ತು. ಅದರ ವಿದ್ಯಾರ್ಥಿಗಳು ತಮಗೆ ಅರಿವಾಗದ ಮೂಲಭೂತ ವಿಷಯಗಳನ್ನು ತಿಳಿದುಕೊಳ್ಳಲು ಉತ್ಸುಕರಾಗಿರುತ್ತಿದ್ದರು; ಆ ಸಲುವಾಗಿ ಶಾಲೆಯ ಹೊರಗಡೆ ಸಣ್ಣಸಣ್ಣ ಗುಂಪುಗಳಾಗಿ ಚರ್ಚೆಮಾಡುತ್ತಿದ್ದರು; ಗುಪ್ತ ಸ್ಥಳಗಳಲ್ಲಿ ಸಂಜೆ ಹೊತ್ತು ಸಭೆ ಸೇರಿ ರಾಜಕೀಯ ವಿಚಾರಗಳ ಬಗೆಗೂ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು; ಆ ಸಮಯದಲ್ಲಿ ಜರುಗುತ್ತಿದ್ದ ಹಲವು ಸಾಮಾಜಿಕ ಚಳವಳಿಗಳ ಹಿಂದಿರಬಹುದಾದ ಇತಿಹಾಸವನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದರು. ಈ ದಿಸೆಯಲ್ಲಿ ರಾಜಕೀಯ-ಅರ್ಥಶಾಸ್ತ್ರ ಮತ್ತು ಸಮಾಜ ಶಾಸ್ತ್ರಗಳ ಸ್ಥೂಲ ಪರಿಚಯ ಅವರಿಗುಂಟಾ

ಗುತ್ತಿತ್ತು. ಈ ಎಲ್ಲಾ ವಿಚಾರ ವಿಮರ್ಶೆಗಳಿಂದ ರಾಷ್ಟ್ರದ ಸ್ಥಿತಿಗತಿಗಳಲ್ಲಿ ಯಾವುದೋ ಕುಂದುಕೊರತೆ ಗಳಿರಬಹುದೆಂಬ ತಿಳುವಳಿಕೆಗಳು ಅವರಲ್ಲಿ ಮೂಡುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಅಂತಹ ಗಮನಾರ್ಹ ವಿಷಯಗಳಲ್ಲಿ ತಾವೇನು ಮಾಡಬಹುದೆಂಬುದು ತಕ್ಷಣ ಹೊಳೆಯುತ್ತಿರಲಿಲ್ಲ. ಬಹುಶಃ ಕ್ರಾಂತಿಕಾರಿ ಚಳುವಳಿಗಳನ್ನು ಆರಂಭಿಸುವುದರಿಂದ ಆ ಬಗೆಗೆ ಸ್ವಲ್ಪ ಮಟ್ಟಿಗಾದರೂ ಸುಧಾರಣೆಗಳನ್ನು ನಿರೀಕ್ಷಿಸಬಹುದೆಂಬುದು ಆ ಯುವ ಪೀಳಿಗೆಯವರ ಬಹುಪಾಲು ಮಂದಿಯ ಅಭಿಪ್ರಾಯವಾಗಿರುತ್ತಿತ್ತು. ಆದರೆ ಆ ಪುಟ್ಟ ನಗರದಲ್ಲಿ ಆ ಬಗೆಗೆ ಮಾರ್ಗದರ್ಶನ ಮಾಡುವವರಾರೂ ಇರಲಿಲ್ಲ. ಹಾಫ್‌ಕಿನ್ನರಲ್ಲಂತೂ ಆ ಹೈಸ್ಕೂಲಿನಲ್ಲಿದ್ದ ಎಂಟು ವರ್ಷಗಳ ಅವಧಿಯಲ್ಲಿ ಪ್ರಚಲಿತವಿದ್ದ ಝಾರ್ ದೊರೆಗಳ ನಿರಂಕುಶ ಪ್ರಭುತ್ವವನ್ನಾಗಲೀ ಮತ್ತು ಪ್ರಗತಿ ವಿರೋಧಿಗಳನ್ನಾಗಲೀ ಗೌರವದಿಂದ ನೋಡಬೇಕೆಂಬ ಭಾವನೆ ಉಂಟಾಗಲೇ ಇಲ್ಲ. ವಿಶ್ವವಿದ್ಯಾಲಯ ಪ್ರವೇಶ ಯೋಗ್ಯವಾದ ಮೆಟ್ರಿಕ್ಯುಲೇಷನ್ ಸರ್ಟಿಫಿಕೇಟನ್ನು ಜೇಬಲ್ಲಿರಿಸಿಕೊಂಡು, ಹಲವು ಸಂದೇಹ ಮತ್ತು ಅಳುಕಿನ ಭಾವನೆಗಳ ಸಮೇತ ಒಡಿಸ್ಸಾಕ್ಕೆ ಪ್ರಯಾಣ ಬೆಳಸಿದರು. ಆಗ ಅವರ ಪರಿಸ್ಥಿತಿ ಹುದುಗೇಳಲು ತಯಾರಿಸಿದ್ದ ನಾದಿದ ಕಣಕದ ಹಿಟ್ಟನಂತಾಗಿತ್ತೆನ್ನಬಹುದು.ಅಂದರೆ ಆ ತನಕದ ''ವಿಧೇಯ ಹಾಗೂ ಸಭ್ಯವರ್ತನೆಯ ನಾಗರಿಕ'' ಯುವಕನನ್ನು ಸುತ್ತುವರಿದಿದ್ದ ಇಕ್ಕಟ್ಟಿನ ರಕ್ಷಣಾ ಕವಚವನ್ನು ಭೇದಿಸಿಕೊಂಡು ಕ್ರಾಂತಿ ಕಿಡಿಯ ಓಜಸ್ಸು ರಭಸದಿಂದ ಹೊರಬರುವ ಸ್ಥಿತಿಯಲ್ಲವರಿದ್ದರು.

ಅಂತಹ ಹುದುಗು **'ನರೋದ್ನಾಯವೋಲ್ಯಾ'** ಎಂಬ ಕ್ರಾಂತಿಕಾರಿ ವರ್ತಮಾನ ಪ್ರತಿಕೆಯ ಮೊದಲ ಪ್ರತಿ ಒಡೆಸ್ಸಾಕ್ಕೆ ತಲುಪಿದಾಗ ಪಕ್ವವಾಗುವ ಸ್ಥಿತಿಗೆ ತಲುಪಿತು. ಹಾಫ್‌ಕಿನ್ ತಮ್ಮ ಇಬ್ಬರು ಸ್ನೇಹಿತರಾಗಿದ್ದ ಸ್ಟೆಪಾನ್ ಮತ್ತು ಗೆರಾಸಿಮ್ ರೋಮನೆನ್‌ಕೋ ಜೊತೆಗೂಡಿ ಆ ಪತ್ರಿಕೆಯನ್ನು ಓದಿದರು. ಶ್ರಿಮಂತ ಮನೆತನವೊಂದಕ್ಕೆ ಸೇರಿದ್ದ ಸ್ಟೆಪಾನ್ ಮತ್ತು ಗೆರಾಸಿಮ್ ಸಹೋದರು ವಿಶ್ವವಿದ್ಯಾಲಯಕ್ಕೆ ಸೇರದಾಗಿನಿಂದ ಹಾಫ್‌ಕಿನ್ನರ ಸ್ನೇಹಿತರಾದರು. ಬೆಸ್ಸಾರ್ಬಿಯಾದ ಜಮೀನುದಾರರೊಬ್ಬರ ಮಕ್ಕಳಾದ ಅವರಿಬ್ಬರು ಸುಖದ ಸಂಪತ್ತಿನಲ್ಲಿ ಲೋಲಾಡಬಹುದಿತ್ತು; ಅಂತಹ ಅವಕಾಶವನ್ನು ತ್ಯಜಿಸಿ ಕ್ರಾಂತಿಕಾರಿ ವಿಷಯಗಳ ಬಗೆಗೆ ಒಲವು ತೋರಿಸುತ್ತಿದ್ದುದು ಅಚ್ಚರಿಯ ಸಂಗತಿ.ದುರಾದೃಷ್ಟವಶಾತ್ ಅವರಿಬ್ಬರೂ ಕ್ಷಯರೋಗದಿಂದ ನರಳುತ್ತಿದ್ದರು. ಮಿತಭಾಷಿ ಹಾಗೂ ಅಂತರ್ಮುಖಿ ಯಾದ ವ್ಲಾದಿಮಿರ್ ವಾಚಾಳಿಗಳಾದ ಅವರಿಬ್ಬರ ಜೊತೆ ಸೇರಿಕೊಂಡಿದ್ದೂ ಒಂದು ವಿಶೇಷವೇ. ಆ ಮೂವರಲ್ಲೂ ಕ್ರಾಂತಿಕಾರಿ ವಿಷಯಗಳಲ್ಲಿ ಒಮ್ಮತವಿದ್ದುದೇ ಅವರ ನಡುವಿನ ಸ್ನೇಹ ಸಂಬಂಧದ ಕಾರಣವಾಗಿರಬಹುದು. ಅದೇನೇ ಆಗಿದ್ದರೂ 1879ರ ಶರತ್ಕಾಲದಿಂದ ಈ ಮೂವರ ಹೆಸರುಗಳು ಪೊಲೀಸ್ ವರದಿಗಳಲ್ಲಿ ಒಟ್ಟೊಟ್ಟಿಗೆ ಕಾಣಲಾ ರಂಭಿಸಿದವು!

**'ನರೋದ್ನಾಯ ವೋಲ್ಯಾ'** ಪತ್ರಿಕೆ ಕ್ರಾಂತಿ ಕಹಳೆಯ ಮುಖವಾಣಿಯಂತ್ತಿತ್ತು. ದ್ವಂದ್ವಾರ್ಥಗಳನ್ನು ನೀಡಬಹುದಾದ ಪದಪುಂಜ ಹಾಗೂವಾಕ್ಯಗಳೇ ಅದರ ಜೀವಾಳ.

''ಕಾರ್ಥೇಜನ್ನು ನಾಶಗೊಳಿಸಬೇಕು'' ಎಂಬ ಮುಖಪುಟದ ತಲೇಬರಹದ ಅರ್ಥ ''ರಾಜಕೀಯ ಚಳುವಳಿಗಳನ್ನು ಆರಂಭಿಸಬೇಕು'' ಎಂದು. ಝಾರ್‌ನ ನಿರುಂಕುಶಾಧಿಕಾರವನ್ನು ಕೊನೆಗೊಳಿಸಲು ನೀಡಿದ ಕರೆ ಅದಂತೆ! ರಾಜಕೀಯ ಸ್ವಾತಂತ್ರ್ಯಗಳಿಸಲು ತಕ್ಷಣವೇ ಹೋರಾಟಕ್ಕಿಳಿಯಬೇಕೆಂಬ ಕರೆ ನೀಡುವುದು ಆ ಪತ್ರಿಕೆಯ ಉದ್ದೇಶವಾಗಿತ್ತು.

ನರೋದ್ನಾಯ ವೋಲ್ಯಾ ಚಳವಳಿ ಒಡೆಸ್ಸಾದಲ್ಲಿ 1879ರ ಹೊತ್ತಿಗೆ ಉತ್ತುಂಗ ಮಟ್ಟಕ್ಕೇರಿತ್ತು. ಹಾಫ್‌ಕಿನ್ ಮತ್ತು ರೋಮನೆನ್‌ಕೋ ಸಹೋದರರು ಅತ್ಯಲ್ಪ ಸಮಯದಲ್ಲೇ ಅದರ ಸುಳಿಗೆ ಸಿಲುಕಿಬಿಟ್ಟರು. ಪೋಲಿಸ್ ಇಲಾಖೆಯ ಗುಪ್ತಚಾರರು ಅವರ ಚಟುವಟಿಕೆಗಳನ್ನು ಗುರುತಿಸುವುದರಲ್ಲಿ ಹಿಂದೆ ಬೀಳಲಿಲ್ಲ ಅವರೆಲ್ಲರ ಚಟುವಟಿಕೆಗಳ ಮೇಲೆ ಪ್ರತ್ಯೇಕ ಕಡತಗಳೇ ತಯಾರಾದವು. ಹಾಫ್‌ಕಿನ್ ಒಡೆಸ್ಸಾದಲ್ಲಿದ್ದ ಈ ಸಮಯದಲ್ಲಿ ಆರಂಭವಾದ ಕಣ್ಗಾವಲು ಮುಂದಿನ ಎಂಟು ವರ್ಷಗಳು ಎಡೆಬಿಡದೆ ಮುಂದುವರಿಯಹತ್ತಿದ್ದವು. ಸಹಪಾಠಿಗಳೊಡನೆ ಅವರ ಒಡನಾಟದ ವಿವರಗಳು ಪ್ರೊ:ಮೆಕ್ನಿಕೋವ್ ಜೊತೆ ಅವರಿಗಿದ್ದ ಸ್ನೇಹ ಸಂಬಂಧ, ವೈಜ್ಞಾನಿಕ ಚಟುವಟಿಕೆಗಳು- ಹೀಗೆ ಹಾಫ್‌ಕಿನ್ನರ ಎಲ್ಲಾ ವೈಯಕ್ತಿಕ ಜೀವನದ ಮಾಹಿತಿಗಳೆಲ್ಲಾ ಪೋಲಿಸ್‌ಯಾದಿಯಲ್ಲಿ ದಾಖಲಾಗಿರುತ್ತಿದ್ದವು. ಅವರ ಪತ್ರ ವ್ಯವಹಾರಗಳು ಪೋಲಿಸರ ಪರಿಶೀಲನೆಗೊಳಗಾದ ನಂತರವೇ ಮುಂದೆ ಚಲಿಸುತ್ತಿದ್ದುದು. ಇಂತಹ ಉಸಿರುಕಟ್ಟಿಸುವ ವಾತಾವರಣದಲ್ಲಿ ವ್ಲಾದಿಮಿರ್ ಹಾಫ್‌ಕಿನ್‌ರಲ್ಲದೆ ಬೇರೆ ಇನ್ನಾರಾದರೂ ಆಗಿದ್ದರೆ ಹತಾಶೆಯಿಂದ ಕ್ರಾಂತಿಕಾರಕ ಚಟುವಟಿಕೆಗಳನ್ನು ತ್ಯಜಿಸಿ ಸುಖಜೀವನದ ದಾರಿಯನ್ನು ಆರಿಸಿಕೊಳ್ಳುತ್ತಿದ್ದರು. ರಷ್ಯಾದೇಶದ ಆಗಿನ ಪರಿಸ್ಥಿತಿಯ ಸುಧಾರಣೆಗೆ ಕ್ರಾಂತಿಯೊಂದೇ ಸಾಧನವೆಂದು ದೃಢವಾಗಿ ನಂಬಿದ್ದ ಅವರು ತಾವಾಗಿ ಆರಿಸಿಕೊಂಡಿದ್ದ ದಾರಿಯಿಂದ ವಿಚಲಿತರಾಗಲಿಲ್ಲ.

ವಿಶ್ವವಿದ್ಯಾಲಯದವರು ವಿದ್ಯಾರ್ಥಿ ಚಟುವಟಿಕೆಗಳನ್ನು ಹತ್ತಿಕ್ಕಲು ಹೊಸ ಹೊಸ ಕಾನೂನು ಕಟ್ಟಳೆಗಳನ್ನು ವಿಧಿಸುತ್ತಲೇ ಇದ್ದರು. ಅವುಗಳನ್ನು ವಿರೋಧಿಸಲು ವಿದ್ಯಾರ್ಥಿಗಳು ಹಾಫ್‌ಕಿನ್ನರ ಮನೆಯೂ ಸೇರಿದಂತೆ ಹಲವು ಕಡೆ ಗುಪ್ತ ಸಭೆಗಳನ್ನು ನಡೆಸುತ್ತಿದ್ದರು. ಅವುಗಳ ಸುಳಿಹು ಅದೇಗೋ ಪೋಲಿಸರಿಗೆ ತಿಳಿದುಬಿಡುತ್ತಿದ್ದವು. ಅಂತಹ ಒಂದು ಸಂದರ್ಭದಲ್ಲಿ ಸ್ಟೆಫಾನ್ ಮತ್ತು ವ್ಲಾದಿಮಿರ್‌ರನ್ನು ದಸ್ತಗಿರಿ ಮಾಡಿದರು. ಗೆರಾಸಿಮ್ ಗುಟ್ಟಾಗಿ ದೇಶದಿಂದ ಹೊರಹೋಗಿಬಿಟ್ಟರು. ಮತ್ತುಳಿದವರನ್ನು ಸೆರೆ ಹಿಡಿಯಲು ಹುಡುಕಾಟಗಳನ್ನು ಜರುಗಿಸುತ್ತಲೇ ಇದ್ದರು; ಹಲವು ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳಿಂದ ಹಾಫ್‌ಕಿನ್ ಮತ್ತು ರೋಮನೆನ್‌ಕೊ ಸಹೋದರರ ರಾಷ್ಟ್ರ ವಿರೋಧಿ ಹಾಗೂ ಆಕ್ಷೇಪಾರ್ಹ ದಾಖಲೆಗಳು ರಾಶಿಗಟ್ಟಲೆ ದೊರೆಕಿದವು. ಅವುಗಳನ್ನು ಪರಿಶೀಲಿಸಿದ ಗೌರ್ವನರ್ ಜನರಲ್ ಈ ಸಾರಿ ಸ್ವಲ್ಪ ಉದಾರತೆಯಿಂದ ವರ್ತಿಸಿದರೆಂದೇ ಹೇಳಬೇಕು. ಅವರಿಗೆಲ್ಲಾ ಉಗ್ರ ಶಿಕ್ಷೆ ವಿಧಿಸುವುದಕ್ಕೆ ಬದಲಾಗಿ ಪೊಲೀಸರು ಅವರುಗಳ ಮೇಲೆ

ಕಟ್ಟೆಚ್ಚರದ ಕಣ್ಗಾವಲು ಇರಿಸುವಂತೆ ಆದೇಶ ಹೊರಡಿಸಿದರು. ಹಾಫ್‌ಕಿನ್ನರ ಮೇಲೆ ಮೊದಲಿಂದಲೂ ಇರಿಸಿದ್ದ ಕಣ್ಗಾವಲು ಇನ್ನೂ ಉಗ್ರರೀತಿಯಲ್ಲಿ ಮುಂದುವರಿಯಿತು. ದೃಢ ಮನಸ್ಸಿನ ಯುವ ಕ್ರಾಂತಿಕಾರಿ ವ್ಲಾದಿಮಿರ್ ಅಂತಹ ಇತಿ ಮಿತಿಗಳ ನಡುವೆಯೂ ತಮ್ಮ ಚಟುವಟಿಕೆಗಳನ್ನು ಮುಂದುವರಿಸುತ್ತಿದ್ದರು.

## ಗೊಂದಲಮಯ ವಾತಾವರಣ-ದಸ್ತಗಿರಿ

ಸೆಯಿಂಟ್ ಪೀಟರ್ಸ್ ಬರ್ಗ್‌ನಲ್ಲಿ 1881ರ ಮಾರ್ಚ್ ಒಂದನೆ ದಿನ ಸಿಡಿಸಿದ ಬಾಂಬ್ ಸ್ಫೋಟದಲ್ಲಿ ಝಾರ್ ದೊರೆ, ಎರಡನೇ ಅಲೆಕ್ಸಾಂಡರ್ ಹತರಾದರು. ನರೋದ್ನಾಯ ವೋಲ್ಯಾ ಪಾರ್ಟಿಯವರೇ ಈ ಹತ್ಯೆಯ ರೂವಾರಿ ಗಳಾಗಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ. ಆ ಪಾರ್ಟಿಯವರು ತಮ್ಮ ಪ್ರತಿಜ್ಞೆಯನ್ನು ಈಡೇರಿಸುವಲ್ಲಿ ಸಫಲರಾಗಿದ್ದರು. ಜನರ ಸಾಮೂಹಿಕ ಹತ್ಯಾಖಾಂಡದಲ್ಲಿ ತೊಡಗುವುದರ ಮೂಲಕ ಸರ್ಕಾರ ಝಾರ್ ದೊರೆಯ ಕೊಲೆಗೆ ಪ್ರತೀಕಾರ ತೆಗೆದುಕೊಳ್ಳಲಾರಂಭಿಸಿತು. ಪಕ್ಷದ ಕಾರ್ಯಕರ್ತರನ್ನು ಸಿಕ್ಕು ಸಿಕ್ಕಲ್ಲಿ ಗುಂಡಿಟ್ಟು ಕೊಂದರು; ದಸ್ತಗಿರಿಗೊಳಗಾಗಿ ಸೆರೆಮನೆಯಲ್ಲಿದ್ದವರನ್ನೆಲ್ಲಾ ಗಲ್ಲಿಗೇರಿಸಿದರು; ಮಾಸ್ಕೋ ಮತ್ತು ಸೆಯಿಂಟ್ ಪೀಟರ್ಸ್‌ಬರ್ಗ್‌ನಲ್ಲಿದ್ದ ಬಂದೀಖಾನೆಗಳು ಜನರಿಂದು ತುಂಬಿ ತುಳುಕಾಡುತ್ತಿದ್ದವು; ಶಿಕ್ಷೆಗೊಳಪಡಿಸಿದವರನ್ನು ದೂರದ ಸೈಬೀರಿಯಾಕ್ಕೆ ಗಡಿಪಾರು ಮಾಡಿದರು; ಹಾಗೆ ಅವರನ್ನು ಸೈಬೀರಿಯಾಕ್ಕೆ ಕಳುಹಿಸಲು ಒಂದೊಂದು ಸಾರಿ ರೈಲು ಬೋಗಿಗಳ ಅಭಾವ ಉಂಟಾಗುತ್ತಿತ್ತಂತೆ!

ಝಾರ್ ದೊರೆಯ ಕೊಲೆಯ ಸಂಚಿನ ಹಿಂದೆ ಯಹೂದಿಗಳ ಪಿತೂರಿಯಿದೆಯೆಂದು ಸರಕಾರ ಹೇಳಿಕೊಂಡಿತು; ಯೆಹೂದಿಗಳು ಸರ್ಕಾರವನ್ನು ತಮ್ಮ ಕೈವಶಕ್ಕೆ ತೆಗೆದುಕೊಳ್ಳುವ ಹುನ್ನಾರ ನಡೆಸುತ್ತಿದ್ದಾರೆಂದು ದೂರಿದರು. ರಷ್ಯಾದ ಪಶ್ಚಿಮ ಮತ್ತು ದಕ್ಷಿಣ ಪ್ರಾಂತ್ಯಗಳು ಮತ್ತು ಒಡೆಸ್ಸಾ ನಗರದಲ್ಲಿ ಸರ್ಕಾರದ ದಮನಕಾರಿ ಕೃತ್ಯಗಳು ಅತಿ ಹೆಚ್ಚಾಗಿ ಜರುಗುತ್ತಿದ್ದವು. ಸರಕಾರಿ ಭಯೋತ್ಪಾದಕರು ಬೀದಿಗಿಳಿದು ಸಿಕ್ಕಸಿಕ್ಕಿದ ಜನರನ್ನು ಕತ್ತಿ, ಕೊಡಲಿ, ಮಚ್ಚುಗಳಿಂದ, ಕೊಚ್ಚಿ ಕೊರೆದು ಹಾಕಿದರು. ಯೆಹೂದ್ಯರ ಮನೆಗಳಿಗೆ ನುಗ್ಗಿ ಕೊಲೆ, ಸುಲಿಗೆ, ದಾಂದಲೆ ಮಾಡಿ ಅವುಗಳನ್ನೆಲ್ಲಾ ನಾಶ ಮಾಡಿದರು.

ಸರ್ಕಾರದ ದಬ್ಬಾಳಿಕೆಯ ಸುದ್ದಿಗಳು ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ಜನ ಬೆಂಬಲ ಅವುಗಳಿಗಿದ್ದುದರಿಂದ ಸರ್ಕಾರ ಅವನ್ನು ತಡೆಯಲಾಗುತ್ತಿರಲಿಲ್ಲ. ಹೆಸರಾಂತ ಸರ್ಜನ್ ಹಾಗೂ ಒಡೆಸ್ಸಾ ಜಿಲ್ಲೆಯ ಶಾಲೆಗಳ ಧರ್ಮದರ್ಶಿಗಳಾಗಿದ್ದ ಡಾ॥ ಪಿ.ಐ. ಪಿರೋಗೋವ್ ಮನನೊಂದು ''ವಿಶ್ವವಿದ್ಯಾಲಯಗಳೇ ನಮ್ಮ ಸಮಾಜದ ವಾಯುಭಾರಮಾಪಕಗಳು; ಮೇ ತಿಂಗಳ ನಾಲ್ಕರ ಸೋಮವಾರ ಅವುಗಳಲ್ಲಿ ಚಂಡ ಮಾರುತ ಬೀಸಿದ ಪರಿಣಾಮಗಳಾದವು''! ಎಂದು ಉದ್ಗಾರ ಮಾಡಿದರಂತೆ.

ವಿಶ್ವವಿದ್ಯಾಲಯದಲ್ಲಿನ ಗೊಂದಲಮಯ ವಾತಾವರಣವನ್ನು ಸರ್ಕಾರ ಹೇಗೋ ತಹಬಂದಿಗೆ ತರುವಲ್ಲಿ ಯಶಸ್ವಿಯಾಯಿತು; ತರಗತಿಗಳೂ ಸಹ ಆರಂಭ ಆಗುತ್ತವೆಂದು ಸಾರಿದರು. ಪಾಠ ಪ್ರವಚನಗಳು ಪ್ರಾರಂಭವಾಗುತ್ತಿದ್ದಂತೆಯೇ ಎಲ್ಲಾ ಪ್ರದೇಶಗಳ, ಎಲ್ಲಾ ಜನಾಂಗಗಳ ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿ ಹೊರಬಂದರು. ಅವರಲ್ಲಿ ರಷ್ಯನ್ನರು, ಯೆಹೂದಿಗಳು, ಉಕ್ರೇನಿಯನ್ನರು, ಮಾಲ್ಡಿವಿಯಾದವರು, ಬಲ್ಗೇರಿಯನ್ನರು ಎಂಬ ಯಾವುದೇ ದೇಶ-ಭಾಷೆಗಳ ಭೇದ ಭಾವವಿಲ್ಲದೆ ಬಹಿಷ್ಕಾರದಲ್ಲಿ ಸೇರಿದ್ದರು. ಅವರೆಲ್ಲಾ ಬೀದಿಗಿಳಿದು ಯೆಹೂದಿಗಳನ್ನು ಸತಾಯಿಸುತ್ತಿದ್ದವರನ್ನೆಲ್ಲಾ ಸದೆ ಬಡಿಯಲಾರಂಭಿಸಿದರು. ಹಾಫ್‌ಕಿನ್ ಮತ್ತು ರೋಮೆನೆನ್‌ಕೋ ಸಹೋದರರು ಈ ಚಳವಳಿಯ ಮುಂಚೂಣಿಯಲ್ಲಿರುತ್ತಿದ್ದರು. ಈ ಘಟನೆಗಳಿಂದ ಪ್ರಚೋದಿತರಾದ ಪೋಲಿಸ್ ಪಡೆಯೂ ಬೀದಿಗಿಳಿಯಿತು. ರೈಬ್‌ನಾಯ ಮತ್ತು ರೆನ್ಜಿ ಚನ್ಯಾ ಬೀದಿಗಳಲ್ಲಿ ಸುಮಾರು ಒಂದು ನೂರಾ ಐವತ್ತು ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಲಾಯಿತು. ಮತ್ತೆ ಕೆಲವೇ ದಿನಗಳಲ್ಲಿ ಎಂಟು ನೂರಕ್ಕೂ ಹೆಚ್ಚು ಜನರನ್ನು ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡರು; ಅವರನ್ನೆಲ್ಲಾ ಬಂದಿಸಿ ಇಡಲು ಬಂದೀ ಖಾನೆಗಳಲ್ಲಿ ಸ್ಥಳಾವಕಾಶಗಳಿಲ್ಲದೆ ಹತ್ತಿರದ ಬಂದರುಗಳಲ್ಲಿ ಬೀಡುಬಿಟ್ಟಿದ್ದ ಕಲ್ಲಿದ್ದಲಿನ ಹಡಗುಗಳಲ್ಲಿ ತೂರಿಸಬೇಕಾಯಿತಂತೆ!

ಅಂತಿಮವಾಗಿ ಹಾಫ್‌ಕಿನ್ ದಸ್ತಗಿರಿಯಾದಾಗ ಅವರ ಕೈಯಲ್ಲಿ ಬಂದೂಕಿತ್ತು! ಆದರೂ ಮುಂದೆ ಅವರ ವಿಚಾರಣೆಯಾದಾಗ ಅವರ ಬಗೆಗೆ ಇದ್ದ ಆರೋಪಗಳನ್ನು ಸಾಬೀತು ಪಡಿಸಲು ಸಾಕಷ್ಟು ಪುರಾವೆಗಳು ದೊರಯದಿದ್ದುದರಿಂದ ಅವರನ್ನು ಬಿಡುಗಡೆ ಮಾಡಬೇಕಾಯಿತಂತೆ. ಆದರೂ ೧೮೮೧ರ ವಸಂತ ಕಾಲದ ಸಮಯಕ್ಕೆ ಅವರೊಬ್ಬರೇ ಸೆರೆಮನೆಯಿಂದ ಹೊರಗಿದ್ದು ಒಬ್ಬಂಟಿತನದ ಬವಣೆಯನ್ನು ಅನುಭವಿಸಬೇಕಾಯಿತು. ಅವರ ಹಿತೈಷಿಗಳಾಗಿದ್ದ ಪ್ರೊ: ಮೆಕ್ನಿಕೋವ್ ದೀರ್ಘ ಕಾಲ ಅಸ್ವಸ್ಥರಾಗಿದ್ದು ಅವರ ಮಾರ್ಗದರ್ಶನ ದೊರೆಯದಂತಾಯಿತು. ಸಂಗಾತಿ ಸ್ಟೆಪಾನ್ ರೋಮನೆನ್‌ಕೋ ದೇಶಬಿಟ್ಟು ಹೋಗಿದ್ದರು.

ಪ್ರೊ:ಮೆಕ್ನಿಕೋವ್ ಅವರು ನಾನಾ ಬಗೆಯ ಜ್ವರಗಳಿಂದ ದೀರ್ಘಕಾಲ ನರಳುತ್ತಿದ್ದರು; ನಿಶ್ಶಕ್ತಿಯಿಂದ ಬಳಲುತ್ತಿದ್ದರೂಆಗಾಗ್ಗೆ ಪ್ರಯೋಗಾಲಯಕ್ಕೆ ಬರುವುದನ್ನು ಬಿಟ್ಟಿರಲಿಲ್ಲ. ಅವರೀಗ ರಾಜಕೀಯವನ್ನು ತ್ಯಜಿಸಿ, ವಿಜ್ಞಾನದ ವಿಷಯಗಳಿಗೇ ಹೆಚ್ಚಿನ ಗಮನ ಹರಿಸಬೇಕೆಂದು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಆದರೂ ವಿದ್ಯಾರ್ಥಿಗಳು ಅವರ ಹಿತವಚನಗಳನ್ನು ಆಲಿಸುವ ಸ್ಥಿತಿಯಲ್ಲಿರಲಿಲ್ಲ. ಅಕಾಡೆಮಿಕ್ ಕೌನ್ಸಿಲ್ ಸಭೆಗಳಲ್ಲಿ ಅವರೊಬ್ಬ ಉಗ್ರಗಾಮಿ ಎಂದರೆ -'ರೆಡ್'- ಕೆಂಪುಬಣ್ಣದ ಪಕ್ಷದ ಕಡೆಗೆ ಒಲವಿದ್ದವರೆಂದು ಪರಿಗಣಿಸಲಾಗುತ್ತಿತ್ತು. ವಿದ್ಯಾರ್ಥಿಗಳ ಹಿತಾಸಕ್ತಿಗಳಿಗೆ ಸದಾ ಬೆಂಬಲ ನೀಡುತ್ತಿದ್ದ, ಅವರು ಸಾಮಾನ್ಯವಾಗಿ ಬೋಧನೆ ಮತ್ತು ಸಂಶೋಧನಾ ಕ್ಷೇತ್ರಗಳಲ್ಲಿ ಅಂಕೆ

ಇಲ್ಲದ ಸ್ವಾತಂತ್ರ್ಯವಿರಬೇಕೆಂದು ಪ್ರತಿಪಾದಿಸುತ್ತಿದ್ದರು; ವಿಶ್ವವಿದ್ಯಾಲಯದ ಆಡಳಿತ ವರ್ಗದವರಿಗೆ ಅದೇ ತಪ್ಪಾಗಿ ಕಾಣಿಸುತ್ತಿತ್ತು.

ಪ್ರೊ:ಮೆಕ್ನಿಕೋವ್ ಮತ್ತೊಂದು ಸುತ್ತು ಇನ್ನೊಂದು ಬಗೆಯ ಜ್ವರದಿಂದ ಬಳಲಾರಂಭಿಸಿದರು; ಅದು ಟೈಫಸ್ ಫೀವರ್ ಮಾದರಿಯಾಗಿತ್ತೆನ್ನಲಾಗಿದೆ. ಬಹುಶಃ ಪ್ರಯೋಗ ಪರೀಕ್ಷೆಯ ಸಲುವಾಗಿ ಅವರೇ ಸ್ವತಃ ಟೈಫಸ್ ಬ್ಯಾಸಿಲೈಗಳನ್ನು ಇಂಜೆಕ್ಟ್ ಮಾಡಿಕೊಂಡಿರಬಹುದೆಂಬ ಶಂಕೆಯೂ ಇತ್ತು. ಕೆಲ ಸಮಯ ತೀವ್ರವಾಗಿ ಅಸ್ವಸ್ಥರಾಗಿದ್ದುದರಿಂದ ಹೊರಗಿನ ರಾಜಕೀಯ ಬೆಳವಣಿಗೆಗಳು ಅವರ ಗಮನಕ್ಕೆ ಬರುತ್ತಿರಲಿಲ್ಲ. ಹಾಫ್‌ಕಿನ್ ಸಹಾ ಅವರನ್ನು ಭೇಟಿಯಾಗುವ ಅವಕಾಶಗಳಿರಲಿಲ್ಲ.

ಕೆಲವು ಸಮಯದ ನಂತರ ಮೆಕ್ನಿಕೋವ್ ಚೇತರಿಸಿಕೊಂಡು ಪ್ರಯೋಗಾಲಕ್ಕೆ ಬರುವಂತಾದರು. ಹಾಫ್‌ಕಿನ್ ತಮ್ಮ ಸಂಶೋಧನೆಯ ಫಲವಾಗಿ ಸಮುದ್ರದ ನೀರಿನ ಒಂದು ಬಗೆಯ ಏಕಾಣುಜೀವಿ (Marine protozoa)ಗಳ ಬಗೆಗೆ ತಯಾರಿಸಿದ್ದ ಪ್ರಬಂಧವನ್ನು ಅವರಿಗೆ ಒಪ್ಪಿಸಿದರು. ಪ್ರೊ:ಮೆಕ್ನಿಕೋವರಿಗೆ ತಮ್ಮ ಶಿಷ್ಯನ ಸಾಧನೆ ಮೆಚ್ಚುಗೆಯಾಯಿತು; ಪರಿಣಾಮದಿಂದಾಗಿಯೋ ಏನೋ ಶಿಷ್ಯನನ್ನು ಜೊತೆಗೂಡಿಸಿಕೊಂಡು ಸಂಶೋಧನೆಗಳನ್ನು ಮುಂದುವರಿಸಲು ಸಮುದ್ರ ತೀರಕ್ಕೆ ಹೋಗುವ ಯೋಜನೆಯನ್ನು ಹಾಕಿಕೊಂಡಿದ್ದರು. ಆದರೆ ಕೆಲವು ವೈಯಕ್ತಿಕ ಕಾರಣಗಳಿಂದಾಗಿ ಅವರು ತಮ್ಮ ಹಳ್ಳಿಗೆ ಹೋಗಬೇಕಾಯಿತು. ಹಾಫ್‌ಕಿನ್ ಕೂಡ ತಮ್ಮ ಯೋಜನೆಯನ್ನು ಬದಲಾಯಿಸಿಕೊಂಡು ಇನ್ನೊಂದು ವೈಜ್ಞಾನಿಕ ತಂಡದ ಜೊತೆಗೆ ಬಿಸಾರ್ಬಿಯಾಕ್ಕೆ ತೆರಳಿದರು.

## ನಿಗೂಢ ಮಹಿಳೆಯ ಆಗಮನ

ಒಡೆಸ್ಸಾ ನಗರಕ್ಕೆ 1881ರ ಬೇಸಗೆಯಲ್ಲಿ ನಿಗೂಢ ಮಹಿಳೆಯೊಬ್ಬಳು ಆಗಮಿಸಿದಳು. ಸೌಂದರ್ಯದ ಕಣಿ, ಚತುರ ಮಾತುಗಾರ್ತಿ, ಸಾಹಿತ್ಯ ಸಂಗೀತಗಳಲ್ಲಿ ಪ್ರವೀಣೆಯಾಗಿದ್ದ ಯೆಲೇನಾ ಕೋಲೋಸೋವಾ ಅಮಿತ ಉತ್ಸಾಹದ ಚಿಲುಮೆಯೂ ಆಗಿದ್ದಳು. ಒಡನೆಯೇ ಎಲ್ಲರ ಗಮನದ ಕೇಂದ್ರವಾದಳು. ಸಮಾಜದ ನಾನಾ ಸ್ತರದ ಜನರು ಅವಳನ್ನು ಭೇಟಮಾಡಲು ಹಾತೊರೆಯುತ್ತಿದ್ದರು. ಅವಳ ಮನೆಯಲ್ಲೇ ಆಗಾಗ್ಗೆ ಸಂತೋಷ ಕೂಟಗಳನ್ನು ಏರ್ಪಡಿಸಲಾಗುತ್ತಿತ್ತು; ಆಕೆಯನ್ನು ಹೊರಗಡೆ ತಿರುಗಾಟಕ್ಕೆ ಕರೆದುಕೊಂಡು ಹೋಗುವ ವ್ಯವಸ್ಥೆಗಳೂ ಆಗುತ್ತಿದ್ದವು. ಆ ನಿಗೂಢ ಮಹಿಳೆ ಕೋಲೋಸೋವಾ ವಾಸ್ತವವಾಗಿ ವೇರಾಫಿಂಗರ್; ಆಕೆ ನರೋದ್ನಾಯ ವೋಲ್ಯಾ ಪಾರ್ಟಿಯ ಕಾರ್ಯನಿರ್ವಾಹಕ ಮಂಡಳಿಯ ಸದಸ್ಯಳು; ಈ ರಹಸ್ಯ ಒಡೆಸ್ಸಾದಲ್ಲಿ ಕೇವಲ ಮೂರು ಜನರಿಗೆ ಮಾತ್ರ ತಿಳಿದಿತ್ತು.

ದಕ್ಷಿಣ ರಷ್ಯಾದಲ್ಲಿ ನರೋದ್ನಾಯ ವೋಲ್ಯಾಪಾರ್ಟಿಯ ಶಾಖೆಗಳನ್ನು ತೆರೆಯಲು ಕೋಲೋಸೋವಾಳನ್ನು ಒಡೆಸ್ಸಾಕ್ಕೆ ಕಳುಹಿಸಲಾಗಿತ್ತು. ಒಡೆಸ್ಸಾದಲ್ಲಿ ಆಕೆಯ ಪರಿಚಿತ

ವ್ಯಕ್ತಿಗಳಲ್ಲಿ ಪಾವಲ್ ಅನ್ಸೆನ್‌ಕೋವ್ ಒಬ್ಬರು; ಅವರೊಬ್ಬ ವೃತ್ತಿನಿರತ ಕ್ರಾಂತಿಕಾರಿಯಾಗಿದ್ದರು. ನರೋದ್ನಾಯ ವೋಲ್ಯಾ ಪಾರ್ಟಿಯ ಪರವಾಗಿ ವಿದ್ಯಾರ್ಥಿಗಳ ಗುಂಪೊಂದನ್ನು ಸಜ್ಜುಗೊಳಿಸುವ ಸಲುವಾಗಿ ಅನ್ಸೆನ್‌ಕೋವ್, ಖಾರ್ಕ್ಯೋವ್‌ನಿಂದ ಕೋಲಾಸೋವಾಳನ್ನು ಕರೆಸಿಕೊಂಡಿದ್ದರು. ಕೋಲಾಸೋವಾ ವಿಶ್ವವಿದ್ಯಾಲಯದಲ್ಲಿ ದಾಖಲಿಸಿಕೊಂಡು ಅಭ್ಯಾಸನಿರತ ವಿದ್ಯಾರ್ಥಿನಿಯಂತೆ ನಟನೆ ಮಾಡುತ್ತಿದ್ದರು. ತಮ್ಮ ಉದ್ದೇಶ ಸಾಧನೆಗಾಗಿ ಸರಿಯಾದವರೆಂದು ಕಂಡು ಬಂದ ಇತರ ಕೆಲವು ವಿದ್ಯಾರ್ಥಿಗಳನ್ನು ಆಯ್ಕೆಮಾಡಿಕೊಂಡು ಒಂದು ಗುಂಪನ್ನು ಹುಟ್ಟುಹಾಕಿದರು. ಹಾಗೆ ಅವರ ಜೊತೆ ಕೈಗೂಡಿಸಿದ ಮೊದಲಿಗರಲ್ಲಿ ವ್ಲಾದಿಮಿರ್ ಹಾಫ್‌ಕಿನ್ ಮೊದಲಿಗರು. ಪಾರ್ಟಿಯ ಸಲುವಾಗಿ ಭೂಗತ ಚಟುವಟಿಕೆಗಳಲ್ಲಿ ತೊಡಗಿರುವವರ, ದೇಶ ಬಿಟ್ಟು ಹೋಗಬೇಕಾಗಿ ಬಂದವರ ಖರ್ಚು ವೆಚ್ಚಗಳಿಗೆ ಚಂದಾ ಎತ್ತುವುದು ಅವರ ಕರ್ತವ್ಯಗಳಲ್ಲಿ ಒಂದಾಗಿತ್ತು. ಅಲ್ಲದೆ ಕ್ರಾಂತಿಗೆ ಸಂಬಂಧಿಸಿದ ಸಾಹಿತ್ಯ ರಚನೆ ಮಾಡಿ ಹಂಚುವ ಜವಾಬ್ದಾರಿಯೂ ಅವರದೇ ಆಗಿರುತ್ತಿತ್ತು.

## ಸ್ಟೆರ್‌ಲ್ನಿಕೋವ್ ಹತ್ಯೆ

ಕೀವ್ ಮಿಲಿಟರಿ ಡಿಸ್ಟ್ರಿಕ್ಟ್‌ನ ಪಾಳೇಗಾರನೆಂದು ಕುಖ್ಯಾತಿ ಪಡೆದಿದ್ದ ಜನರಲ್ ಸ್ಟೆರ್‌ಲ್ನಿಕೋವ್ ೧೮೮೧ರ ಬೇಸಗೆಯಲ್ಲಿ ಝಾರ್‌ದೊರೆಯ ಪ್ರತಿನಿಧಿಯಾಗಿ ಒಡೆಸ್ಸಾಕ್ಕೆ ಆಗಮಿಸಿದರು. ಝಾರ್ ಸಾಮ್ರಾಜ್ಯದ ಅತ್ಯಂತ ಕ್ರೂರ ಮಿಲಿಟರಿ ಅಧಿಕಾರಿಯೆಂಬ ಖ್ಯಾತಿ ಅವರದಾಗಿತ್ತು.ದಕ್ಷಿಣ ರಷ್ಯಾ ಪ್ರದೇಶಗಳಲ್ಲಿ ಝಾರ್ ವಿರುದ್ಧದ ರಾಜದ್ರೋಹ ಕೃತ್ಯಗಳಲ್ಲಿ ತೊಡಗಿಕೊಂಡವರನ್ನು ದಯಾದಾಕ್ಷಿಣ್ಯಗಳಿಲ್ಲದೆ ಹತ್ತಿಕ್ಕುವ ಸಲುವಾಗಿ ಅವರನ್ನು ಅಲ್ಲಿಗೆ ಕಳುಹಿಸಲಾಗಿತ್ತು. ಜನರಲ್ ಸ್ಟೆರ್‌ಲ್ನಿಕೋವ್ ಒಡನೆಯೇ ಕಾರ್ಯಪ್ರವೃತ್ತರಾದರು. ಕ್ರಾಂತಿಗೆ ಸಂಬಂಧಿಸಿದವರೆಂದು ಅನುಮಾನವಿದ್ದ ನೂರಾರು ಜನರನ್ನು ಬಂಧಿಸಿ ಚಿತ್ರವಿಚಿತ್ರ ಹಿಂಸೆಗೊಳಪಡಿಸಿದರು. ಹೃದಯ ಹೀನರಾಗಿದ್ದ ಅವರು ಕಾಯಿಲೆ ಕಸಾಲೆಗಳಿಂದ ನರಳುತ್ತಿದ್ದವರು, ಮಕ್ಕಳು ಮರಿಗಳೆನ್ನದೆ ಎಲ್ಲರನ್ನೂ ನಿರ್ದಾಕ್ಷಿಣ್ಯವಾಗಿ ಕ್ರೂರ ಹಿಂಸೆಗೊಳಪಡಿಸಲಾರಂಭಿಸಿದರು. ಅವರ ಆಟಾಟೋಪಗಳನ್ನು ಸಹಿಸಲಾಗದೆ ನರೋದ್ನಾಯ ವೋಲ್ಯಾ ಪಾರ್ಟಿಯವರು ಜನರಲ್ ಸ್ಟೆರ್‌ಲ್ನಿಕೋವ್ ಅವರಿಗೆ ಮರಣದಂಡನೆ ವಿಧಿಸಿದರು. ಆದೇಶವನ್ನು ಜಾರಿಗೆ ತರಲು ಸೂಕ್ತರೆನಿಸಿದ ವ್ಯಕ್ತಿಗಳ ಆಯ್ಕೆ ಒಂದು ಕಡೆ ನಡೆಯುತ್ತಿದ್ದರೆ, ಇನ್ನೊಂದು ಕಡೆ ಜನರಲ್‌ರ ದಿನನಿತ್ಯದ ಚಲನವಲನಗಳನ್ನು ತಿಳಿದುಕೊಳ್ಳಲು ಅನ್ಸೆನ್‌ಕೋವ್ ಗುಂಪಿನವರು ನಿಯೋಜಿಸಲ್ಪಟ್ಟರು. ವ್ಲಾದಿಮಿರ್ ಮತ್ತು ಸಂಗಡಿಗರು ೧೮೮೨ರ ಜನವರಿ ತಿಂಗಳ ಸಮಯಕ್ಕೆ ಸ್ಟೆರ್‌ಲ್ನಿಕೋವ್ ಬಗೆಗೆ ಸಾಕಷ್ಟು ವಿವರವಾದ ವರದಿಯನ್ನು ವೇರಾ ಫಿಂಗರ್‌ಗೆ (ಕೋಲೋಸೋವಾ) ಒದಗಿಸಿದರು. ಜನರಲ್ ಸ್ಟೆರ್‌ಲ್ನಿಕೋವ್ ಪ್ರತಿದಿನ ಸಾಯಂಕಾಲ ಐದು ಗಂಟೆಯ ಹೊತ್ತಿಗೆ ವಾಯು ಸೇವನೆಗೆ ತೆರಳುತ್ತಿದ್ದ ಪ್ರಿಮೋರ್‌ಸ್ಕಿ ಬೋಲೆವಾರ್ಡ್ (primorsky boulevard)

ಎಂಬ ಉದ್ಯಾನವನ ಅವರ ಹತ್ಯೆಗೆ ಸೂಕ್ತ ತಾಣವೆಂದು ನಿರ್ಧಾರವಾಯಿತು. ಹಾಫ್‌ಕಿನ್ನರೇ ಬಹುಪಾಲು ಆ ಕಾರ್ಯಕ್ಕೆ ನಿಯೋಜಿತರಾಗುವ ಎಲ್ಲಾ ಸಾಧ್ಯತೆಗಳಿದ್ದವು. ಆದರೆ ಫೆಬ್ರವರಿ ೧೫ರ ಹೊತ್ತಿಗೆ ಅವರು ಮತ್ತು ಸಂಗಡಿಗ ಸ್ಟೆಪಾನ್ ರೋಮನೆನ್‌ಕೋರನ್ನು ರಾಜದ್ರೋಹದ ಆಪಾದನೆ ಹೊರಿಸಿ ದಸ್ತಗಿರಿ ಮಾಡಲಾಯಿತು. ಅವರನ್ನು ವಿವಿಧ ಬಂದೀಖಾನೆಗಳಲ್ಲಿರಿಸಿ ಚಿತ್ರವಿಚಿತ್ರ ಹಿಂಸೆಗೊಳಪಡಿಸುತ್ತಿದ್ದರು. ಇತರ ಸಾಮಾನ್ಯ ದುಷ್ಕೃತ್ಯವೆಸಗಿದ ಅಪರಾಧಿಗಳಂತೆ ಹಾಫ್‌ಕಿನ್ನರನ್ನು ನೋಡಿಕೊಳ್ಳಲಾಗುತ್ತಿತ್ತು. ಕೊರೆಯುವ ನೆಲದ ಮೇಲೆ ಬರಿಮೈಯಲ್ಲಿ ಮಲಗಬೇಕಾಯಿತು; ಅವರು ಚಳಿಯಲ್ಲಿ ಹೆಪ್ಪುಗಟ್ಟುವಂತಾಯಿತು; ಉಪವಾಸ ಅನಾಸಮಾಡಿ ಬಳಲಿಬೆಂಡಾದರು. ಪ್ರತ್ಯೇಕ ಬಂದೀಖಾನೆಯ ಕೋಣೆಯಲ್ಲಿ ಸ್ವತಃ ಸ್ಟ್ರೆಲ್ನಿಕೋವ್‌ರೇ ಹಾಫ್‌ಕಿನ್ನರನ್ನು ವಿಚಾರಣೆಗೊಳಪಡಿಸಿದರು. ಅವರು ಬಹುಶಃ ತನಿಖಾಕಾರ್ಯದಲ್ಲಿ ಹೆಚ್ಚಿನ ನೈಪುಣ್ಯತೆ ಪಡೆದವರಾಗಿಲ್ಲದ್ದರಿಂದ ಹಾಫ್‌ಕಿನ್ನರಿಂದ ಹೆಚ್ಚಿನ ವಿಷಯಗಳನ್ನು ಹೊರಗೆಡಹಲು ವಿಫಲರಾದರು. ಮುಂದೆ ಅವರನ್ನು ಹೆಚ್ಚಿಗೆ ಪೀಡಿಸದೆ ವಸಂತ ಕಾಲದ ಸಮಯದಲ್ಲಿ ಬಿಡುಗಡೆ ಮಾಡಿದರು. ಅದಾದ ಕೆಲವೇ ದಿನಗಳಲ್ಲಿ ಮಾರ್ಚ್ ೧೮ರಂದು ಇಪ್ಪತ್ತೊಂದು ವಯಸ್ಸಿನ ಜೆಲ್‌ವಕೋವ್ ಮೇಜರ್ ಜನರಲ್ ಸ್ಟ್ರೆಲ್ನಿಕೋವ್‌ರನ್ನು ಗುಂಡಿಕ್ಕಿ ಕೊಂದರು. ಜನತೆಯ ದೋಷಾರೋಪಣೆಗಳಿಗೆ ಗುರಿಯಾಗಿದ್ದ ಕ್ರೂರಿ ಜನರಲ್‌ನ ಅಂತ್ಯವಾಯಿತು. ಕೆಲವೇ ದಿನಗಳಲ್ಲಿ ನರೋದ್ನಾಯ ವೋಲ್ಯಾ ಪಾರ್ಟಿಯವರು ಈ ಕೊಲೆಗೆ ತಾವೇ ಜವಾಬ್ದಾರರೆಂದು ಒಪ್ಪಿಕೊಂಡರು; ಹಾಗೂ ಝಾರ್‌ನ ಆದೇಶಗಳನ್ನು ಜಾರಿಗೆ ತರುವ ಇತರರಿಗೂ ಅದೇ ಅಂತ್ಯ ಕಾದಿರುತ್ತದೆಂಬ ಭಿತ್ತಿ ಪತ್ರಗಳು ಎಲ್ಲೆಡೆ ಕಾಣಿಸಿಕೊಂಡವು.

ಮೇಜರ್ ಜನರಲ್ ಸ್ಟ್ರೆಲ್ನಿಕೋವ್‌ರ ಕೊಲೆಯ ಪ್ರಕರಣವನ್ನು ಸರ್ಕಾರ ಅತ್ಯಂತ ಗಂಭೀರವಾಗಿ ಪರಿಗಣಿಸಿತು ಬಹುಪಾಲು ವಿದ್ಯಾರ್ಥಿಗಳು ಮತ್ತು ನರೋದ್ನಾಯ ವೋಲ್ಯಾ ಪಾರ್ಟಿಯ ಸದಸ್ಯರೆಂದು ಗುಮಾನಿ ಇದ್ದವರನ್ನೆಲ್ಲಾ ಸೆರೆ ಹಿಡಿದು ಜೈಲುಗಳನ್ನು ಭರ್ತಿಮಾಡಿದರು. ಅವರಿಗೆಲ್ಲಾ ಕಠಿಣ ಶಿಕ್ಷಾ ಕ್ರಮಗಳನ್ನು ವಿಧಿಸಿದರು. ಜನಸಾಮಾನ್ಯರ ಮೇಲೂ ವ್ಯಾಪಕವಾದ ಧಮನಕಾರಿ ಕಾರ್ಯಕ್ರಮಗಳು ಎಡೆಬಿಡದೆ ಸಾಗಿದವು. ಕೊಲೆಗೆ ಕಾರಣರೆಂದು ಗುರುತಿಸಿದ ಜೆಲ್‌ವಕೋವ್‌ಮತ್ತು ಖಾಲ್ಟೂರಿನ್‌ರನ್ನು ಯಾವ ವಿಚಾರಣೆಗೂ ಒಳಪಡಿಸದೆ ಒಡೆಸ್ಸಾ ಬಂದೀಖಾನೆಯಲ್ಲಿ ಗಲ್ಲಿಗೇರಿಸಲಾಯಿತು. ಆದರೂ ಹಾಫ್‌ಕಿನ್ ಮತ್ತು ಅವರ ಸಂಗಡಿಗರು ಧೈರ್ಯಗುಂದದೆ ಸರ್ಕಾರದ ವಿರುದ್ಧ ತಮ್ಮ ಪ್ರಚಾರ ಮತ್ತು ಬಂಡಾಯವನ್ನು ಮುಂದುವರಿಸುತ್ತಲೇ ಇದ್ದರು; ಭೂಗತ ಚಟುವಟಿಕೆಗಳು ಇನ್ನೂ ಬಿರುಸಿನಿಂದಲೇ ಮುಂದುವರಿದವು.

ಬರುಬರುತ್ತಾ ನರೋದ್ನಾಯ ವೋಲ್ಯಾ ಪಾರ್ಟಿಯ ಕೆಲವು ಚಟುವಟಿಕೆಗಳಲ್ಲಿ ಅದ್ಯೇಗೋ ಹಾಫ್‌ಕಿನ್ನರ ಉತ್ಸಾಹ ಇಳಿಮುಖವಾಗತೊಡಗಿತು.ಪಾರ್ಟಿಯ ಧ್ಯೇಯೋದ್ದೇಶಗಳ ಬಗೆಗೆ ಅವರ ಸಹಾನುಭೂತಿಯೇನೋ ಇತ್ತು. ಆದರೆ ಅನುಸರಿಸುತ್ತಿದ್ದ ರೀತಿನೀತಿಗಳ ಬಗೆಗೆ ಅವರಲ್ಲಿ ಬೇಸರ ಉಂಟಾಗತೊಡಗಿತ್ತು; ಪಾರ್ಟಿಯ

ಕಾರ್ಯಚಟುವಟಿಕೆಗಳ ಬಗೆಗೂ ಅವರಲ್ಲಿ ಕ್ರಮೇಣ ನಿರಾಶಾಭಾವನೆಗಳು ಮೂಡುತ್ತಿದ್ದವು. ರಾಜಕೀಯ ಧ್ಯೇಯೋದ್ದೇಶಗಳನ್ನು ಸಾಧಿಸುವ ಸಲುವಾಗಿ ಕೆಲವು ವ್ಯಕ್ತಿಗಳ ವಿರುದ್ಧ ಪಾರ್ಟಿ ಜರುಗಿಸುತ್ತಿರುವ ಮೂಲಭೂತ ರೀತಿನೀತಿಗಳು ಅಷ್ಟೊಂದು ಪರಿಣಾಮಕಾರಿಗಳಾಗಲಾರವು ಎಂಬ ಅಭಿಪ್ರಾಯವು ಅವರಲ್ಲೀಗ ಮೂಡ ತೊಡಗಿತು.ಇದೊಂದು ರೀತಿಯಲ್ಲಿ ಅವರಿಗೆ ಉಂಟಾದ ಜ್ಞಾನೋದಯವೆಂದೇ ಹೇಳಬಹುದು. ಪ್ರೊ: ಮೆಕ್ನಿಕೋವ್ ಅವರ ವ್ಯಕ್ತಿತ್ವ ಮತ್ತು ಉಪದೇಶಗಳ ಬಗೆಗೆ ದೃಢವಾದ ನಂಬಿಕೆ ಇಟ್ಟುಕೊಂಡಿದ್ದ ಹಾಪ್‌ಕಿನ್ನರಿಗೆ ಅವರ ದಯಾಪರ ಮಾನವೀಯತೆಯ ಕಡೆಗೆ ಈಗ ಹೆಚ್ಚಿನ ಒಲವು ಉಂಟಾಗುತ್ತಿತ್ತೆನ್ನಬಹುದು;ಇದರಿಂದ ಯಾವುದೇ ರೀತಿಯಿಂದ ರಕ್ತಪಾತವನ್ನು ಮುಂದುವರಿಸುವುದು ಅವರಿಗೆ ಸರಿ ಕಾಣಲಿಲ್ಲ. ಬೋಲೆವಾರ್ಡ್‌ನಲ್ಲಿ ಜನರಲ್ ಸ್ಟ್ರೆಲ್ನಿಕೋವ್ ಮೇಲೆ ಹಾರಿಸಿದ ಗುಂಡು ಅವರಿಗೆ ಒಂದು ಘೋರ ಅಪರಾಧವೆನಿಸಿತು. ಆದರೂ ಅನ್ನೆನ್‌ಕೋವ್ ಗುಂಪು ಈಗಲೂ ತನ್ನ ಭಯೋತ್ಪಾದಕ ಚಟುವಟಿಕೆಗಳನ್ನು ಮುಂದುವರಿಸುತ್ತಲೇ ಇತ್ತು. ಮನಃಪರಿವರ್ತನೆ ಗೊಳಗಾಗುತ್ತಿದ್ದ ವ್ಲಾದಿಮಿರ್ ಹಾಫ್‌ಕಿನ್ ಮಾತ್ರ ನರೋದ್ನಾಯ ವೋಲ್ಯಾ ಪಾರ್ಟಿ ಯೊಡನಿದ್ದ ತಮ್ಮ ಸಂಬಂಧಗಳನ್ನು ಹಂತಹಂತವಾಗಿ ಕಳಚುವ ದಾರಿಯಲ್ಲಿದ್ದರು.

## ವಿಶ್ವವಿದ್ಯಾಲಯದಿಂದ ವಜಾ

ವಿಶ್ವವಿದ್ಯಾಲಯದ ಪರಿಸ್ಥಿತಿ ಇನ್ನೂ ನಿರಾಶಾದಾಯಕವಾಗಿಯೇ ಮುಂದು ವರಿಯಿತು. ಅಲ್ಲಿಯ ಆಡಳಿತದ ನೀತಿ ನಿಯಮಗಳನ್ನು ಸಂಪೂರ್ಣವಾಗಿ ಬದಲಾಯಿ ಸಿದ್ದರು. ವಿದ್ಯಾರ್ಥಿ ಮತ್ತು ಬೋಧಕರನ್ನೆಲ್ಲಾ ಸಾರಾಸಗಟಾಗಿ ಪೋಲಿಸಿನವರಿಗೆ ಒಪ್ಪಿಸಿದಂತಾಗಿತ್ತು. ಸಾವಿರದೆಂಟುನೂರ ಎಂಬತ್ತೆರಡರ ಶರತ್ಕಾಲದಲ್ಲಿ ಅಲ್ಲಿ ಜರುಗುತ್ತಿದ್ದ ದಮನೀಯ ಕಾರ್ಯಾಚರಣೆಗಳನ್ನು ಹಿಂತೆಗೆದುಕೊಳ್ಳುವಂತೆ 240 ವಿದ್ಯಾರ್ಥಿಗಳು ಶಿಕ್ಷಣ ಮಂತ್ರಿಗಳಿಗೆ ಮನವಿ ಸಲ್ಲಿಸಿದರು:- ''ವಿಶ್ವವಿದ್ಯಾಲಯದಲ್ಲಿ ಒಂದೆಡೆ ಸೇರಿ ಅವರ ಅವಶ್ಯಕತೆಗಳ ಬಗೆಗೆ ಚರ್ಚಿಸುವುದಕ್ಕಾಗಲೀ, ವೈಜ್ಞಾನಿಕ ವಿಷಯಗಳ ಬಗೆಗೆ ವಿಚಾರ ವಿನಿಮಯ ಮಾಡಿಕೊಳ್ಳುವುದಕ್ಕಾಗಲೀ ಅವಕಾಶಗಳೇ ಇಲ್ಲದಂತಾಗಿವೆ; ವಿಶ್ವವಿದ್ಯಾ ಲಯದ ಅಧಿಕಾರಿಗಳೇ ಅಲ್ಲದೆ ಪೊಲೀಸ್ ದಳದವರು ಅವರ ಮೇಲೆ ದಬ್ಬಾಳಿಕೆಯನ್ನು ಮುಂದುವರಿಸುತ್ತಿದ್ದಾರೆ; ಹಣಕಾಸಿನ ಕೊರತೆಯಿಂದ ವಿಶ್ವವಿದ್ಯಾಲಯದ ಕಾರ್ಯಕ್ರಮ ಗಳೆಲ್ಲಾ ಸ್ಥಗಿತವಾಗಿವೆ'' ಎಂದೆಲ್ಲಾ ಅವರ ಮನವಿಯಲ್ಲಿ ತಿಳಿಸಲಾಗಿತ್ತು.

ಆದರೂ ಸರ್ಕಾರ ಅವರ ಮನವಿಗೆ ಮಣಿಯಲಿಲ್ಲ; ದಮನಕಾರಿ ಕಾರ್ಯಗಳು ಎಂದಿನಂತೆ ಎಡೆಬಿಡದೆ ಮುಂದುವರಿಯುತ್ತಲೇ ಇದ್ದವು. ಹಲವಾರು ಸಭ್ಯ ಹಾಗೂ ಘನತೆವೆತ್ತ ಪ್ರಾಧ್ಯಾಪಕರನ್ನು ಪೋಲೀಸರು ಬಂಧಿಸಿ ಚಿತ್ರಹಿಂಸೆಗೊಳಪಡಿಸುತ್ತಲೇ ಇದ್ದರು. ಅಲ್ಲಿಯ ಸಹಜ ಸಾಮಾಜಿಕ ಚಟುವಟಿಕೆಗಳನ್ನೂ ಸಹ ಅನುಮಾನದಿಂದ ನೋಡಿ ಅವುಗಳಿಗೂ ಅವಕಾಶ ನೀಡುತ್ತಿರಲಿಲ್ಲ. ಈ ಕ್ರಮಗಳನ್ನು ವಿರೋಧಿಸಿ ಪ್ರಜಾಪ್ರಭುತ್ವದಲ್ಲಿ

ಅಚಲ ನಂಬಿಕೆಯಿರಿಸಿದ್ದ ಪ್ರೊ:ಮೆಕ್ನಿಕೋವ್ ಮತ್ತು ಇತರ ಹಲವಾರು ಬೋಧಕರು ವಿಶ್ವವಿದ್ಯಾಲಯವನ್ನೇ ತ್ಯಜಿಸುವ ಮನಸ್ಸು ಮಾಡಿದರು. ವಿಶ್ವವಿದ್ಯಾಲಯವು ಹೀಗೆ ದಿನೇದಿನೇ ಅಧೋಗತಿಗಿಳಿಯುತ್ತಿದ್ದುದನ್ನು ಗಮನಿಸಿ ಹಲವು ವಿದ್ಯಾರ್ಥಿಗಳು ರೆಕ್ಟಾರ್ (Rector) ಯಾರೋಷೆಂಕೋ (Yaroshenko) ಅವರಿಗೆ ಸುದೀರ್ಘ ಮನವಿಯೊಂದನ್ನು ಸಲ್ಲಿಸಿದರು. ಆ ಮನವಿಗೆ ವಿದ್ಯಾರ್ಥಿಗಳೇ ಅಲ್ಲದೆ ಹಲವು ಘನ ವಿದ್ವಾಂಸರೂ ಸಹಾ ಸಹಿ ಮಾಡಿದ್ದರು.

ಮನವಿಯಲ್ಲಿ ಯಾರೋಷೆಂಕೋ ಅವರು ರೆಕ್ಟಾರ್ ಹುದ್ದೆಯನ್ನು ವಹಿಸಿಕೊಂಡ ಒಂದೇ ವರ್ಷದಲ್ಲಿ ಆಗಿದ್ದ ಘಟನೆಗಳನ್ನು ವಿವರಿಸಲಾಗಿತ್ತು. ''ಆ ಸಮಯದಲ್ಲಿ ತಪ್ಪು ತಿಳುವಳಿಕೆಯಿಂದ ಹಲವಾರು ಅಶಾಂತ ಪರಿಸ್ಥಿತಿಗಳು ತಲೆದೋರಿದವು; ತಮ್ಮ ದುರಾಡಳಿತದ ಫಲವಾಗಿ ಹಲವು ಘನತೆವೆತ್ತ ಬೋಧಕರು ವಿಶ್ವವಿದ್ಯಾಲಯವನ್ನೇ ತೊರೆದು ಹೋಗುವಂತಾಗಿದೆ. ನಿಮ್ಮ ಆಡಳಿತ ವಿಧಾನಗಳಿಂದ ವಿಶ್ವವಿದ್ಯಾಲಯಕ್ಕೆ ಅಪಾರ ಹಾನಿಯಾಗುತ್ತಿದೆ; ಆದರಿಂದ ತಾವು ಹುದ್ದೆಯನ್ನು ತ್ಯಜಿಸಬೇಕಾಗಿ ಆಗ್ರಹಪಡಿಸುತ್ತೇವೆ'' ಎಂದು ಮುಂತಾಗಿ ಹೇಳಲಾಗಿತ್ತು. ಈ ಮನವಿಗೆ ಸಹಿ ಹಾಕಲು ಇಚ್ಛಿಸುವವರು ಪರಿಣಾಮವಾಗಿ ಉಂಟಾಗಬಹುದಾದ ತೊಂದರೆಗಳನ್ನು ಸಹಿಸಲು ತಯಾರಾದವರಾಗಿರಬೇಕು ಎಂದೂ ಸಹ ಎಚ್ಚರಿಸಲಾಗಿತ್ತು. ಯಾರೋಷೆಂಕೋರಂಥವರು ಅವರ ಮೇಲಿನವರನ್ನು ಮೆಚ್ಚಿಸಲು ಯಾವುದೇ ಕ್ರಮ ತೆಗೆದಕೊಳ್ಳಲು ಹಿಂಜರಿಯುವಂಥವರಲ್ಲ. ಹಾಗಾಗಿ ಸುಮಾರು 200 ಜನ ಸಹಿ ಮಾಡಬಹುದೆಂದು ನಿರೀಕ್ಷಿಸಿದ್ದ ಮನವಿಗೆ ಕೇವಲ ತೊಂಬತ್ತು ಜನ ಮಾತ್ರ ಸಹಿ ಮಾಡಿದ್ದರು. ಅಂತಹ ಕಷ್ಟಕೋಟಲೆಗಳಿಗೆ ಯಾವಾಗಲೂ ತಯಾರಿರುತ್ತಿದ್ದ ವ್ಲಾದಿಮಿರ್ ಹಾಫ್‌ಕಿನ್ ಸಹಿ ಹಾಕಿದ್ದರು. ನಿರೀಕ್ಷಿಸಿದಂತೆ ಹಾಫ್‌ಕಿನ್ನರೂ ಸೇರಿದಂತೆ ಏಳು ವಿದ್ಯಾರ್ಥಿಗಳನ್ನು ವಜಾಮಾಡಿದರು. ಇನ್ನೊಂದು ವಾರದಲ್ಲೇ ಪ್ರೊ: ಮೆಕ್ನಿಕೋವ್ ವಿಶ್ವವಿದ್ಯಾಲಯಕ್ಕೆ ತಮ್ಮ ರಾಜೀನಾಮೆ ಸಲ್ಲಿಸಿ ಮತ್ತೆಂದೂ ಹಿಂತಿರುಗದಂತೆ ಹೋಗಿಬಿಟ್ಟರು.

೨

# ಅನಿರೀಕ್ಷಿತ ತಿರುವುಗಳ ಸರಣಿ

## ಹತಾಶೆಯ ಸುಳಿಯಲ್ಲಿ

ವಿಶ್ವವಿದ್ಯಾಲಯದಿಂದ ಹೊರತಳ್ಳಲ್ಪಟ್ಟ ನಂತರ ವ್ಲಾದಿಮಿರ್ ಹಾಫ್‌ಕಿನ್ನರಿಗೆ ಮುಂದಿನ ದಾರಿ ಏನೆಂಬುದರ ಬಗೆಗೆ ಚಿಂತಿಸುವಂತಾಯಿತು. ನರೋದ್ನಾಯ ವೋಲ್ಯಾಕ್ರಾಂತಿಕಾರಿ ಪಕ್ಷದ ಚಟುವಟಿಕೆಗಳಿಂದಲೂ ಅವರೀಗ ಹಿಂಸರಿದಿದ್ದರು; ಜೀವನಕ್ಕೆ ಬೇರಾವ ದಾರಿಯೂ ಇರಲಿಲ್ಲ. ವಿದ್ಯಾಭ್ಯಾಸವೂ ಅರ್ಧದಲ್ಲಿ ಕೊನೆಗೊಂಡ ಹಾಗಿತ್ತು. ಮುಂದಿನ ವಿದ್ಯಾಭ್ಯಾಸದ ಸಲುವಾಗಿ ಸೆಯಿಂಟ್ ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯಕ್ಕೆ ಅರ್ಜಿಸಲ್ಲಿಸಿದರು. ಆ ವಿಶ್ವವಿದ್ಯಾಲಯದವರು ಹಾಪ್‌ಕಿನ್ನರ ಪೂರ್ವಾಪರಗಳ ಬಗೆಗೆ ಒಡಿಸ್ಸಾದ ವಿಶ್ವವಿದ್ಯಾಲಯದವರೊಡನೆ ಪತ್ರವ್ಯವಹಾರ ಮಾಡಿದರು. ಮತ್ತೆ ಎಂದಿನಂತೆ ಪೊಲೀಸ್ ಇಲಾಖೆಯವರ ಪ್ರವೇಶವಾಯಿತು. ಅವರು ಹಾಫ್‌ಕಿನ್ನರ ಬಗೆಗೆ ಹಿಂದೆ ದಾಖಲಾಗಿದ್ದ ಅಪರಾಧಗಳನ್ನೆಲ್ಲಾ ಬೆಳಕಿಗೆ ತಂದರು. ವಿಷಯ ತಿಳಿದ ಮೇಲೆ ಸೆಯಿಂಟ್ ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದವರು ಅವರಿಗೆ ಪ್ರವೇಶವನ್ನು ನಿರಾಕರಿಸಿದರು.

ಬೇಸತ್ತ ಹಾಫ್‌ಕಿನ್ ಒಡೆಸ್ಸಾ ನಗರವನ್ನು ತ್ಯಜಿಸಿ ಬೇರೊಂದು ನಗರಕ್ಕೆ ವಲಸೆ ಹೋಗುವ ನಿರ್ಧಾರ ಮಾಡಿದರು. ಆ ಸಲುವಾಗಿ ಗರ್ವನರ್ ಜನರಲ್ಲರ ಸಮ್ಮತಿಗಾಗಿ ಅರ್ಜಿ ಸಲ್ಲಿಸಿದರು. ಈಗಲೂ ಪೊಲೀಸ್ ಇಲಾಖೆ, ಒಳಾಡಳಿತ ಇಲಾಖೆ ಮುಂತಾದ ಕಡೆಗಳಲೆಲ್ಲಾ ಅರ್ಜಿಯನ್ನು ಜಾಲಾಡಿಸಿದರು-ವಿಶ್ವವಿದ್ಯಾಲಯದಲ್ಲಿದ್ದಾಗ ಹಾಫ್‌ಕಿನ್ನರ ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು; ಪೊಲೀಸರು ಅವರ ಮೇಲೆ ಕಣ್ಣಾವಲಿರಿಸಿದ್ದಾರೆ; ಅದು ಇನ್ನೂ ಮೂರು ವರ್ಷ ಮುಂದುವರಿಯಲಿದೆ; ಅಲ್ಲಿಯವರೆಗೆ ಅವರು ಒಡೆಸ್ಸಾ ನಗರದಿಂದ ಹೊರಹೋಗಲು ಅನುಮತಿ ನೀಡಲಾಗುವುದಿಲ್ಲ-ಎಂದು ಪೋಲಿಸರು ವರದಿ ಮಾಡಿದರು.

ಒಡೆಸ್ಸಾ ನಗರದ ವಾತಾವರಣವನ್ನೇ ತ್ಯಜಿಸಿ ಬೇರೆಲ್ಲಾದರೂ ಜೀವನ ನಡೆಸಬಹುದೆಂಬ ಅವರ ಅಭಿಲಾಷೆ ಫಲಿಸಲಿಲ್ಲ. ವಿಶ್ವವಿದ್ಯಾಲಯದ ಅಭ್ಯಾಸವನ್ನು ಬಿಟ್ಟು ಎಂಟು ವರ್ಷಗಳೇ ಉರುಳಿದ್ದವು. ಇತ್ತ ನಿಶ್ಚಿತ ಉದ್ಯೋಗವೂ ಇರಲಿಲ್ಲ. ಕೆಲ ಸಾರಿ ಅನ್ನಾಹಾರಗಳಿಗೂ ಗತಿ ಇಲ್ಲದೆ ಉಪವಾಸ ಬೀಳಬೇಕಾಗುತ್ತಿತ್ತು. ಬಾಡಿಗೆಗಿದ್ದ ಮನೆಯ

ವರಿಗೆ ಕಾಲಕಾಲಕ್ಕೆ ಬಾಡಿಗೆ ಸಂದಾಯ ಮಾಡಲು ಸಾಧ್ಯವಾಗುತ್ತಿರಲಿಲ್ಲವಾದುದರಿಂದ ಮಾಲೀಕರು ಮನೆಯನ್ನು ತ್ಯಜಿಸುವಂತೆ ಒತ್ತಾಯ ಮಾಡುತ್ತಿದ್ದರು. ಹಿಂದಿನ ಕೆಲವು ಒಡನಾಡಿಗಳು ಪೊಲೀಸರ ಅತಿಥಿಗಳಾಗಿದ್ದರು; ಮತ್ತೆ ಕೆಲವರು ದೇಶಭ್ರಷ್ಠರಾಗಿ ಹೊರಹೋಗಿದ್ದರು; ಇನ್ನು ಕೆಲವರು ರೋಗಗ್ರಸ್ಥರಾಗಿ ಮರಣ ಶಯ್ಯೆಯಲ್ಲಿದ್ದರು. ಅನ್ನೆನ್ ಕೋವ್ ಗುಂಪೂ ಸೇರಿದಂತೆ ನಾರೋದ್ನಾಯ ವೋಲ್ಯಾ ಪಾರ್ಟಿಯ ಸದಸ್ಯರನ್ನೆಲ್ಲಾ ದಸ್ತಗಿರಿ ಮಾಡಿ ಸೆರೆಮನೆಗೆ ಕಳುಹಿಸಿದ್ದರು. ಇದೆಲ್ಲದರ ನಡುವೆ ಹಾಫ್‌ಕಿನ್ ದಸ್ತಗಿರಿಯಾಗದಿದ್ದುದೇ ಒಂದು ಅಚ್ಚರಿಯ ಸಂಗತಿಯಾಗಿತ್ತು. ಬಹುಶಃ ಬಂಧನ ಕ್ಕೊಳಗಾದ ಒಡನಾಡಿಗಳು ತನಿಖೆಗಳ ಸಮಯದಲ್ಲಿ ಇವರ ಹೆಸರನ್ನು ಬಹಿರಂಗಪಡಿಸದಿದ್ದುದೇ ಅವರು ಹೊರಗುಳಿಯಲು ಕಾರಣವಾಗಿರಬಹುದು. ಹಾಫ್‌ಕಿನ್ ಸೆರೆಮನೆಯಿಂದ ಹೊರಗುಳಿದುಕೊಂಡಿದ್ದರೂ ಅವರ ಸುತ್ತ ನಿರಾಶಾದಾಯಕ ವಾತಾವರಣ ಕವಿದುಕೊಂಡಿತ್ತು.

ಪೊಲೀಸರ ನಿರಂತರ ಹತ್ತಿಕ್ಕುವ ಕಾರ್ಯಾಚರಣೆಗಳಿಂದ 1883-1884 ನಡುವಿನ ಸಮಯದಲ್ಲಿ ನರೋದ್ನಾಯ ವೋಲ್ಯಾ ಪಾರ್ಟಿ ಹೆಚ್ಚು ಕಡಿಮೆ ನಿರ್ನಾಮವಾಗಿತ್ತು. ಹಾಫ್‌ಕಿನ್ ಒಬ್ಬರೇ ಪೊಲೀಸರ ಬಲೆಯಿಂದ ತಪ್ಪಿಸಿಕೊಂಡಿದ್ದವರು. ಒಬ್ಬಂಟಿ ಜೀವನ ನಡೆಸುವ ಕಷ್ಟ ಒಂದು ಕಡೆಯಾದರೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸುವ ಬಗೆಗೆ ಚಿಂತೆ ಇನ್ನೊಂದು ಕಡೆ. ಕೆಲವು ಶ್ರೀಮಂತರ ಮಕ್ಕಳಿಗೆ ಖಾಸಗಿ ಪಾಠ ಹೇಳಿಕೊಡುವ ಅವಕಾಶಗಳನ್ನು ಅದು ಹೇಗೋ ಪಡೆದುಕೊಂಡರು. ಅದರಿಂದ ಅನ್ನಾಹಾರಗಳನ್ನು ಮತ್ತೆ ಒದಗಿಸಿಕೊಳ್ಳಲು ಸಾಧ್ಯವಾಯಿತು. ಜೊತೆಗೆ ಹಿಂದೆ ಅರ್ಧಕ್ಕೆ ನಿಲ್ಲಿಸಿದ ವಿದ್ಯಾಭ್ಯಾಸವನ್ನು ಖಾಸಗಿಯಾಗಿ ಮತ್ತೆ ಮುಂದುವರಿಸಿದರು. ಪರೀಕ್ಷೆಗಾಗಿ ಸಲ್ಲಿಸಬೇಕಾಗಿದ್ದ ಮಹಾ ಪ್ರಬಂಧವನ್ನು ರಾತ್ರಿಯ ಬಿಡುವಿನ ವೇಳೆಯಲ್ಲಿ ಬರೆದು ಮುಗಿಸಿದರು. ಅದನ್ನು ವಿಶ್ವವಿದ್ಯಾಲಯದವರಿಗೆ ಒಪ್ಪಿಸುವಲ್ಲಿ ಬಹಳಷ್ಟು ಶ್ರಮಪಡಬೇಕಾಯಿತು. ವಿಶ್ವವಿದ್ಯಾಲಯದಿಂದ ಒಂದು ಸಾರಿ ಉಚ್ಚಾಟನೆಗೊಂಡ ಹಾಫ್‌ಕಿನ್‌ರ ಪ್ರಬಂಧವನ್ನು ನೋಂದಣಿ ಮಾಡಿಕೊಳ್ಳಲು ಬಹಳಷ್ಟು ಸತಾಯಿಸಿದರು. ಆದರೆ ಜಿಗುಟು ಸ್ವಭಾವದ ಹಾಫ್‌ಕಿನ್ ಛಲ ಬಿಡದೆ ಶ್ರಮಿಸಿ ಅಧಿಕಾರಿಗಳ ಮನ ಒಲಿಸಿ ಪ್ರಬಂಧವನ್ನು ನೋಂದಣಿ ಮಾಡಿಸುವಲ್ಲಿ ಯಶಸ್ವಿಯಾಗಿದ್ದರು.

ಹಾಫ್‌ಕಿನ್ನರ ಮಹಾಪ್ರಬಂಧವನ್ನು 1884ರ ಮಾರ್ಚ್‌ನಲ್ಲಿ ವಿಶ್ವವಿದ್ಯಾಲಯದ ಅಕಾಡೆಮಿಕ್ ಕೌನ್ಸಿಲ್‌ನವರು ಅನುಮೋದಿಸಿದರು. ಅದೊಂದು ವೈಶಿಷ್ಟ್ಯ ಪೂರ್ಣವಾದುದೆಂದು ಪರಿಗಣಿಸಲ್ಪಟ್ಟಿತು. ಹಾಗೂ ಅವರಿಗೆ ಡಾಕ್ಟರ್ ಆಫ್‌ಸೈನ್ಸ್ (D.Sc)ಪದವಿಯನ್ನು ಮಂಜೂರು ಮಾಡಿತು (1885). ಮುಂದುವರಿದು ಹಾಫ್‌ಕಿನ್ ಆ ಸಲುವಾಗಿ ಸಲ್ಲಿಸಬೇಕಾದ ಹಲವು ಶುಲ್ಕಗಳನ್ನೂ ಮನ್ನಾಮಾಡುವಂತೆ ಶಿಫಾರಸ್ಸು ಮಾಡಿದರು!

ವ್ಲಾದಿಮಿರ್ ಹಾಫ್‌ಕಿನ್ನರು D.Scಯಂಥ ಪದವಿಯನ್ನು ಪಡೆದುಕೊಂಡಿದ್ದರೂ ಆಗಿನ ವಾತಾವರಣದಲ್ಲಿ ಅದರ ಬೆಂಬಲದಿಂದ ಯಾವುದೇ ಕೆಲಸವನ್ನು ಗಿಟ್ಟಿಸಿಕೊಳ್ಳಲು

ಸಾಧ್ಯವಾಗದಂಥ ಪರಿಸ್ಥಿತಿಯಲ್ಲಿದ್ದರು. ವಿಶ್ವವಿದ್ಯಾಲಯದವರು ಅವರನ್ನು ಎರಡು ಸಾರಿ ಹೊರಹಾಕಿದ್ದರು. ಕ್ರಾಂತಿಕಾರಿ ಚಳವಳಿಗಳಲ್ಲಿ ಭಾಗವಹಿಸಿದ್ದಕ್ಕೆ ಪೊಲೀಸರ ಹತ್ತಿರ ಬಲವಾದ ದಾಖಲೆಗಳಿದ್ದವು. ಅವರು ಹಿಂದೆ ಭಾಗಿಯಾಗಿದ್ದ ಹಲವು ಸಮಾಜ ವಿರೋಧಿ ಚಟುವಟಿಕೆಗಳಿಂದಾಗಿ ಈಗ ಯಾವುದೇ ಗೌರವಾನ್ವಿತ ಕೆಲಸ ದೊರೆಯು ವಂತಿರಲಿಲ್ಲ. ಹಾಗಾಗಿ ವಿಶ್ವವಿದ್ಯಾಲಯದಲ್ಲಿ ಹಲವು ಬೋಧಕರ ಹುದ್ದೆಗಳಿದ್ದರೂ, ಕ್ರಾಂತಿಕಾರಿ ಅಧ್ಯಾಪಕನೊಬ್ಬನ ಬೋಧನೆಗಳಿಗೆ ವಿದ್ಯಾರ್ಥಿಗಳನ್ನು ಒಡ್ಡುವುದಕ್ಕೆ ಅವರು ತಯಾರಿರಲಿಲ್ಲ. ಆದರೂ ಅಂತಹ ಅಪಾಯಕರವೆಂದು ಪರಿಗಣಿಸಲಾಗದಿದ್ದ ಪ್ರಾಣಿಶಾಸ್ತ್ರ ವಿಭಾಗದ ವಸ್ತುಸಂಗ್ರಹಾಲಯದ ಕ್ಯುರೇಟರ್ ಹುದ್ದೆಗೆ ಯಾರೋ ಸಲಹೆ ಮಾಡಿದರಂತೆ. ಅದಕ್ಕೂ, ರಾಷ್ಟ್ರಕ್ಕೆ ವಿಧೇಯನಾಗಿರುತ್ತಾನೆಂದು ನಗರದ ಮೇಯರ್ ಅವರಿಂದ ದೃಢೀಕರಣ ಪತ್ರ ಹಾಜರುಪಡಿಸುವಂತೆ ಕರಾರು ವಿಧಿಸಿದರು. ಪೊಲೀಸರು ಮತ್ತೆ ಮೇಯರ್ ಎದುರಿಗೆ ಹಾಫ್‌ಕಿನ್ನರ ಜಾತಕವನ್ನು ತೆರೆದಿಟ್ಟರು. ಆ ಹಿನ್ನೆಲೆಯಲ್ಲಿ ಮೇಯರ್ ವಿಧೇಯತಾ ದೃಢೀಕರಣ ಪತ್ರ ನೀಡಲು ನಿರಾಕರಿಸಿದರು. ಈ ಪರಿಸ್ಥಿತಿಯಲ್ಲಿ ಅತ್ಯಂತ ಕಷ್ಟಪಟ್ಟು ಗಳಿಸಿದ D.Sc ಡಿಗ್ರಿ ಅವರು ಸಾಧಿಸಿದ ವಿಜಯವೋ ಇಲ್ಲವೇ ಅಪಜಯವೋ ಎಂಬುದನ್ನು ಅರ್ಥಮಾಡಿಕೊಳ್ಳಲಾರದಾದರು.

ದಿನೇ ದಿನೇ ಹತಾಶೆಗೊಳಗಾಗುತ್ತಿದ್ದ ಹಾಫ್‌ಕಿನ್ನರ ಪರಿಸ್ಥಿತಿಯನ್ನು ಗಮನಿಸುತ್ತಿದ್ದ ನೆಚ್ಚಿನ ಗುರು ಪ್ರೊ:ಮೆಕ್ನಿಕೋವ್ ಅವರು ಯಾವುದಾದರೊಂದು ಸಂಶೋಧನಾ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುವಂತೆ ಸಲಹೆ ಮಾಡಿದರು. ಹಾಫ್‌ಕಿನ್ ಹಿಂದೆ ನಡೆಸುತ್ತಿದ್ದ ಸಮುದ್ರದ ಏಕಾಣು ಜೀವಿ ಪ್ರೋಟೋಜೋವ ಕುರಿತ ಹೆಚ್ಚಿನ ಸಂಶೋಧನೆ ಗಳನ್ನೇ ಮುಂದುವರಿಸುವಂತೆ ಹೇಳಿದರು. ಬೇರಿನ್ನಾವ ದಾರಿಯೂ ಕಾಣದಿದ್ದ ಹಾಫ್‌ಕಿನ್ ತಮ್ಮ ಮುಂದಿನ ಜೀವಮಾನವನ್ನೆಲ್ಲಾ ವಿಜ್ಞಾನಕ್ಕೆ ಅರ್ಪಿಸುವ ಮನಸ್ಸು ಮಾಡಿ ಆ ದಾರಿಯನ್ನೇ ಆರಿಸಿಕೊಳ್ಳ ಬೇಕಾಯಿತು.

ಒಡೆಸ್ಸಾದಲ್ಲಿ ಜೀವನ ಸಾಗಿಸಲು ಖಾಸಗಿಯಾಗಿ ಕೆಲವು ಸಣ್ಣಪುಟ್ಟ ಕೆಲಸಗಳನ್ನು ದೊರಕಿಸಿಕೊಂಡಿದ್ದ ಹಾಫ್‌ಕಿನ್ ಕೆಲಸವುಯ ಬಿಡುವು ಮಾಡಿಕೊಂಡು ತಮ್ಮ ಸಂಶೋಧನೆಯನ್ನು ಮುಂದುವರಿಸಲು ಕಪ್ಪು ಸಮುದ್ರದ ವಲಯಕ್ಕೆ ಆಗಾಗ್ಗೆ ಹೋಗಿ ಬರಲಾರಂಭಿಸಿದರು. ಸತತವಾಗಿ ಒಂದು ವರ್ಷ ಅಲ್ಲಿ ಜರುಗಿಸಿದ ಸಂಶೋಧನೆಯ ಫಲವಾಗಿ-ಕಪ್ಪು ಸಮುದ್ರದ ಪ್ರೋಟೋಜೋವಾ ಅಸ್ಟ್ರೇಸಿಯಾ (ASTRASIA) ಎಂಬ ಮಹಾ ಪ್ರಬಂಧವನ್ನು ಪ್ಯಾರಿಸ್ಸಿನ **ಅನೇಲ್ಸ್ ಡೆಸ್‌ಸೈನ್ಸಸ್ ನ್ಯಾಚುರೇಲಿಸ್** ವಿಜ್ಞಾನ ಪತ್ರಿಕೆ (1885) ಪ್ರಕಟಿಸಿತು. ಇನ್ನೊಂದೇ ವರ್ಷದಲ್ಲೇ ಅದೇ ಪತ್ರಿಕೆ ಅವರು ಹಸಿರು ಯುಗ್ಲೀನಾಗಳ (GREEN EUGLENAS) ಕುರಿತು ರಚಿಸಿದ ಸಂಶೋಧನಾ ಪ್ರಬಂಧ ವನ್ನು ಪ್ರಕಟಿಸಿತು.

ಈ ಪ್ರಕಟಣೆಗಳಿಂದ ಪ್ರಕೃತಿ ವಿಜ್ಞಾನಿಗಳು ಹಾಫ್‌ಕಿನ್ನರ ಬಗೆಗೆ ಆಸಕ್ತಿವಹಿಸು ವಂತಾಯಿತು. ಮುಂದೆ ನೋವೋರೊಸ್ಸಿಕ್ ನ್ಯಾಚುರಲಿಸ್ಟ್ಸ್ ಸೊಸೈಟಿಯಲ್ಲಿ ಜರುಗುತ್ತಿದ್ದ

ಭಾಷಣಕಾರರ ಪಟ್ಟಿಯಲ್ಲಿ ವ್ಲಾದಿಮಿರ್ ಹಾಫ್‌ಕಿನ್ ಎಂಬ ಹೆಸರು ಆಗಾಗ್ಗೆ ಕಾಣಿಸಿಕೊಳ್ಳುವಂತಾಯಿತು. ಅವರು ಮಂಡಿಸುತ್ತಿದ್ದ ಲೇಖನಗಳ ಬಗೆಗೆ ಕುತೂಹಲ ಕರವಾದ ವಾದವಿವಾದಗಳು ಆಗುತ್ತಿದ್ದವಂತೆ. ಹಾಫ್‌ಕಿನ್ನರ ವೈಜ್ಞಾನಿಕ ತಿಳುವಳಿಕೆ ಅದೆಷ್ಟು ವಿಕಾಸಗೊಂಡಿತ್ತೆಂದರೆ ಅವರೊಂದು ಸಾರಿ ತಮ್ಮ ಭಾಷಣದಲ್ಲಿ ಹೆಸರಾಂತ ಜೀವ ವಿಕಾಸ ಪ್ರವರ್ತಕ ಚಾರ್ಲ್ಸ್ ಡಾರ್ವಿನ್‌ರ ಪ್ರತಿಪಾದನೆಗಳನ್ನೇ ಪ್ರಶ್ನಿಸುವ ಮಟ್ಟಕ್ಕೆ ಹೋಗಿದ್ದರಂತೆ. ನೆರೆದಿದ್ದ ಬಹುಪಾಲು ವಿಜ್ಞಾನಿಗಳು ಹಾಫ್‌ಕಿನ್ನರ ಪ್ರತಿಪಾದನೆಗಳನ್ನು ತೀವ್ರವಾಗಿ ವಿರೋಧಿಸಿ ಮಾತನಾಡಬೇಕಾಯಿತಂತೆ.

## ಹೊಸವ್ಯಾಮೋಹ

ಒಡೆಸ್ಸಾ ವಿಶ್ವವಿದ್ಯಾಲಯದಲ್ಲಿದ್ದ ಪ್ರಮುಖ ಪ್ರಾಧ್ಯಾಪಕರನ್ನೆಲ್ಲಾ ವಜಾ ಮಾಡಿದ್ದನ್ನು ಈ ಮೊದಲೇ ಪ್ರಸ್ತಾಪಿಸಲಾಗಿದೆ. ಅದೀಗ ಒಂದು ಸ್ಮಶಾನ ಸದೃಶ ತಾಣ ವಾದಂತಿತ್ತು. ಒಡೆಸ್ಸಾದಲ್ಲಿ ಇನ್ನೂ ಉಳಿದುಕೊಂಡಿದ್ದ ಪ್ರೊ: ಮೆಕ್ನಿಕೋವ್‌ರಿಗೆ ಸರ್ಕಾರಿ ಮೂಲದಿಂದ ಕಿರುಕುಳಗಳು ಮುಂದುವರಿಯುತ್ತಲೇ ಇದ್ದವು. ರಷ್ಯಾವನ್ನು ತ್ಯಜಿಸಿ ಹೊರಹೋಗುವ ಯೋಚನೆ ಅವರಲ್ಲುಂಟಾಗತೊಡಗಿತು. ಆ ಸಮಯದಲ್ಲೇ (1888) ಫ್ರಾನ್ಸ್‌ನ ಹೆಸರಾಂತ ವಿಜ್ಞಾನಿ ಲೂಯಿ ಪ್ಯಾಶ್ಚರ್ ತಮ್ಮದೇ ಆದ ಸಂಶೋಧನಾಲಯ ಪ್ಯಾಶ್ಚರ್ ಇನ್ಸ್ಟಿಟ್ಯೂಟನ್ನು ಸ್ಥಾಪಿಸಿದ್ದರು. ಪ್ರೊ:ಮೆಕ್ನಿಕೋವ್ ಆ ಸಂಸ್ಥೆಯನ್ನು ಸೇರಿಕೊಳ್ಳುವಂತೆ ಆಹ್ವಾನವನ್ನೂ ನೀಡಿದ್ದರು. ಆಹ್ವಾನವನ್ನು ಸ್ವೀಕರಿಸಿ ಮೆಕ್ನಿಕೋವ್ ಪ್ಯಾರಿಸ್‌ಗೆ ತೆರಳಿದರು (1888). ಒಡೆಸ್ಸಾದಿಂದ ತಮ್ಮ ಗುರುವಿನ ನಿರ್ಗಮನ ಹಾಫ್‌ಕಿನ್ನರನ್ನು ಮತ್ತೂ ನಿರಾಶೆಯತ್ತ ತಳ್ಳಿತು. ಇನ್ನೂ ಒಡೆಸ್ಸಾದಲ್ಲಿರುವುದರಿಂದ ಯಾವುದೇ ಉದ್ದೇಶ ಸಾಧನೆಯಾಗಲಾರದೆಂಬುದು ಮನವರಿಕೆಯಾಗತೊಡಗಿತು. ಗುರು ಮೆಕ್ನಿಕೋವರನ್ನನುಸರಿಸಿ ತಾನೂ ಪ್ಯಾರಿಸ್ಸಿಗೆ ಹೋಗಬಾರದೇಕೆಂಬ ತುಡಿತ ಅವರ ಬೆನ್ನು ಹತ್ತಿತು. ಪ್ಯಾರಿಸ್ಸಿನಲ್ಲಿ ಆಗಲೇ ಲೂಯಿಪ್ಯಾಶ್ಚರ್ ನೇತೃತ್ವದಲ್ಲಿ ದೃಷ್ಟಿಗೆ ಅಗೋಚರವೆನಿಸಿದ ಜೀವಾಣುಗಳ ಬಗೆಗೆ ನಡೆಯುತ್ತಿದ್ದ ಸಂಶೋಧನೆಗಳು ಹಾಫ್‌ಕಿನ್ನರ ಗಮನಕ್ಕೂ ಬಂದಿತ್ತು; ಅಲ್ಲದೆ ಆ ಬಗೆಗೆ ತೀವ್ರ ಆಸಕ್ತಿಯೂ ಉಂಟಾಗಿತ್ತು. ಆಗ ತಾನೇ ಹೊಸದಾಗಿ ಕೇಳಿ ಬರುತ್ತಿದ್ದ ಸೂಕ್ಷ್ಮಜೀವಾಣುಗಳ ಹೆಸರುಗಳು ಬ್ಯಾಕ್ಟೀರಿಯಾ, ಬ್ಯಾಸಿಲೈ, ವಿಬ್ರಿಯೋ ಮುಂತಾವುಗಳ ಬಗೆಗೆ ಕುತೂಹಲಕರವಾದ ಸುದ್ದಿಗಳು ಅವರನ್ನು ಚಕಿತಗೊಳಿಸುತ್ತಿದ್ದವು. ಬ್ಯಾಕ್ಟೀರಿಯಾಲಜಿಸ್ಟ್, ಮೈಕ್ರೋಸ್ಕೋಪಿಸ್ಟ್ ಮುಂತಾದ ಹೊಸ ಹೊಸ ವೃತ್ತಿಗಳತ್ತ ಅವರ ಆಕರ್ಷಣೆ ಒಲಿಯುತ್ತಿತ್ತು. ಮಾನವರ ಕಾಯಿಲೇ ಅಲ್ಲದೆ ಪಶುಪಕ್ಷಿಗಳ ವ್ಯಾಧಿಗಳಿಗೂ ಈ ಹೊಸ ಸಂಶೋಧನೆಗಳ ಫಲಿತಾಂಶ ಉಪಯೋಗಕ್ಕೆ ಬರುತ್ತವೆಂಬುದು ಅಚ್ಚರಿ ಯನ್ನುಂಟುಮಾಡುತ್ತಿತ್ತು. ಆ ವಿಷಯಗಳ ಬಗೆಗೆ ಪರಿಣಿತಿ ಪಡೆಯುವುದಕ್ಕೆ ಹಾಫ್‌ಕಿನ್ನರ ಮನಸ್ಸು ಹಾತೊರೆಯುತ್ತಿತ್ತು. ಜರ್ಮನ್ ಮತ್ತು ಫ್ರೆಂಚ್ ಭಾಷೆಗಳ ಪರಿಚಯವಿದ್ದ ಹಾಫ್‌ಕಿನ್ ಆ ಭಾಷೆಯ ವಿಜ್ಞಾನ ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಿದ್ದರು.

ರಾಬರ್ಟ್‌ಖಾಕ್ ನೆರಡಿ ರೋಗಾಣುಗಳನ್ನು ಕಂಡು ಹಿಡಿದದ್ದು; ಲೂಯಿ ಪ್ಯಾಶ್ಚರ್ ಆ ರೋಗವನ್ನು ತಡೆಗಟ್ಟಲು ಯಶಸ್ವಿಯಾದ ಲಸಿಕೆಯನ್ನು ರೂಪಿಸಿದ ಚಿತ್ತಾಕರ್ಷಕ ಸುದ್ದಿಗಳು ಅವರನ್ನು ಕನಸಿನ ಲೋಕಕ್ಕೆ ಕೊಂಡೊಯ್ಯುತಿದ್ದವು. ಅಂತಹ ಮಹಾನ್ ವಿಜ್ಞಾನಿಗಳ ಒಡನಾಟದಲ್ಲಿ ಕಾರ್ಯ ನಿರ್ವಹಿಸುವ ಅವಕಾಶಗಳಿಗೆ ಅವರ ಮನಸ್ಸು ಹಾತೊರೆಯುತ್ತಿತ್ತು.

ಒಡೆಸ್ಸಾದಲ್ಲಿನ ಕಿರುಕುಳ, ದಬ್ಬಾಳಿಕೆ ವಾತಾವರಣ ಉಸಿರು ಕಟ್ಟಿಸುವಂತ್ತಿತ್ತು. ಪ್ರಾಣಿಶಾಸ್ತ್ರ ಮ್ಯೂಸಿಯಂನಲ್ಲಿ ದೊರೆಯುತ್ತದೆಂಬ ಕೆಳದರ್ಜೆಯ ತಾಂತ್ರಿಕ ಕೆಲಸದ ಆಶಾಭಾವನೆಯೊಂದನ್ನು ಬಿಟ್ಟರೆ ಅವರಿಗೆ ಅಲ್ಲಿ ಮತ್ತೇನು ಭವಿಷ್ಯವಿದ್ದಂತಿರಲಿಲ್ಲ. ಪ್ರೊ: ಮೆಕ್ನಿಕೋವ್‌ರಂಥ ಮಹಾನ್ ವಿಜ್ಞಾನಿಯೇ ಅಲ್ಲಿನ ಪರಿಸ್ಥಿತಿಯನ್ನು ಸಹಿಸಲಾರದೆ ಪ್ಯಾರಿಸ್‌ಗೆ ತೆರಳುವಂತಾದರೆ, ಹಾಫ್‌ಕಿನ್ನರಂಥ ಬಡಪಾಯಿಯ ಪಾಡೇನಾಗಬೇಕು? ಕ್ರಮೇಣ ಅವರೂ ಸಹ ರಷ್ಯಾವನ್ನು ಬಿಟ್ಟು ಹೋಗುವ ನಿರ್ಧಾರಕ್ಕೆ ಬರುತ್ತಾರೆ. ಹೊರ ದೇಶವೊಂದರ ಸಂಶೋಧನಾಲಯದಲ್ಲಿ ಅದೆಷ್ಟೇ ಕೀಳು ದರ್ಜೆಯ ಕೆಲಸವಾದರೂ ಗೌರವಯುತವಾಗಿ ಬದುಕಬೇಕೆಂಬುದು ಅವರ ಆಶಯವಾಯಿತು.

ಈ ಉದ್ದೇಶ ಸಾಧನೆಗಾಗಿ ಹಾಫ್‌ಕಿನ್ ಮೊದಲಿಗೆ ಸ್ವಿಟ್ಸರ್‌ಲ್ಯಾಂಡಿನ ಲಾಸಾನೇ (LAUSANNE) ವಿಶ್ವವಿದ್ಯಾಲಯಕ್ಕೆ ಅರ್ಜಿ ಹಾಕಿದರು. ಹಾಫ್‌ಕಿನ್ನರ ಜೀವಶಾಸ್ತ್ರೀಯ ಲೇಖನಗಳ ಬಗೆಗೆ ಅರಿವಿದ್ದ ಅಲ್ಲಿಯ ಅಂಗಕ್ರಿಯಾಶಾಸ್ತ್ರ ವಿಭಾಗದ ಪ್ರೊ: ಶಿಫ್ (SCHIFF) ಅವರಿಗೆ ರೀಡರ್ ಹುದ್ದೆಯನ್ನು ನೀಡಲು ಮುಂದಾದರು. ದೇಶಬಿಟ್ಟು ಹೋಗಲು ಇದೊಂದು ಸುವರ್ಣಾವಕಾಶವೆಂದು ಪರಿಗಣಿಸಿದರು. ದೇಶಬಿಟ್ಟು ಹೋಗುವ ಹಾಫ್‌ಕಿನ್ನರ ಇಂಗಿತಕ್ಕೆ ಒಡೆಸ್ಸಾ ಅಧಿಕಾರಿಗಳು ಈ ಸಾರಿ ಅಡ್ಡಬಾರದೆ ಒಡನೆಯೆ ಪರವಾನಿಗೆ ಇತ್ತರು.

ಲಾಸನೇ ವಿಶ್ವವಿದ್ಯಾಲಯದಲ್ಲಿ ಪ್ರೊ:ಶಿಫ್ ಅವರ ಕೈಕೆಳಗೆ ಅಧ್ಯಾಪಕ ವೃತ್ತಿಯೇನೋ ದೊರಯಿತು. ಒಳ್ಳೆಯ ಮೊತ್ತದ ಸಂಬಳವೂ ದೊರೆಯುತ್ತಿತ್ತು. ಹಾಯಾಗಿ ಜೀವನ ನಡೆಸಲು ತೊಂದರೆಯೇನೂ ಇರಲಿಲ್ಲ. ಆದರೆ ಪ್ರತಿದಿನ ತರಗತಿಗಳಲ್ಲಿ ಪ್ರವಚನ ಮಾಡುವುದು; ಜೀವಶಾಸ್ತ್ರೀಯ ವಿಷಯಗಳ ಬಗೆಗೆ ಟಿಪ್ಪಣಿ ತಯಾರಿಸುವುದು; ಕಾಲಕಾಲಕ್ಕೆ ಯಾಂತ್ರಿಕವಾಗಿ ತರಗತಿಗಳಿಗೆ ಹೋಗುವಂಥ ಮಾಮೂಲು ಕಾರ್ಯ ವಿಧಾನಗಳು ಅವರಿಗೆ ಆಕರ್ಷಣೀಯವಾಗಿ ಕಾಣಿಸಲಿಲ್ಲ. ಒಂದು ವರ್ಷದೊಳಗೇ ಅವರಿಗೆ ಪ್ರತಿದಿನ ಪುನರಾವರ್ತನೆಯಾಗುವ ಕೆಲಸದಲ್ಲಿ ಕಾಲ ಕಳೆಯುವುದು ಬೇಸರ ಉಂಟು ಮಾಡಿತು. ಜೀವಮಾನವೆಲ್ಲಾ ಸಂಶೋಧನೆಗಳಲ್ಲೇ ಕಾಲಕಳೆಯುವುದಕ್ಕೆ ಜನ್ಮವೆತ್ತಿದಂತಿದ್ದ ಹಾಫ್‌ಕಿನ್, ಕೇವಲ ಹಣಗಳಿಸುವ ಉದ್ದೇಶದಿಂದ ಲಾಸಾನೆಗೆ ಬಂದವರಲ್ಲ. ಮತ್ತೆ ತಮಗೊಪ್ಪುವ ಕೆಲಸ ಹುಡುಕುವ ಯೋಚನೆ ಮಾಡಿದರು. ತಮ್ಮ ಆಗಿನ ಪರಿಸ್ಥಿತಿಯನ್ನು ವಿವರಿಸಿ ಪ್ಯಾರಿಸ್ಸಿನಲ್ಲಿದ್ದ ತಮ್ಮ ಮಾರ್ಗದರ್ಶಕ ಪ್ರೊ:ಮೆಕ್ನಿಕೋವರಿಗೆ

ಪತ್ರ ಬರೆದರು. ಆದರೆ ಮೆಕ್ನಿಕೋವ್ ಸಹಾ ಆಗ ಹೆಚ್ಚಿನ ಸಹಾಯ ಮಾಡುವ ಪರಿಸ್ಥಿತಿಯಲ್ಲಿರಲಿಲ್ಲ. ಪ್ಯಾಶ್ಚರ್ ಇನ್ಸಿಟ್ಯೂಟ್‌ನಲ್ಲಿ ಕಾರ್ಯನಿರ್ವಹಿಸುವ ಅವಕಾಶಗಳಿಗಾಗಿ ಕಾಯುತ್ತಿದ್ದ ಯುವ ವಿಜ್ಞಾನಿಗಳ ತಂಡವೇ ಅಲ್ಲಿತ್ತು. ಹಾಗಾಗಿ ಅಲ್ಲಿನ ಸಂಶೋಧನಾ ಕ್ಷೇತ್ರದಲ್ಲಿ ಯಾವುದೇ ಕೆಲಸ ಖಾಲಿ ಇರಲಿಲ್ಲ.

ಈ ಸಮಯಕ್ಕೆ ಹಾಫ್‌ಕಿನ್ ರಷ್ಯಾದಿಂದ ಸ್ವಿಟ್ಜರ್‌ಲ್ಯಾಂಡ್‌ಗೆ ಬರಲು ಪಡೆದು ಕೊಂಡಿದ್ದ ಪರವಾನಿಗಿಯೂ ಮುಗಿಯುವುದರಲ್ಲಿತ್ತು; ರಷ್ಯಾಕ್ಕೆ ಮತ್ತೆ ಹಿಂದಿರುಗುವ ಅಭಿಲಾಷೆಯೂ ಅವರಿಗಿರಲಿಲ್ಲ. ಪರದೇಶವೊಂದರಲ್ಲಿ ತಾಯ್ನಾಡಿನ ಹಂಬಲದಿಂದ ಸೊರಗಿ ಸಾವನ್ನಾದರೂ ಅಪ್ಪಬಹುದು; ಆದರೆ ರಷ್ಯಾಕ್ಕೆ ಹಿಂದಿರುಗ ಬಾರದೆಂಬ ನಿರ್ಧಾರ ಅವರದಾಗಿತ್ತು. ಪರವಾನಿಗೆಯ ಅವಧಿ ಮುಗಿಯು ವಷ್ಟರಲ್ಲೇ ರಷ್ಯಾಕ್ಕೆ ಹಿಂದಿರುಗಬೇಕೆಂದು ಅವರ ಮಲ-ಸಹೋದರ ಅಲೆಕ್ಸಾಂಡರ್ ಹಾಸ್ಟ್ ಒತ್ತಾಯಿಸಿ ಪತ್ರಬರೆಯುತ್ತಿದ್ದರು; ಬದಲಿಗೆ ಹಾಸ್ಟ್‌ರೇ ರಷ್ಯಾವನ್ನು ತ್ಯಜಿಸಿ ಆದಷ್ಟು ಬೇಗ ಹೊರಬರಬೇಕೆಂದು ಹಾಫ್‌ಕಿನ್ಸರೇ ಪತ್ರ ಬರೆದಿದ್ದರಂತೆ; ಅಲ್ಲದೆ ಇನ್ನೊಂದು ಸಾರಿ ಅವಕಾಶ ಸಿಗುವಂತಿದ್ದರೆ ಪ್ಯಾಶ್ಚರ್ ಅಥವಾ ಮೆಕ್ನಿಕೋವರುಗಳ ಸಂಶೋಧನಾಲಯಗಳಲ್ಲಿ ಯಾವುದೇ ದರ್ಜೆಯ ಕಿರಿಯ ಸಹಾಯಕನಾಗಿ ಕಾರ್ಯನಿರ್ವಹಿಸಲು ತಯಾರಿರು ವುದಾಗಿ ತಮ್ಮ ಸಹೋದರನಿಗೆ ತಿಳಿಸಿದ್ದರಂತೆ. ಅತಿ ಮಹತ್ವದ ಸಂಶೋಧನೆಗಳು ಜರುಗುತ್ತಿದ್ದ ಪ್ಯಾಶ್ಚರ್ ಇನ್ಸಿಟ್ಯೂಟನಲ್ಲಿ ಪ್ರನಾಳಗಳನ್ನಾದರೂ ತೊಳೆದುಕೊಂಡು ಕಾಲಕಳೆಯುವುದಕ್ಕೆ ತಯಾರಿರುವುದಾಗಿ ಮತ್ತೊಂದು ಸಾರಿ ಮೆಕ್ನಿಕೋವರಿಗೆ ಪತ್ರ ಬರೆದರು. ಶಿಷ್ಯವಾತ್ಸಲ್ಯಮಯಿಯಾದ ಪ್ರೊ:ಮೆಕ್ನಿಕೋವ್ ಹಾಫ್‌ಕಿನ್ ಒಂದು ಸಾರಿ ಪ್ಯಾರಿಸ್‌ಗೆ ಬರುವುದಾದರೆ ಅವರ ಮರುವಸತಿಯನ್ನು ಹೇಗಾದರೂ ಮಾಡಬಹುದೆಂಬ ತೀರ್ಮಾನಕ್ಕೆ ಬಂದರು. ಅಲ್ಲಿ ಖಾಲಿ ಇರಬಹುದಾದ ಹುದ್ದೆಗಳ ಬಗೆಗೆ ತನಿಖೆ ಮಾಡಿಸಿದರು. ಪುಸ್ತಕ ಭಂಡಾರದಲ್ಲಿ ಉಪ-ಗ್ರಂಥಪಾಲಕನ ಹುದ್ದೆಯೊಂದು ಖಾಲಿ ಇರುವುದು ತಿಳಿದು ಬಂದಿತು. ಅಂತಹ ಒಂದು ಕೆಲಸಕ್ಕೆ ಸೇರಿ ಕೊಳ್ಳಲು ಇಷ್ಟ ಪಡುವುದಾದರೆ ಹಾಫ್‌ಕಿನ್ ಪ್ಯಾರಿಸ್ಸಿಗೆ ಬರಬಹುದೆಂದು ಪತ್ರ ಬರೆದರು.

ಪ್ಯಾಶ್ಚರ್ ಇನ್ಸಿಟ್ಯೂಟ್‌ನಲ್ಲಿ ಪ್ರನಾಳಗಳನ್ನು ತೊಳೆಯುವ ಕೆಲಸಕ್ಕಾದರೂ ತಯಾರಿದ್ದ ಹಾಫ್‌ಕಿನ್ ಕೂಡಲೇ ಪ್ಯಾರಿಸ್‌ಗೆ ಹೊರಟು ಬಿಟ್ಟರು. ಅಲ್ಲಿ ಅವರಿಗೆ ನೀಡಿದ ಉಪ-ಗ್ರಂಥಪಾಲಕ ಹುದ್ದೆಯನ್ನು ವಹಿಸಿಕೊಂಡು ತಮ್ಮ ಪಾಲಿಗೆ ಬಂದ ಕೆಲಸಕಾರ್ಯ ಗಳನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಲಾರಂಭಿಸಿದರು. ಜೊತೆಗೆ ಕಾರ್ಯ ನಿರ್ವಹಿಸು ತ್ತಿದ್ದವರಿಗೆ ಅವರೊಬ್ಬ ಸಂಕೋಚ ಸ್ವಭಾವದ ನಿಷ್ಠುರವಾದಿಯಂತೆ ಕಂಡು ಬರುತ್ತಿದ್ದರಂತೆ. ಪ್ರೊ:ಮೆಕ್ನಿಕೋವ್ ಒಬ್ಬರಿಗೆ ಮಾತ್ರ ಅವರ ಮನಸ್ಸಿನ ಅಂತರ್ಯಗಳು ತಿಳಿದಿದ್ದಿರ ಬಹುದು.

ಆಗಲೇ ಮೂವತ್ತು ವರ್ಷ ವಯಸ್ಸನ್ನು ದಾಟಿದ್ದ ಹಾಫ್‌ಕಿನ್ಸರಿಗೆ ಜೀವನಲ್ಲಿ ಏನನ್ನೂ ಸಾಧಿಸಲಾಗಲಿಲ್ಲವೆಂಬ ಚಿಂತೆ ಇತ್ತು; ಸಾಲದ ಹೊರೆಯಿಂದ ಅವರು ಕುಸಿದು

ಹೋಗಿದ್ದರು. ಆ ಸಾಲವೇ ಅಲ್ಲದೆ ತಮ್ಮ ಸಂಸಾರ, ಸ್ನೇಹಿತರು, ಹಾಗೂ ಅವರ ಜೀವನದ ಪರಮ ಧ್ಯೇಯವಾಗಿರಿಸಿಕೊಂಡಿದ್ದ ವಿಜ್ಞಾನ ಮುಂತಾದವುಗಳ ಋಣಭಾರ ಸಾಕಷ್ಟಿತ್ತು. ಈಗಾಗಲೇ ಕಳೆದು ಹೋಗಿದ್ದ ಸಮಯವನ್ನು ಸರಿದೂಗಿಸಲು ತಮ್ಮ ಧೀಶಕ್ತಿಯನ್ನು ವೃದ್ಧಿಗೊಳಿಸಿಕೊಳ್ಳಬೇಕಾಗಿತ್ತು. ''ಒಂದು ದಿನ ಕೆಲಸ ಮಾಡದೆ ಸೋಮಾರಿಯಾಗಿ ಕಾಲ ಕಳೆದರೆ ನಾನು ಏನನ್ನೋ ಕಳವು ಮಾಡಿರುವ ಭಾವನೆ ಉಂಟಾಗುತ್ತದೆ'' ಎಂದು ಲೂಯಿ ಪ್ಯಾಶ್ಚರ್ ಹೇಳಿದ ಯುಕ್ತಿ ಅವರನ್ನು ಆಗಾಗ್ಗೆ ಎಚ್ಚರಿಸುವಂತಿತ್ತು ಹಾಫ್‌ಕಿನ್ನರ ಆಗಿನ ಪರಿಸ್ಥಿತಿ.

ಹೆಚ್ಚೇನೂ ಕೆಲಸವಿರದಿದ್ದ ಗ್ರಂಥಭಂಡಾರದಲ್ಲಿ ಇಡೀ ದಿನ ಕಾಲ ಕಳೆಯುವುದು ಹಾಫ್‌ಕಿನ್ನರಿಗೆ ಸರಿಯೆನಿಸಲಿಲ್ಲ. ಒಡೆಸ್ಸಾದಲ್ಲಿ ಹಿಂದೆ ಆರಂಭಿಸಿದ್ದ ಸಂಶೋಧನಾ ಯೋಜನೆಗಳನ್ನು ಇಲ್ಲಿಯೂ ಮುಂದುವರಿಸಿಬಹುದೇ ಎಂಬ ಹಂಬಲ ಉಂಟಾಯಿತು. ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಆ ಬಗೆಗೆ ಅವಕಾಶ ದೊರೆಯಬಹುದೇ ಎಂದು ವಿಚಾರಿಸಿದರು. ಅವರ ಪರವಾನಿಗಿಯೂ ದೊರೆಯಿತು. ಪ್ರತಿದಿನ ಮುಂಜಾನೆ ಹಾಗೂ ಸಂಜೆಯ ವೇಳೆ ಗ್ರಂಥ ಭಂಡಾರಕ್ಕೆ ಹೋಗುವ ಮೊದಲು ಮತ್ತು ಅಲ್ಲಿ ಕೆಲಸ ಮಾಡಿದ ನಂತರ ಪ್ರಯೋಗಾಲಯಕ್ಕೆ ಹಾಜರಾಗುತ್ತಿದ್ದರು. ಪ್ರೊ: ಮೆಕ್ನಿಕೋವ್ ಸಹಾ ಆ ಸಮಯಗಳಲ್ಲಿ ನಿಧಾನವಾಗಿ ಗುನುಗುಡುತ್ತಾ ಕಾರ್ಯ ಮಗ್ನರಾಗಿರುವುದು ಅವರಿಗೆ ಸ್ಫೂರ್ತಿದಾಯಕ ವಾಗಿರುತ್ತಿತ್ತು. ಗ್ರಂಥ ಭಂಡಾರದ ಕೆಲಸ ಉದರ ಪೋಷಣೆಗಾದರೆ, ಪ್ರಯೋಗಾಲಯದ ಕೆಲಸ ಬುದ್ಧಿ ಬೆಳವಣಿಗೆಗಾಗಿ ದೊರೆತದ್ದು ಅವರಲ್ಲಿ ಅಮಿತಾನಂದವನ್ನುಂಟು ಮಾಡಿರಬೇಕು. ತಮಗೆ ಪ್ರಿಯವಾದ ವಿಜ್ಞಾನದ ಸೇವೆಗೆ ದಿನವಿಡೀ ಪುರುಸೊತ್ತಿಲ್ಲದೆ ಕಾರ್ಯಮಗ್ನರಾಗಿರುತ್ತಿದ್ದರು. ಪ್ಯಾರಿಸ್‌ಗೆ ಬರುವ ಇತರ ವಿದೇಶೀಯರಂತೆ ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡುವುದಾಗಲಿ, ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಾಗಲೀ ಅವರ ಜಾಯಮಾನಕ್ಕೆ ಒಗ್ಗುವಂತಹದ್ದಾಗಿರಲಿಲ್ಲ. ಪರಿಚಿತರಾಗಿದ್ದ ಕೆಲವೇ ರಷ್ಯನ್ ವಲಸೆಗಾರರಲ್ಲದೆ ಬೇರಾರ ಹತ್ತಿರವೂ ಅವರು ಸೇರುತ್ತಿರಲಿಲ್ಲ. ಇನ್ನುಳಿದ ಸಮಯದಲ್ಲಿ ತಮ್ಮ ಪುಸ್ತಕಗಳ ಅಭ್ಯಾಸದಲ್ಲಿ ಮಗ್ನರಾಗಿರುತ್ತಿದ್ದರು. ಎಂದಾದರೂ ಬೇಸರವಾದರೆ ತಮ್ಮೊಂದಿಗಿದ್ದ ಪಿಯಾನೋ ನುಡಿಸಿ ಬೇಸರ ಕಳೆದುಕೊಳ್ಳುತ್ತಿದ್ದರು.

ಪ್ಯಾಶ್ಚರ್ ಪ್ರಯೋಗಾಲಯಕ್ಕೆ ಬಂದ ನಂತರ ಒಡೆಸ್ಸಾದಲ್ಲಿ ಆರಂಭಿಸಿದ್ದ ಪ್ರೋಟೋಜೋವಾಗಳಿಗೆ ಸಂಬಂಧಿಸಿದ ಸಂಶೋಧನೆಗಳನ್ನು ಮುಂದುವರಿಸಿದರು. ಇಂತಹದೊಂದು ತೀರಾ ಸಾಮಾನ್ಯ ತಳಹದಿಯ ಮೇಲೆ ಉನ್ನತ ಗುರಿ ಸಾಧಿಸಬೇಕಾದರೆ ಕಷ್ಟಪಟ್ಟು ನಿಷ್ಠೆಯಿಂದ ದುಡಿಯಬೇಕೆಂಬುದು ಅವರಿಗೆ ತಿಳಿಯದ ವಿಷಯವೇನೂ ಆಗಿರಲಿಲ್ಲ. ಆದರೂ ಅವರು ಪ್ಯಾರಿಸ್ಸಿನಲ್ಲಿದ್ದ ಮೊದಲ ವರ್ಷದಲ್ಲಿ ವೈಜ್ಞಾನಿಕ ವಲಯದಲ್ಲಿ ಹೇಳಿಕೊಳ್ಳುವಂತ ಸಾಧನೆಗಳೇನನ್ನೂ ತೋರಿಸಲಾಗಲಿಲ್ಲ. ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಪ್ರಕಟವಾಗುತ್ತಿದ್ದ ವರದಿಗಳಲ್ಲಿ ಹಾಫ್‌ಕಿನ್ನರ ಚಟುವಟಿಕೆ ಮತ್ತು ಅವರ ಲೇಖನಗಳು ಅಷ್ಟೇನೂ ಗಮನ ಸೆಳೆಯುವಂತಹವಾಗಿರಲಿಲ್ಲ. ಅದರಿಂದ ವಿಜ್ಞಾನದ

ಮುಖ್ಯವಾಹಿನಿಯಿಂದ ತಾವು ದೂರ ಸರಿಯುತ್ತಿರುವೆನೋ ಎಂಬ ಅಪರಾಧೀ ಮನೋಭಾವನೆ ಅವರಲ್ಲಿ ನುಸುಳಿಕೊಳ್ಳುವಂತಿತ್ತು.

ಈ ಸಮಯದಲ್ಲಿ ಪ್ರೊ: ಮೆಕ್ನಿಕೋವ್‌ರ ಮತ್ತೊಂದು ಸಲಹೆ ಅವರ ಮಾನಸಿಕ ಸ್ಥಿತಿಯನ್ನು ಎತ್ತಿ ಹಿಡಿಯುವಂತಾಯಿತು. ಫೇಗೊಸೈಟ್ಸ್ (PHAGOCYTES)ಮತ್ತು ಪ್ರೋಟೊಜೋವಾಗಳಿಗೆ ಸಾಮಾನ್ಯವಾಗಿ ತಗಲುವ ರೋಗಗಳ ಅಭ್ಯಾಸ ಮಾಡಬೇಕೆಂಬುದು ಅವರ ಸಲಹೆಯಾಗಿತ್ತು. ಈ ಸಂಶೋಧನೆಗಳನ್ನು ಕೈಗೆತ್ತಿಕೊಂಡ ಸಮಯದಲ್ಲೇ ಹಾಫ್‌ಕಿನ್ನರ ಜೀವನದಲ್ಲಿ ಮತ್ತೂ ಒಂದು ಪ್ರಮುಖ ತಿರುವು ಉಂಟಾಗುವ ಸಂದರ್ಭವೊಂದು ಒದಗಿ ಬಂದಿತು.

## ಮತ್ತೊಂದು ಅನಿರೀಕ್ಷಿತ ತಿರುವು

ಸೆಪ್ಟೆಂಬರ್ 1890ರ ಸಮಯದಲ್ಲಿ ಹಾಫ್‌ಕಿನ್ನರು ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನ ಒಂದು ಅಂಗಭಾಗವಾದ ಪ್ರೊ: ಎಮಿಲಿ ರೂ (EMILE ROUX) ಎಂಬುವರ ವಿಭಾಗದಲ್ಲಿ ತಮ್ಮ ಸಂಶೋಧನೆಗಳನ್ನೇ ಮುಂದುವರಿಸುತ್ತಿದ್ದರು. ಪ್ರೊ:ರೂ, ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಕಾರ್ಯನಿರತರಾಗಿದ್ದ ತುಂಬಾ ಹಿರಿಯ ಸಂಶೋಧಕರು. ಪ್ರೊ:ಮೆಕ್ನಿಕೋವ್ ಅವರ ಆಪ್ತ ಸ್ನೇಹಿತರೂ ಆಗಿದ್ದರು. ಒಡೆಸ್ಸಾದ ಯುವ ವಿಜ್ಞಾನಿ ಅವರ ವಿಭಾಗದಲ್ಲಿ ಕಾರ್ಯನಿರ್ವಹಿಸುವುದನ್ನು ಸ್ವಾಗತಿಸಿದ್ದರಲ್ಲದೆ, ಆಗಾಗ್ಗೆ ಸಲಹೆ ಸಹಕಾರಗಳನ್ನೂ ನೀಡುತ್ತಿದ್ದರು. ಪ್ರೊ:ರೂ ಅವರ ಸಹಾಯಕರಾಗಿದ್ದ ಯೆರ್ಸೀನಾ ಎಂಬ ವಿಜ್ಞಾನಿಯೊಬ್ಬರು ಹಠಾತ್ತನೇ ತಮ್ಮ ಜಾಗವನ್ನು ಖಾಲಿ ಮಾಡಿ ಹೋಗುವ ನಿರ್ಧಾರ ಮಾಡಿದರು. ಅವರು ತಮ್ಮ ಸಂಶೋಧನಾ ಕ್ಷೇತ್ರವನ್ನು ಇಂಡೋಚೀನಾ ಪ್ರದೇಶಕ್ಕೆ ಬದಲಾಯಿಸಿಕೊಳ್ಳುವ ಮನಸ್ಸು ಮಾಡಿದ್ದರು. ಆ ಪ್ರದೇಶದಲ್ಲಿ ಪ್ಲೇಗ್ ಮಹಾಮಾರಿಯ ಧಾಳಿ ಆರಂಭವಾಗಿ ಜನಸ್ತೋಮವನ್ನು ಬಲಿ ತೆಗೆದುಕೊಳ್ಳುತ್ತಿತ್ತು. ವಿಷಯ ತಿಳಿದ ಯೆರ್ಸೀನಾ ಪ್ಯಾರಿಸ್‌ನಲ್ಲಿ ತಮ್ಮ ಸಂಶೋಧನಾ ಕಾರ್ಯಗಳನ್ನು ಸ್ಥಗಿತಗೊಳಿಸಿ ಇಂಡೋಚೀನಾದಲ್ಲಿ ಪ್ಲೇಗ್ ಬಗೆಗೆ ಸಂಶೋಧನೆ ಜರುಗಿಸುವ ನಿರ್ಧಾರ ಮಾಡಿದರು. ಪ್ರೊ: ರೂ ಆ ಸಮಯದಲ್ಲಿ ಸ್ವಲ್ಪ ದಿನಗಳ ರಜೆಯಲ್ಲಿದ್ದರು; ಮಾರ್ಗದರ್ಶಕ ಪ್ರೊ : ರೂ ವಾಪಸು ಬರುವವರೆಗೂ ಕಾಯುವ ವ್ಯವಧಾನ ಯೆರ್ಸೀನಾರಿಗಿದ್ದಂತಿರಲಿಲ್ಲ. ಒಂದು ರೀತಿಯಲ್ಲಿ ಪ್ಯಾಶ್ಚರ್ ಇನ್ಸ್ಟಿಟ್ಯೂಟಸ್‌ನ ವಿಜ್ಞಾನಿಗಳ ಸಂಪ್ರದಾಯವೇ ಹಾಗಿತ್ತೆನ್ನಲಾಗಿದೆ. ಯಾವುದೇ ಕ್ಷೇತ್ರದಲ್ಲಿ ಅವರ ಅವಶ್ಯಕತೆ ಇದೆಯೆಂದು ತಿಳಿದುಬಂದರೆ ಕೂಡಲೇ ಅಲ್ಲಿಗೆ ಧಾವಿಸಿ ತಮ್ಮ ಅಭಯ ಹಸ್ತವನ್ನು ನೀಡುತ್ತಿದ್ದರು. ಹಿಂದೆಯೂ ಆ ರೀತಿ ಸಾಂಕ್ರಾಮಿಕ ರೋಗಗಳ ಉಪಟಳ ಹೆಚ್ಚಾಗುತ್ತಿದ್ದ ವರದಿಗಳು ಬಂದಾಗಲೆಲ್ಲಾ ಕೆಲವು ವಿಜ್ಞಾನಿಗಳು ಹೀಗೆ ಹೋದ ನಿದರ್ಶನಗಳಿದ್ದವು. ಅಲ್ಜೀರಿಯಾ, ಈಜಿಪ್ಟ್ ,ಭಾರತ ಹಾಗೂ ಇಂಡೋ ಚೀನಾಗಳಿಗೆ ಹೀಗೆ ಧಾವಿಸಿದ ವಿಜ್ಞಾನಿಗಳು ತಮ್ಮ ಜೀವವದ ಹಂಗು ತೊರೆದು ಕಾರ್ಯಮಗ್ನ

ರಾಗುತ್ತಿದ್ದರು. ಒಂದೆರಡು ವರ್ಷ ಅವರ ಸುಳಿವೇ ಸಿಗದಂತೆ ಅಲ್ಲಿದ್ದುಕೊಂಡು ಸಂಶೋಧನೆಗಳ ಫಲಿತಾಂಶ ಹೊರಬಂದಾಗಲೇ ಅವರು ಹೊರ ಪ್ರಪಂಚಕ್ಕೆ ಗೋಚರವಾಗುತ್ತಿದ್ದುದು. ಈಗ ಯೆರ್ಸಿನಾ ಮುಂದುವರಿಸಿದ್ದು ಅದೇ ಸಂಪ್ರದಾಯವನ್ನು. ಪ್ರೊ:ರೂ ಅವರಿಗೆ ಒಂದು ಟಿಪ್ಪಣಿ ಬರೆದಿಟ್ಟು ಹಾಫ್‌ಕಿನ್ನರಿಗೆ ಪ್ರಯೋಗಾಲಯದ ಚಾರ್ಜ್ ವಹಿಸಿ, ಸೈಗಾನ್‌ಗೆ ತೆರಳುವ ಹಡಗನ್ನು ಹಿಡಿಯಲು ಮರ್ಸೇಲಿಸ್ ಬಂದರಿಗೆ ಹೊರಟೇಬಿಟ್ಟರು! ಯೆರ್ಸಿನಾರು ಪ್ರೊ:ರೂ ಅವರಿಗೆ ಬರೆದಿಟ್ಟ ಟಿಪ್ಪಣಿಯಲ್ಲಿ ತಾವು ಮುಂದಿನ ಎರಡು ವರ್ಷಗಳು ಹಿಂದಿರುಗುವ ಯೋಚನೆ ಇಲ್ಲವೆಂದಿದ್ದರು; ಇಂಡೋಚೀನಾದಲ್ಲಿನ ಪರಿಸ್ಥಿತಿ ತುಂಬಾ ಗಂಭೀರವಾಗಿರುವುದು ತಿಳಿದು ಬಂದುದರಿಂದ ಅವರಿಗೆ ಹೇಳದೆ ಕೇಳದೇ ಹೊರಟಿದ್ದಕ್ಕೆ ಕ್ಷಮೆ ಯಾಚಿಸಿದ್ದರು. ಮುಂದುವರಿದು ಪ್ರಯೋಗಾಲಯದಲ್ಲಿ ಅವರ ವಶದಲ್ಲಿದ್ದ ಎರಡು ಕೊಠಡಿಗಳು ಮತ್ತು ಅಲ್ಲಿನ ಸಾಮಾನು ಸರಂಜಾಮುಗಳನ್ನು ಹಾಫ್‌ಕಿನ್ನರಿಗೆ ವಹಿಸಿರುವುದಲ್ಲದೆ, ಅವರು ಜರುಗಿಸುತ್ತಿದ್ದ ಸಂಶೋಧನೆಗಳನ್ನು ಮುಂದುವರಿಸಿಕೊಂಡು ಹೋಗುವ ರೀತಿ ನೀತಿಗಳನ್ನು ವಿವರಿಸಿರುವುದಾಗಿಯೂ ಬರೆದಿದ್ದರು.

ಯೆರ್ಸಿನಾ ಬರೆದಿಟ್ಟದ್ದ ಟಿಪ್ಪಣಿ ಹಾಫ್‌ಕಿನ್‌ರು ಮುಂದಿನ ಜೀವನವನ್ನು ಕಂಡುಕೊಳ್ಳಲು ದಾರಿದೀಪವಾಯಿತು; ಯೆರ್ಸಿನಾರ ಮಾನವೀಯ ಉದ್ದೇಶದ ಪ್ರಯಾಣ, ಜೀವನ ಸಾಗಿಸಲು, ಹಾಗೂ ಅದಕ್ಕಿಂತಲೂ ವಿಜ್ಞಾನದ ಸೇವೆಗಾಗಿ ಹಾತೊರೆಯುತ್ತಿದ್ದ ಮತ್ತೊಬ್ಬ ಯುವ ವಿಜ್ಞಾನಿಗೆ ವರಪ್ರಸಾದವಾಗಿ ಪರಿಣಮಿಸಿತು. ಯೆರ್ಸಿನಾರಿಂದ ತೆರವಾದ ಜಾಗದಲ್ಲಿ ಪ್ರೊ:ರೂ ವ್ಲಾದಿಮಿರ್ ಹಾಫ್‌ಕಿನ್ನರನ್ನು ಸಹಾಯಕ ವಿಜ್ಞಾನಿಯನ್ನಾಗಿ ನೇಮಿಸಿಕೊಂಡರು. ತಮ್ಮ ಜೀವನದ ಪರಮೋದ್ದೇಶವೆಂದು ಆಶಿಸುತ್ತಿದ್ದ ಹಾಫ್‌ಕಿನ್ನರಿಗೆ ವಿಶ್ವವಿಖ್ಯಾತ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಪೂರ್ಣ ಪ್ರಮಾಣದ ವಿಜ್ಞಾನಿಯಾಗಿ ಕೆಲಸ ಮಾಡುವ ಸುವರ್ಣಾವಕಾಶ ತೀರ ಅನಿರೀಕ್ಷಿತವಾಗಿ ಒದಗಿ ಬಂದಿತು. ಈ ಅವಕಾಶದಿಂದಲೇ ವ್ಲಾದಿಮಿರ್ ಹಾಫ್‌ಕಿನ್ ಶತಶತಮಾನಗಳಿಂದ ಮನುಕುಲದ ಕರಾಳ ಪೀಡೆಗಳಾಗಿದ್ದ ಎರಡು ಸಾಂಕ್ರಾಮಿಕ ರೋಗಗಳ ವಿರುದ್ಧ ಜಯಭೇರಿ ಭಾರಿಸಲು ಸಾಧ್ಯವಾಯಿತು; ಅವರೊಬ್ಬ ''ಮಾನವ ಕುಲ-ರಕ್ಷಕ''ರೆಂಬ ಖ್ಯಾತಿಗೆ ಮುಂದೆ ಭಾಜನರಾದರು.

೨

# ಕಾಲರಾದ ಇತಿಹಾಸ

ಕಾಲರಾ ವ್ಯಾಧಿ ಸುಲಭವಾಗಿ ಒಬ್ಬರಿಂದೊಬ್ಬರಿಗೆ ಶೀಘ್ರಗತಿಯಲ್ಲಿ ಹರಡುವ ಒಂದು ಸೋಂಕು ರೋಗ. ಎಡಬಿಡದೇ ವಾಂತಿ, ಭೇದಿಗಳಾಗುವುದು ಇದರ ಪ್ರಮುಖ ಲಕ್ಷಣ. ವಿಬ್ರಿಯೋ ಕಾಲರಾ ಎಂಬ ಮಿಣಿಜೀವಿಯ ಸೋಂಕು ಇದಕ್ಕೆ ಕಾರಣ. ಮನುಷ್ಯ-ಮನುಷ್ಯರ ನೇರ ಸಂಪರ್ಕದಿಂದ ಈ ಕಾಯಿಲೆ ಉದ್ಭವಿಸುತ್ತದೆಂದು ಹೇಳಬಹುದಾದರೂ, ಕಾಲರಾ ರೋಗಿ ವಿಸರ್ಜಿಸಿದ ಮಲವೇ ಅದು ಹರಡುವುದರ ಮೂಲ ಕಾರಣ. ಕಲುಷಿತವಾದ ನೀರು ಮತ್ತು ಆಹಾರ ವಸ್ತುಗಳ ಮೂಲಕ ಅಪಾರ ಸಂಖ್ಯೆಯ ವಿಬ್ರಿಯೋ ರೋಗಾಣುಗಳು ಜಠರ, ಕರುಳು ಮುಂತಾದ ಜೀರ್ಣಾಂಗ ಮಂಡಳದ ಅವಯವಗಳನ್ನು ಸೇರುತ್ತವೆ. ಅಲ್ಲಿ ಅವು ಅಪಾರ ಸಂಖ್ಯೆಯಲ್ಲಿ ವೃದ್ಧಿಯಾಗುವುದಲ್ಲದೆ ವಿಷಕರ 'ಟಾಕ್ಸಿನ್' ನನ್ನು ಉತ್ಪಾದಿಸುತ್ತವೆ. ಕರುಳಿನ ಲೋಳ್ಪರೆಯನ್ನು ಉದ್ರೇಕಿಸಿ ಅದೇ ಪದೇ ವಾಂತಿ ಭೇದಿ ಉಂಟಾಗುವಂತೆ ಮಾಡುತ್ತವೆ. ದಿನಕ್ಕೆ 10-12 ಸಾರಿಗಿಂತಲೂ ಮಿಗಿಲಾಗಿ ಆಗುತ್ತಿರುವ ವಾಂತಿ-ಭೇದಿಯಿಂದ ಬಹಳಷ್ಟು ನೀರು ಮತ್ತು ಲವಣಾಂಶಗಳು ದೇಹದಿಂದ ಹೊರಬೀಳುವಂತಾಗುತ್ತದೆ. ಮಲದ ದ್ರವ ''ಅಕ್ಕಿ ತೊಳೆದ ನೀರಿ''ನಂತಿರುವುದು ಈ ಅತಿಸಾರದ ವೈಶಿಷ್ಟ್ಯ. ವಾಂತಿ ಭೇದಿಯ ಲಕ್ಷಣಗಳು ಪ್ರಕಟವಾದ ಸ್ವಲ್ಪ ಸಮಯದಲ್ಲೇ ರೋಗಿ, ಚರ್ಮ ನಾಲಗೆಗಳೆಲ್ಲಾ ಒಣಗಿದಂತಾಗಿ ಮೂತ್ರವಿಸರ್ಜನೆಯ ಪ್ರಮಾಣವೂ ಕಡಿಮೆಯಾಗುತ್ತದೆ. ಶೀಘ್ರಗತಿಯಿಂದ ನಿತ್ರಾಣ ಉಂಟಾಗಿ ಕೆಲವೇ ಗಂಟೆಗಳಲ್ಲಿ ರೋಗಿ ಮೂರ್ಛಾವಸ್ಥೆ ತಲುಪಬಹುದು. ಮುಂದೆ ಮೂತ್ರದ ಉತ್ಪಾದನೆಯೂ ಸ್ಥಗಿತವಾಗಿ ಸಾವು ಸಂಭವಿಸುತ್ತದೆ.

ಕಾಲರಾ ವ್ಯಾಧಿಯ ಪಿಡುಗು ಮಾನವನ ಇತಿಹಾಸದ ಯಾವ ಅವಧಿಯಲ್ಲಿ ಆರಂಭವಾಯಿತೆಂದು ಹೇಳಬರುವುದಿಲ್ಲವಾದರೂ ಶತಶತಮಾನಗಳಿಂದಲೂ ಪ್ರಪಂಚದಾದ್ಯಂತ ಬೇರೆ ಬೇರೆ ಸಮಯಗಳಲ್ಲಿ ಕಾಣಿಸಿಕೊಂಡಿದೆ. ಕುತೂಹಲಕರ ಸಂಗತಿಯೆಂದರೆ ಭಾರತವೇ ಅದರ ತವರು ಮನೆ ಎನ್ನಲಾಗುತ್ತದೆ; ಬಂಗಾಳ ಮತ್ತು ಅಸ್ಸಾಂ ಪ್ರಾಂತ್ಯಗಳಲ್ಲಿ ಅದರ ಉಪಟಳ ಅತಿಯಾಗಿರುತ್ತಿತ್ತು. ಭಾರತದಂತೆಯೇ ಆಗ್ನೇಯ ಏಷ್ಯಾದ ದೇಶಗಳಾದ ಸಯಾಂ ಮತ್ತು ಇಂಡೋಚೀನಾಗಳೂ ಸಹಾ ಕಾಲರಾದ ಮೂಲಸ್ಥಾನಗಳೆಂದು ಪ್ರತೀತಿ ಇದೆ. ಈ ವಲಯಗಳಿಂದಲೇ 1820ರಿಂದ ಸುಮಾರು ಆರು

ಸಾರಿ ಜಗತ್ತಿನ ವಿವಿಧ ಭಾಗಗಳಿಗೆ ಕಾಲರಾ ಹರಡಿ ಅಪಾರ ಸಾವು ನೋವುಗಳಿಗೆ ಕಾರಣವಾಗಿತ್ತು. ಅದು ಸಾಮಾನ್ಯವಾಗಿ ಭಾರತದಿಂದ ಮೊದಲು ಅರೇಬಿಯಾದ ದೇಶಗಳಿಗೆ ಹರಡಿ ಅಲ್ಲಿಂದ ಈಜಿಪ್ಟ್, ಸಿರಿಯಾಗಳ ಮುಖಾಂತರ ಯುರೋಪಿನ ವಿವಿಧ ಭಾಗಗಳಿಗೆ ಜಿಗಿಯುತ್ತದೆ. ಅದೇರೀತಿಯಲ್ಲಿ ಪೂರ್ವಾಭಿಮುಖವಾಗಿ ಚೀನಾ, ಜಪಾನುಗಳಿಗೂ ಆಗಾಗ್ಗೆ ಪ್ರಸರಿಸುವುದುಂಟು.

ಮೊಟ್ಟಮೊದಲು ಕಾಲರಾ ಸಾಂಕ್ರಾಮಿಕ ಯುರೋಪಿನಲ್ಲಿ ಪ್ರತ್ಯಕ್ಷವಾದದ್ದು 1823ರ ಶರತ್ಕಾಲದಲ್ಲಿ, ಅಸ್ಟ್ರಾಖಾನ್ ಎಂಬ ರಷ್ಯಾದ ರೇವು ಪಟ್ಟಣದಲ್ಲಿ. ಆಗ ಅದು ಹಠಾತ್ತಾಗಿ ನೂರಾರು ಜನರನ್ನು ಬಲಿ ತೆಗೆದುಕೊಂಡಿತು. ಆದರೆ ಚಳಿಗಾಲ ಆರಂಭವಾಗುತ್ತಿದ್ದಂತೆಯೇ ಯಾವುದೇ ಮುನ್ಸೂಚನೆಯಿಲ್ಲದೆ ಬಂದ ಹಾಗೆಯೇ ಮಾಯವಾಗಿಬಿಟ್ಟಿತು. ಆದುದರಿಂದ ಆ ಕಾಯಿಲೆ ಹೇಗೆ, ಯಾವುದರಿಂದ ಉಂಟಾಯಿತು, ಅದು ಒಬ್ಬರಿಂದೊಬ್ಬರಿಗೆ ಹರಡುವ ಸಾಂಕ್ರಾಮಿಕ ರೋಗವೇ ಮುಂತಾದ ವಿಷಯಗಳು ನಿಗೂಢವಾಗಿ ಉಳಿದುಬಿಟ್ಟವು. ಬಹುಶಃ ವಾತಾವರಣದಲ್ಲಾದ ಅಸ್ವಾಭಾವಿಕ ''ಏರುಪೇರು''ಗಳಿಂದ ಈ ನಿಗೂಢವ್ಯಾಧಿ ಉದ್ಭವಿಸಿರಬಹುದೆಂಬುದು ಆಗಿನ ವೈದ್ಯರ ಅಂಬೋಣವಾಗಿತ್ತಂತೆ. ಆ ಸಯಮದಲ್ಲೇ ಭಾರತದಿಂದ ಆಗಮಿಸಿದ್ದ ವ್ಯಾಪಾರೀ ಹಡಗಿನ ಮೂಲಕ ಆ ರೋಗ ಬಂದಿರಬಹುದೆಂಬ ಅನುಮಾನಗಳೂ ಇದ್ದವು.

ಆರು ವರ್ಷಗಳ ನಂತರ ಕಾಲರಾ ಮತ್ತೆ ಧಾಳಿ ಮಾಡಿತು. ಮೊದಲು ಬೋಖ್ಹಾರ ಎಂಬಲ್ಲಿ ಅದರ ಲಕ್ಷಣಗಳು ಪ್ರಕಟವಾದುದು ತಿಳಿಯುತ್ತಲೇ ಪಕ್ಕದ ಓರೆನ್‌ಬರ್ಗ್ ನಗರದ ವರಿಷ್ಠಾಧಿಕಾರಿ ಮುನ್ನೆಚ್ಚರಿಕೆಯ ಕ್ರಮಗಳನ್ನ ತೆಗೆದುಕೊಳ್ಳಲಾರಂಭಿಸಿದ. ಗಡಿ ರಕ್ಷಣಾ ಪಡೆಗಳ ಸಹಾಯದಿಂದ ಬೋಖ್ಹಾರದ ಕಡೆಯಿಂದ ಬರುತ್ತಿದ್ದ ಜನರನ್ನು ಊರ ಹೊರ ವಲಯದಲ್ಲೇ ತಡೆದು ನಿಲ್ಲಿಸಿದ. ರೋಗದ 'ವಿಷ' ಮುಂದೆ ಸಾಗದಂತೆ ಮಾಡುವುದು ಅವನ ಉದ್ದೇಶವಾಗಿತ್ತು. ಅವರು ತರುತ್ತಿದ್ದ ಗಂಟು ಮೂಟೆಗಳನ್ನು ಬಿಚ್ಚಿಸಿ ಅವುಗಳಲ್ಲಿದ್ದ ಹತ್ತಿ, ಮತ್ತು ಉಣ್ಣೆ ಬೇಲುಗಳಿಗೆ ಹೊಗೆ ಹಾಯಿಸಿದ. ಈ ಕಾರ್ಯವೆಲ್ಲಾ ಮುಗಿದ ನಂತರವೇ ಅವುಗಳು ನಗರ ಪ್ರವೇಶ ಮಾಡುವುದಕ್ಕೆ ಅವಕಾಶ ಮಾಡಿಕೊಡುತ್ತಿದ್ದ. ಆದರೂ ಮುಂದಿನ ಐದು ವಾರಗಳಲ್ಲಿ ಓರೆನ್‌ಬರ್ಗ್ ನಗರದಲ್ಲಿ ಕಾಲರಾ ಕಾಣಿಸಿಕೊಂಡಿತು. ಅಲ್ಲಿ ಅಪಾರ ಸಂಖ್ಯೆಯ ಜನರನ್ನು ಬಲಿತೆಗೆದುಕೊಂಡಿತು.

ರಷ್ಯಾಕ್ಕೆ ಕಾಲರಾ ಎರಡನೇ ಸಾರಿ ಪ್ರವೇಶ ಮಾಡಿದಾಗ ಹಿಂದಿನ ಸಾರಿಗಿಂತಲೂ ಉಗ್ರ ಸ್ವರೂಪ ತಾಳಿತು. ರಷ್ಯಾ ಚಕ್ರಾಧಿಪತ್ಯದ ಎಲ್ಲಾ ಪ್ರಾಂತ್ಯಗಳಲ್ಲೂ ಕಾಣಿಸಿಕೊಂಡಿತು; ಯುರೋಪಿನ ಹಲವು ಪ್ರದೇಶಗಳಿಗೂ ಹರಡಿತು. ಮುಂದಿನ ಎಂಟು ವರ್ಷಗಳು ಈ ಪ್ರದೇಶಗಳೆಲ್ಲವು ಕಾಲರಾದ ಬಿಗಿ ಹಿಡಿತದಲ್ಲಿದ್ದವು; ಸುಮಾರು ಎರಡೂವರೆ ಲಕ್ಷ ಜನರನ್ನು ಆ ಸಮಯದಲ್ಲಿ ಬಲಿ ತೆಗುಕೊಂಡಿತ್ತೆನ್ನಲಾಗಿದೆ.

ಈ ಸಾರಿ ಓರೆನ್‌ಬರ್ಗ್ ನಗರದಲ್ಲಿ ಕಾಲರಾ ಹರಡಿದ ರೀತಿನೀತಿಗಳಿಂದ ಅದು ಒಬ್ಬರಿಂದೊಬ್ಬರಿಗೆ ಸೋಂಕಿನ ರೀತಿಯಲ್ಲಿ ಹರಡುತ್ತದೆಂಬ ಅಭಿಪ್ರಾಯ ಮೂಡು

ವಂತಾಯಿತು. ಆದುದರಿಂದ ರೋಗಿಗಳನ್ನು ಇತರರಿಂದ ಬೇರ್ಪಡಿಸುವುದು ಸರಿಯಾದ ಮಾರ್ಗವೆಂಬ ಅಭಿಪ್ರಾಯ ಉಂಟಾಯಿತು. ಹಾಗೆ ರೋಗಿಗಳನ್ನು ನಲವತ್ತು ದಿನಗಳ ಕಾಲ ಇತರರಿಂದ ಪ್ರತ್ಯೇಕಿಸಿಡುವ ''ಕ್ವಾರೆಂಟೀನ್'' ವಿಧಾನವನ್ನು ಜಾರಿಗೊಳಿಸ ಬೇಕಾಯಿತು. ಹಾಗೆಯೇ ಹೊಗೆಯೂಡಿಸುವುದು ಮತ್ತು ಮೈತೊಳೆಯು ವಂಥ ಕ್ರಮಗಳಿಂದಲೂ ಆ ವ್ಯಾಧಿ ಹರಡದಂತೆ ತಡೆಯಲು ಸಾಧ್ಯವಿಲ್ಲವೆಂಬುದರ ಅರಿವೂ ಆಯಿತು. ಇಷ್ಟಾದರೂ ಅದು ಸಾಂಕ್ರಾಮಿಕ ರೋಗವೋ ಅಥವಾ ಬೇರಾವುದೋ ಎಂಬ ಜಿಜ್ಞಾಸೆ ಮಾತ್ರ ಉಳಿದುಕೊಂಡುಬಿಟ್ಟಿತು. ಅದರಿಂದ ವೈದ್ಯ ಸಮೂಹವೂ ಕಂಗಾಲಾಗಿತ್ತು. ಕೆಲವೇ ಜನ ವಿಜ್ಞಾನಿಗಳು ಮಾತ್ರ ಈ ರೋಗಕ್ಕೆ ಅಗೋಚರ ಮಿಣಿ-ಜೀವಿಗಳು ಕಾರಣವಿರಬಹುದೆಂದು ಶಂಕಿಸುತ್ತಿದ್ದರು;ಆದರೆ ಮಾಸ್ಕೋ ನಗರದ ಗೋಲಿಟ್ಸಿನ್, ಆಸ್ಪತ್ರೆಯ ಪ್ರಮುಖ ಸರ್ಜನರ ನೇತೃತ್ವದ ಬಹುಪಾಲು ವೈದ್ಯರು ಈ ಕಾಯಿಲೆಗೆ ವಾತಾವರಣದ ವಿದ್ಯುಚ್ಛಕ್ತಿಯ ಅಸಮತೋಲನೆ ಹಾಗೂ ಗ್ರಹಗಳ ಕಾಂತತ್ವ ಚಲನೆಯ ವ್ಯತ್ಯಾಸಗಳೇ ಕಾರಣವೆಂದು ಪ್ರತಿಪಾದಿಸುತ್ತಿದ್ದರು.

ಮೂರು ಮತ್ತು ನಾಲ್ಕನೆ ಸಲ ಈ ಪಿಡುಗು ಒಂದರ ಹಿಂದೆ ಮತ್ತೊಂದರಂತೆ ಹಿಂಬಾಲಿಸಿ ಇಡೀ ರಷ್ಯಾದೇಶದಾದ್ಯಂತ ವ್ಯಾಪಕವಾಗಿ ಹರಡಿತು. ಈಸಾರಿ ಅದು ಸತತವಾಗಿ ಎಂಟು ವರ್ಷಗಳು ರಷ್ಯಾದಲ್ಲಿ ನೆಲೆಯೂರಿತ್ತು.

ಮುಂದೆ ಪ್ರತಿ ಆರರಿಂದ ಒಂಬತ್ತು ವರ್ಷಗಳಿಗೊಂದು ಸಾರಿ ಯುರೋಪಿನ ಮೇಲೆ ಕಾಲರಾ ಧಾಳಿ ಮಾಡುತ್ತಲೇ ಇತ್ತು. ಕೆಲ ಸಾರಿ ಅದು ಇರಾನ್ ದೇಶದ ಮೂಲಕ ರಷ್ಯಾವನ್ನು ಪ್ರವೇಶಿಸಿದರೆ ಮತ್ತೆ ಕೆಲ ಸಾರಿ ಆಫ್ರಿಕಾ ಇಲ್ಲವೆ ಮಧ್ಯಪೂರ್ವದೇಶಗಳ ಮುಖಾಂತರ ಯುರೋಪಿನ ದೇಶಗಳಿಗೆ ಹಬ್ಬುತ್ತಿತ್ತು. ಆದರೆ ಇವೆಲ್ಲಾ ಸಾಂಕ್ರಾಮಿಕಗಳ ಮೂಲ ಸ್ಥಾನ ಭಾರತದ ಬಂಗಾಳ ಪ್ರಾಂತವೇ ಆಗಿರುತ್ತಿತ್ತಂತೆ.

ಕಾಲರಾದ ಐದನೇ ವಿಶ್ವವ್ಯಾಪಿ ಪರ್ಯಟನ ಆರಂಭವಾಗುವ ಸಮಯಕ್ಕೆ ಬಹುಪಾಲು ವೈದ್ಯರು ಮತ್ತು ವಿಜ್ಞಾನಿಗಳು ಲೂಯಿಪ್ಯಾಶ್ಚರ್‌ಪ್ರತಿಪಾದಿಸುತ್ತಿದ್ದ ಮಿಣಿಜೀವಾಣುಗಳ ಸೋಂಕೇ ಕಾರಣವೆಂಬ ವಾದವನ್ನು ಒಪ್ಪಿಕೊಳ್ಳುವ ಹಂತಕ್ಕೆ ಬಂದಿದ್ದರು. ಆದರೂ ರಷ್ಯಾದ ಹೆಸರಾಂತ ಚಿಕಿತ್ಸಕ ಸೆರ್ಗೈಬೋಟ್ಕಿನ್ ಕಾಲರಾ ಬಗೆಗೆ ಲಭ್ಯವಿದ್ದ ಎಲ್ಲಾ ಬರವಣಿಗೆಗಳನ್ನು ಅಭ್ಯಾಸ ಮಾಡಿದ್ದರಾದರೂ ಈ ಮಿಣಿ ಜೀವಿಗಳು ಅಕ್ಷರಶಃ ತಮ್ಮನ್ನು ಸೋಲಿಸಿವೆಯೆಂತಲೂ, ಅದರಿಂದ ತಮ್ಮ ಹಾದಿಯನ್ನು ಬದಲಾಯಿಸಿಕೊಳ್ಳಬೇಕಾಗಿದೆ ಎಂದೇ ಉದ್ಗಾರವೆತ್ತಿದರಂತೆ. ವಿಶ್ವದಾದ್ಯಂತ ವೈದ್ಯಕೀಯ ಸಮೂಹದವರು ಮತ್ತು ವಿಜ್ಞಾನಿಗಳೆಲ್ಲಾ ಮಿಣಿಜೀವಿಗಳಿಗೆ ಸಂಬಂಧಿಸಿದ ವಿಚಾರಗಳಲ್ಲಿ 1880-1890ರ ದಶಕದಲ್ಲಿ ಗಮನಹರಿಸಲು ಪ್ರಾರಂಭಿಸಿದ್ದರು. ವಿಜ್ಞಾನದ ಹೊಸ ಶಾಖೆಯಾದ ಮಿಣಿಜೀವಿಶಾಸ್ತ್ರದ ನೆರವಿನಿಂದ ರೇಬೀಸ್ (ನಾಯಿಹುಚ್ಚು)ಮತ್ತು ನೆರಡಿರೋಗಗಳ ಮೇಲೆ ಜಯ ಸಾಧಿಸಲು ಸಾಧ್ಯವಾಗಿತ್ತು. ಕಾಲರಾ ಪಿಡುಗು ಆಗ ತಾನೆ

ತನ್ನ ಐದನೇ ದಂಡಯಾತ್ರೆಯನ್ನು ಆರಂಭಿಸಿತ್ತು. ಅದರ ಮುನ್ನಡೆಯನ್ನು ತಡೆಯಲು ವಿಜ್ಞಾನಿಗಳ ಬತ್ತಳಿಕೆಯಲ್ಲಿ ಯಾವ ಅಸ್ತ್ರಗಳೂ ಲಭ್ಯವಿರಲಿಲ್ಲ.

ಕಾಲರಾ ಸಾಂಕ್ರಾಮಿಕ ಹರಡುತ್ತಿದ್ದ ಪ್ರಾಂರಭಿಕ ವರ್ಷಗಳಲ್ಲಿ ಯುರೋಪಿನ ದೇಶಗಳಲ್ಲಿ ಪ್ರತಿಸಾರಿ ನೂರಾರು ಜನರನ್ನು ಬಲಿ ತೆಗೆದುಕೊಳ್ಳುತ್ತಿದ್ದರೆ, ಪೌರ್ವಾತ್ಯ ರಾಷ್ಟ್ರಗಳಲ್ಲಿ ಸಾವಿರ ಸಾವಿರಗಟ್ಟಲೆ ಜನ ಸಾವಿಗೀಡಾಗುತ್ತಿದ್ದರು. ಈ ಪರಿಸ್ಥಿತಿ ಮತ್ತೆ ಸದ್ಯದಲ್ಲಿ ಉಂಟಾಗಲಾರದೆಂದು ಜನ ಭಾವಿಸುತ್ತಿರುವಷ್ಟರಲ್ಲೇ ಮತ್ತೆಲ್ಲಾದರೂ ಅದು ತಲೆ ಎತ್ತುತ್ತಿತ್ತು. ಅದರ ಭಯ ಜನರಲ್ಲಿ ಶಾಶ್ವತವಾಗಿರುವಂತ್ತಿತ್ತು. ಬಂಧನಕ್ಕೊಳಗಾದರೂ ಈ ಕ್ರೂರಮೃಗ ಹೊರಬಂದಾಗ ಯಾವ ವಲಯ ಅಥವಾ ಯಾವ ಸಮಯದಲ್ಲಿ ಎರಗುತ್ತದೆಂಬುದನ್ನು ಹೇಳಲು ಬರುವಂತಿರಲಿಲ್ಲ.

ಇಂಥ ಭಯ ಭೀತಿಯ ವಾತಾವರಣದಲ್ಲಿ ಕಾಲರಾ ಬಗೆಗೆ ಹಲವಾರು ಚರ್ಚಾಘೋಷ್ಠಿಗಳು, ವಿಶ್ವ ಸಮ್ಮೇಳನಗಳು ಜರುಗುತ್ತಲೇ ಇದ್ದವು. ನಿಷ್ಣಾತ ವೈದ್ಯರು, ವಿಜ್ಞಾನಿಗಳು, ರಾಜಕಾರಣಿಗಳು, ಸಮಾಜ ಸುಧಾರಕರೆಲ್ಲಾ ಇಂಥ ಸಮ್ಮೇಳನಗಳಲ್ಲಿ ಭಾಗವಹಿಸಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು. ಆದರೂ ರೋಗವಾಹಕ ಗಳಾವುವು? ಅವುಗಳ ರೂಪರೇಷೆಗಳೇನು? ಅವು ಹರಡುವ ಬಗೆ ಹೇಗೆ? ಮುಂತಾದ ಮೂಲಭೂತ ವಿಷಯಗಳನ್ನು ತಿಳಿಯಲು ಸಾಧ್ಯವಾಗಲೇ ಇಲ್ಲ. ಈ ಶ್ರಮಗಳೆಲ್ಲಾ ಗಾಳಿಗುದ್ದಿ ಮೈ ನೋಯಿಸಿಕೊಂಡಂತಾಗುತ್ತಿತ್ತು. ಫ್ರಾನ್ಸ್ ದೇಶದಲ್ಲಿ ಅತ್ಯಂತ ಪ್ರಮುಖ ವೈದ್ಯರನ್ನೊಳಗೊಂಡ ಕಾಲರಾ ಕಮೀಷನ್ 1883ರಲ್ಲಿ ನೇಮಕ ಮಾಡಿದ್ದರು. ಅವರಿಂದ ಯಾವ ಸಮಸ್ಯೆಯನ್ನು ಬಿಡಿಸಲಾಗದೆ ''ಕಾಲರಾ ಸಾಂಕ್ರಾಮಿಕ ಒಂದು ಸಾರಿ ಯುರೋಪ್ ಖಂಡಕ್ಕೆ ಪಾದಾರ್ಪಣೆ ಮಾಡಿತೆಂದರೆ ವಿಜ್ಞಾನದ ಈಗಿನ ತಿಳುವಳಿಕೆಯ ಪ್ರಕಾರ ಅದರ ಮುನ್ನಡೆಯನ್ನ ತಡೆಯುವುದು ಯಾರಿಂದಲೂ ಸಾಧ್ಯವಿಲ್ಲ''ವೆಂಬ ಹತಾಶ ಭಾವನೆಯನ್ನೇ ವ್ಯಕ್ತಪಡಿಸಿದ್ದರಂತೆ!

ಜರ್ಮನಿಯ ವೋಲ್‌ಸ್ಟೀನ್ ಪ್ರಾಂತ್ಯದಲ್ಲಿ ಜಿಲ್ಲಾವೈದ್ಯಾಧಿಕಾರಿಯಾಗಿದ್ದ ರಾಬರ್ಟ್‌ಕಾಖ್, ಸೋಂಕು ರೋಗಗಳಿಗೆ ಕಾರಣವಾಗಿದ್ದ ಮಿಣಿರೋಗಾಣುಗಳನ್ನು ಮೊಟ್ಟಮೊದಲು ಸೂಕ್ಷ್ಮ ದರ್ಶಕ ಯಂತ್ರದಡಿಯಲ್ಲಿ ತೋರಿಸುವಲ್ಲಿ ಯಶಸ್ವಿಯಾದರು. ಸಾಮಾನ್ಯವಾಗಿ ಕುರಿಗಳಲ್ಲಿ ಪ್ರಚಲಿತವಿದ್ದ, 'ನೆರಡಿ ರೋಗ'' (ಆಂಥ್ರಾಕ್ಸ್)ಕ್ಕೆ ಕಾರಣವಾದ ಆಂಥ್ರಾಕ್ಸ್ ಬ್ಯಾಸಿಲೈಗಳನ್ನು ಸೂಕ್ಷ್ಮದರ್ಶಕದಲ್ಲಿ ನೋಡಿ, ಇತರರಿಗೂ ಪ್ರದರ್ಶಿಸಿದರು. ಸಣ್ಣಸಣ್ಣ ಕಡ್ಡಿಯಾಕಾರದ ಆ ರೋಗಾಣುಗಳನ್ನು ಚಲನ, ವಲನ, ಅವು ವೃದ್ಧಿಯಾಗಿ ಬೆಳೆಯುವ ರೀತಿ ನೀತಿಗಳನ್ನು ಮೊಟ್ಟ ಮೊದಲು ವಿಜ್ಞಾನ ಲೋಕಕ್ಕೆ ತೋರಿಸಿದ ಕೀರ್ತಿ ರಾಬರ್ಟ್ ಕಾಖ್‌ಗೆ ಸಲ್ಲುತ್ತದೆ. ಅಲ್ಲಿಂದಲೇ ಮಾನವನೂ ಸೇರಿದಂತೆ ಎಲ್ಲಾ ಜೀವಿ ಸಂಕುಲಗಳ ಸೋಂಕು ರೋಗಗಳಿಗೆ ಕಣ್ಣಿಗೆ ಅಗೋಚರವಾದ ಇಂತಹ ಮಿಣಿಜೀವಿಗಳೇ ಕಾರಣವೆಂಬುದು ಸಾಬೀತಾಯಿತು. ಆ ತನಕ ಫ್ರಾನ್ಸ್‌ನ ಲೂಯಿ

ಪ್ಯಾಶ್ಚರ್, ಇಂಗ್ಲೆಂಡಿನ ಜೋಸೆಫ್‌ಲಿಸ್ಟರ್ ಮುಂತಾದವರು ಅಂತಹ ಅಗೋಚರ ಸೂಕ್ಷ್ಮ ರೋಗಾಣುಗಳ ಇರುವಿಕೆಯನ್ನೇ ಶಂಕಿಸಿದ್ದರು. ಆದರೆ ರಾಬರ್ಟ್ ಕಾಖ್‌ನಂತೆ ಪ್ರದರ್ಶಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಮುಂದೆ ಕಾಖ್ ಕ್ಷಯರೋಗಕ್ಕೆ ಕಾರಣವಾದ ಟ್ಯುಬರ್‌ಕ್ಯುಲರ್ ಬ್ಯಾಸಿಲೈ (Tubercular bacilli) ಸ್ಟ್ರೆಪ್ಟೊ ಮತ್ತು ಸ್ಟೆಫೈಲೋಕಾಕೈ (Strepto and staphylocoacci) ಮುಂತಾದ ಹಲವಾರು ರೋಗಾಣುಗಳನ್ನು ಕಂಡು ಹಿಡಿದು ಕೀರ್ತಿ ಭಾಜನರಾಗಿದ್ದಾರೆ. ಆ ದಿಸೆಯಲ್ಲಿ ಅವರ ಕಾರ್ಯ ವೈಖರಿಯನ್ನು ಮುಂದೆ ವಿವರಿಸಲಾಗಿದೆ.

ಕಾಲರಾ ರೋಗದ ರೂಪರೇಷೆಗಳು ತುಂಬಾ ನಿಗೂಢವಾಗಿದ್ದು ಅದರಿಂದ ಪ್ರಪಂಚದಾದ್ಯಂತ ಲಕ್ಷಾಂತರ ಜನ ಸಾಯುತ್ತಿದ್ದಾಗ ರಾಬರ್ಟ್‌ಕಾಖ್ ಆ ಕ್ಷೇತ್ರ ಪ್ರವೇಶ ಮಾಡಿದರು. ಮೊಟ್ಟಮೊದಲು ಕಾಲರಾ ಸಾಂಕ್ರಾಮಿಕ ಅತ್ಯುಗ್ರಸ್ಥಿತಿಯಲ್ಲಿರುವಾಗಲೇ ಅದರ ಸಂಶೋಧನೆಗಾಗಿ ಈಜಿಪ್ಟ್‌ಗೆ ತೆರಳಿದರು (1893). ಅಲ್ಲಿಂದ 1897ರಲ್ಲಿ ಭಾರತಕ್ಕೂ ಪ್ರಯಾಣ ಮಾಡಿದರು. ನಿಯಂತ್ರಿತ ಪ್ರಯೋಗಗಳಿಂದ (Controlled Experiments) ಕಾಲರಾ ರೋಗಿಗಳನ್ನು ಪರೀಕ್ಷೆಗೊಳಪಡಿಸಿದರು. ಈ ಪ್ರಯೋಗ ಪರೀಕ್ಷೆಗಳಿಂದ ಕಾಲರಾ ವ್ಯಾಧಿಗೆ ''ಕಾಮಾ''ಸ್ವರೂಪದ, (comma shaped ಅಲ್ಪವಿರಾಮ ಚಿಹ್ನೆ) ರೋಗಾಣುಗಳೇ ಕಾರಣವೆಂಬುದನ್ನು ತೋರಿಸಿಕೊಟ್ಟರು (1893). ಆದರೆ ಪ್ರಯೋಗ ಪಶುಗಳಿಗೆ ಕಾಲರಾ ಸೋಂಕನ್ನು ದಾಟಿಸುವಲ್ಲಿ ವಿಫಲವಾಗಿದ್ದರು. ಲಕ್ಷಾಂತರ ಕಾಲರಾ ರೋಗಾಣುಗಳನ್ನು ಅವು ತಿನ್ನುವಂತೆ ಮಾಡಿದರೂ ಕಾಲರಾ ವ್ಯಾಧಿ ಉದ್ಭವವಾಗಲಿಲ್ಲ. ಕಾಖ್‌ರ ಸಂಶೋಧನೆಯ ಫಲಿತಾಂಶಗಳಲ್ಲಿ ತಿರುಳಿರಬಹುದೆಂಬುದು ಮುಂದಿನ ಕೆಲವೇ ದಿನಗಳಲ್ಲಿ ದುರದೃಷ್ಟಕರ ಘಟನೆಯೊಂದರಿಂದ ಸಾಬೀತಾಯಿತು. ಭಾರತದಲ್ಲಿ ಜುರುಗುತ್ತಿದ್ದ ಸಂಶೋಧನೆಗಳಿಗೆ ವೈದ್ಯರೊಬ್ಬರು ಸಹಾಯಕರಾಗಿ ಕೆಲಸ ಮಾಡುತ್ತಿದ್ದರು; ರೋಗಾಣುಗಳನ್ನು ಕೃತಕವಾಗಿ ಬೆಳೆಸುವ ಕಾರ್ಯದಲ್ಲಿ ಅವರು ನಿರತರಾಗಿದ್ದರು. ಅವರು ಬರ್ಲಿನ್‌ಗೆ ವಾಪಸಾಗುತ್ತಿದ್ದಂತೆಯೇ ಕಾಲರಾದಿಂದಲೇ ಮೃತಪಟ್ಟರು. ಬರ್ಲಿನ್‌ನಲ್ಲಿ ಆಗ ಕಾಲರಾ ಉಪಟಳವಿರಲಿಲ್ಲ. ಅವರು ವಾಸ್ತವವಾಗಿ ಕಾಲರಾದಿಂದಲೇ ಸತ್ತಿದ್ದರೂ, ಕಾಖ್‌ರ ವಿರೋಧಿಗಳು ಅದನ್ನು ಒಪ್ಪಿಕೊಳ್ಳಲು ತಯಾರಿರಲಿಲ್ಲ. ಈ ಪ್ರಕರಣಕ್ಕೆ ಸರಿಯಾದ ಅರ್ಥವಿವರಣೆ ನೀಡುವುದು ಡಾ॥ಕಾಖ್‌ರಿಗೆ ತುಂಬಾ ಕಷ್ಟವಾಯಿತು. ಕಾಲರಾ ಬ್ಯಾಸಿಲೈಗಳ ಬೆಳವಣಿಗೆಯ ಯಾವುದೋ ಒಂದು ಹಂತದಲ್ಲಿ ಅವು ಆ ವೈದ್ಯರ ದೇಹ ಪ್ರವೇಶ ಮಾಡಿದ್ದರಿಂದ ಅವರಲ್ಲಿ ಕಾಲರಾ ಪ್ರಕಟ ವಾಗಿರಬಹುದೆಂದು ಕಾಖ್ ನೀಡಿದ ಅರ್ಥವಿವರಣೆಯನ್ನು ಅವರ ವಿರೋಧಿಗಳು ಒಪ್ಪಲು ತಯಾರಿರಲಿಲ್ಲ.

ಕಾಖ್ ಅವರ ವಿರೋಧಿಗಳ ವಾದವನ್ನೇ ಸಮರ್ಥಿಸುವಂತಹ ಕೆಲವು ಘಟನೆಗಳು ಆ ಸಮಯದಲ್ಲೇ ಬೆಳಕಿಗೆ ಬಂದವು. ಆಸ್ಟ್ರಿಯಾದ ವಿಜ್ಞಾನಿ ವಾನ್ ಪೆಟ್ಟೆನ್‌ಕೋಫರ್

ಮತ್ತು ಮ್ಯೂನಿಕ್‌ನಲ್ಲಿದ್ದ ಅವರ ಸಹಾಯಕ ಎಮ್ಮೆರಿಚ್ ಇಬ್ಬರೂ ಒಡಗೂಡಿ ಲಕ್ಷಾಂತರ ಸಂಖ್ಯೆಯ ಕಾಲರಾದ ಕಾಮಾ ಬ್ಯಾಸಿಲ್ಲೈ ಸೇರಿಸಿದ್ದ ಗಂಜಿಯನ್ನು ಕುಡಿದರು. ಅವರಿಗೆ ಏನೂ ಆಗಲಿಲ್ಲ. ಈ ವಿವಾದ ಫ್ರಾನ್ಸ್, ಜರ್ಮನಿ, ಇಟಲಿ ಮುಂತಾದ ಕಡೆಯ ಇತರ ಕೆಲವು ವಿಜ್ಞಾನಿಗಳನ್ನು ಕಣಕ್ಕಿಳಿಯುವಂತೆ ಮಾಡಿತು. ಅವರಲ್ಲಿ ಕೆಲವರು ಕಾಲರಾ ರೋಗಿಗಳೇ ವಿಸರ್ಜಿಸಿದ್ದ ಮಲವನ್ನೇ ಬಹಿರಂಗವಾಗಿ ತಿಂದರು. ಅವರಲ್ಲೂ ಕಾಲರಾ ರೋಗದ ಚಿಹ್ನೆಗಳು ಪ್ರಕಟವಾಗಲೇ ಇಲ್ಲ! ಈ ಎಲ್ಲಾ ಪ್ರಯೋಗಗಳಿಂದಲೂ ಕಾಲರ ಹರಡದಂತೆ ತಡೆಹಿಡಿಯುವುದಕ್ಕಾಗಲೀ ಅಥವಾ ಅದನ್ನು ಯಶಸ್ವೀ ಚಿಕಿತ್ಸೆಗೊಳಪಡಿಸುವುದಕ್ಕಾಗಲೀ ಯಾವುದೇ ಮಾರ್ಗದರ್ಶನ ಕಂಡು.ಬರಲಿಲ್ಲ. ಆ ಸಮಯದ (1880ರ ದಶಕದಲ್ಲೂ) ಹಿಂದಿನಂತೆ ಕಾಲರಾ ವಿಷಯದಲ್ಲಿ ಅಸಹಾಯಕತೆ ಎದ್ದು ಕಾಣುತ್ತಿತ್ತು.

ಪರಿಸ್ಥಿತಿ ಹೀಗೆ ಮುಂದವರಿಯುತ್ತಿರುವಾಗಲೇ 1892ರಲ್ಲಿ ರಷ್ಯಾಕ್ಕೆ ಕಾಲರಾ ಮತ್ತೆ ಪ್ರವೇಶ ಮಾಡಿತು. ಆಗಮನದ ಮುನ್ಸೂಚನೆ ತಿಳಿಯುತ್ತಲೇ ರಷ್ಯಾ-ಪರ್ಷಿಯನ್ ಗಡಿಯಲ್ಲಿ ಬಿಗಿಯಾದ ಕಾವಲಿನ ಏರ್ಪಾಡು ಮಾಡಲಾಯಿತು. ಆದರೂ ಈ ಸಾರಿ ರಷ್ಯಾದಲ್ಲಿ ಕಾಲರಾ ಅತ್ಯಂತ ಬಿರುಸಿನಿಂದ ಹಬ್ಬಲಾರಂಭಿಸಿತು. ಮೊದಲು ಅದರ ಎಪ್ಪತ್ತೇಳು ಪ್ರಾಂತ್ಯಗಳಲ್ಲಿ ಕಾಲರ ಒಮ್ಮೆಲೇ ಕಾಣಿಸಿಕೊಂಡಿತಲ್ಲದೆ, ಅತ್ಯಲ್ಪ ಸಮಯದಲ್ಲಿ ಇತರ ಪ್ರಾಂತ್ಯಗಳಿಗೂ ಹರಡಿತು; ಇಡೀ ಚಕ್ರಾಧಿಪತ್ಯವೇ ಕಾಲರಾ ಮಯವಾಯಿತು.ಅದು ತಗುಲಿದ ಸುಮಾರು ಆರುಲಕ್ಷ ಜನರಲ್ಲಿ ಮೂರು ಲಕ್ಷಕ್ಕಿಂತಲೂ ಹೆಚ್ಚು ಮಂದಿಯ ಆಹುತಿಯಾಯಿತು. ಮುಂದೆ ಅದು ಪಶ್ಚಿಮ ಮುಖವಾಗಿ ಪಯಣಿಸಿ ಯುರೋಪಿನ ಇತರ ಮಹಾ ನಗರಗಳ ಬಾಗಿಲುಗಳನ್ನು ತಟ್ಟಲಾರಂಭಿಸಿತು. ಡಾ॥ವ್ಲಾದಿಮಿರ್ ಹಾಫ್‌ಕಿನ್ ಇಂತಹ ಉದ್ರಿಕ್ತ ಪರಿಸ್ಥಿತಿಯಲ್ಲಿ ಕಾಲರಾ ವಿರುದ್ಧ ನಿರೋಧಕ ಲಸಿಕೆಯೊಂದನ್ನು ಕಂಡು ಹಿಡಿಯುವ ಸಲುವಾಗಿ ರಂಗ ಪ್ರವೇಶ ಮಾಡಿದರು.

೪

# ಕಾಲರಾ ವ್ಯಾಕ್ಸೀನ್

ಸೋಂಕು ರೋಗಗಳು ಉದ್ಭವಿಸದಂತೆ ತಡೆಯಲು ನಿರೋಧಕ ಲಸಿಕೆಗಳನ್ನು (ವ್ಯಾಕ್ಸೀನು) ಕಂಡು ಹಿಡಿಯುವಲ್ಲಿ ಈಗ ವ್ಲಾದಿಮಿರ್ ಹಾಫ್‌ಕಿನ್ ಕೈಗೊಳ್ಳುತ್ತಿದ್ದ ಸಂಶೋಧನೆಯು ಅಂತಹ ಹೊಸಮಾರ್ಗವೇನಲ್ಲ. ಫ್ರಾನ್ಸಿನ ಲೂಯಿ ಪ್ಯಾಶ್ಚರ್ ಈ ಮೊದಲೇ ನರಡಿ ರೋಗ, ರೇಬೀಸ್, ಕೋಳಿ ಕಾಲರ ಮುಂತಾದವುಗಳ ಸೋಂಕನ್ನು ನಿರೋಧಿಸುವಲ್ಲಿ ಯಶಸ್ವಿಯಾಗಬಹುದಂಥ ವ್ಯಾಕ್ಸೀನುಗಳನ್ನು ಕಂಡು ಹಿಡಿದಿದ್ದರು. ಸೋಂಕನ್ನುಂಟು ಮಾಡುವ ರೋಗಾಣು ಅಥವಾ ಅವುಗಳಿಂದ ಉತ್ಪಾದನೆಯಾಗುವ ''ವಿಷವಸ್ತು ('ಜೀವಿಷ')ಗಳ ಪ್ರಭಾವವನ್ನು ಮೊದಲು ಸಾಕಷ್ಟು ನಿಷ್ಕ್ರಿಯಗೊಳಿಸ ಲಾಗುತ್ತದೆ. ಮುಂದೆ ಅವನ್ನು ಆರೋಗ್ಯ ಶಾಲಿಗೆ ಮೊದಲೇ ನಿರ್ಧಾರ ಮಾಡಿಕೊಂಡ ಪ್ರಮಾಣಗಳಲ್ಲಿ (ಡೋಸ್) ಒಂದೆರಡಾವರ್ತಿ ನೀಡಿದಾಗ ಅಂತಹವರಲ್ಲಿ ಆ ರೋಗದ ಚಿಹ್ನೆಗಳು ಸೌಮ್ಯ ರೀತಿಯಲ್ಲಿ ಪ್ರಕಟವಾಗಬಹುದು. ಆದರೆ ಜೀವಾಪಾಯವೇನೂ ಆಗುವುದಿಲ್ಲ. ಸಂಬಂಧಿಸಿದ ರೋಗಾಣುಗಳ ವಿರುದ್ದ ಸೆಣಸಬಲ್ಲ ನಿರೋಧಕ ಶಕ್ತಿ (Immunity) ಅವರಲ್ಲಿ ವೃದ್ಧಿಯಾಗುತ್ತಿತ್ತು. ನರಡಿರೋಗ, ರೇಬಿಸ್ ಮುಂತಾದವುಗಳ ವಿರುದ್ಧ ವ್ಯಾಕ್ಸೀನುಗಳು ತಯಾರಾದದ್ದು ಈ ತತ್ವದ ಆಧಾರದ ಮೇಲೆಯೇ. ಹಾಗೆ ನೋಡಿದರೆ, ಇಂಗ್ಲೆಂಡಿನ ಎಡ್ವರ್ಡ್ ಜೆನ್ನರ್ 1796ರಷ್ಟು ಹಿಂದೆಯೇ ಮೈಲಿರೋಗದ ವಿರುದ್ಧದ ಲಸಿಕೆಯನ್ನು -''ದೇವಿ ಹಾಕುವ'' ಪದ್ಧತಿಯನ್ನು ಜಾರಿಗೆ ತಂದಿದ್ದನು. ಹೈನುಗಾರಿಕಾ ವೃತ್ತಿಯ ಗೌಳಿಗಿತ್ತಿಯರಿಗೆ ಸಾಮಾನ್ಯವಾಗಿ ಮೈಲಿ ಬೇನೆ ತಗಲುವುದಿಲ್ಲವೆಂಬ ಜನಜನಿತವಾದ ನಂಬುಗೆ ಜೆನ್ನರ್‌ನಲ್ಲಿ ಅಚ್ಚರಿಯುಂಟು ಮಾಡಿತ್ತು. ಗೌಳಿಗಿತ್ತಿಯರಿಗೆ ಹಸುಗಳಿಗೆ ಸಾಮಾನ್ಯವಾಗಿರುತ್ತಿದ್ದ ''ಗೋಮೈಲಿ''ಯ ಸೋಂಕು ಆಗಾಗ್ಗೆ ಅಲ್ಪ ಪ್ರಮಾಣದಲ್ಲಿ ಆಗುತ್ತಿದ್ದುದೇ ಅವರಿಗೆ ಮಾನವರ ಮೈಲಿ ಬೇನೆ ತಗುಲದಿರುವುದರ ಕಾರಣವಿರಬಹುದೆಂಬುದು ಜೆನ್ನರ್‌ನ ಯೋಚನಾ ಲಹರಿಯಾಯಿತು. ಅದರ ಮುಂದುವರಿದ ಚಿಂತನೆಯ ಫಲವಾಗಿ ಮೈಲಿ ಬೇನೆಯ ರೋಗಿಯೊಬ್ಬನ ಕೀವಿನ ಬೊಬ್ಬೆ (Vesicle)ಯಿಂದ ಸ್ವಲ್ಪ ''ರಸಿಕೆ'' (ಸಿಡುಬಿನ ಹಾಲು)ಯನ್ನು ಬಾಲಕನೊಬ್ಬನಿಗೆ ಸೋಂಕಿಸಿದನು. ಬಾಲಕನಲ್ಲಿ ಮೈಲಿ ಬೇನೆಯ ಜ್ವರ ಸೌಮ್ಯ ರೀತಿಯಲ್ಲಿ ಪ್ರಕಟವಾದರೂ ಇತರ ಲಕ್ಷಣವಾದ ಬೊಬ್ಬೆ ಏಳಲಿಲ್ಲ. ಮುಂದೇ ಕೆಲವೇ ತಿಂಗಳಲ್ಲಿ ಉಗ್ರರೀತಿಯ

ಮೈಲಿಯ ಬೊಬ್ಬೆಯಿಂದ ಹೆಚ್ಚು ಪ್ರಮಾಣದ ರಸಿಕೆಯನ್ನು ಅದೇ ಬಾಲಕನಿಗೆ ನೀಡಿದರೂ ಅವನಲ್ಲಿ ಮೈಲಿ ಬೇನೆ ಪ್ರಕಟವಾಗಲಿಲ್ಲ. ಈ ತತ್ವದ ಆಧಾರದ ಮೇಲೆಯೇ ಎಡ್ವರ್ಡ್ ಜೆನ್ನರ್ ಇತಿಹಾಸ ಪ್ರಸಿದ್ಧ ವ್ಯಾಕ್ಸಿನೇಷನ್ ಪದ್ಧತಿಯನ್ನು ಜಾರಿಗೆ ತಂದಿದ್ದು.ಅದನ್ನು ವ್ಯಾಪಕವಾಗಿ ಪ್ರಪಂಚದಾದ್ಯಂತ ಜಾರಿಗೆ ತಂದುದರಿಂದಲೇ ಮೈಲಿ ಬೇನೆಯನ್ನು ಈ ಗೋಳದಿಂದ ಉಚ್ಚಾಟಿಸಲು ಈಗ ಸಾಧ್ಯವಾಗಿರುವುದು.

## ವಿಫಲ ಯತ್ನ

ಹಾಫ್‌ಕಿನ್ನರು ಕಾಲರಾ ವಿರುದ್ಧ ಲಸಿಕೆಯ (Vaccine-serum) ಸಂಶೋಧನೆಯನ್ನು ಕೈಗೊಳ್ಳುವ ಮೊದಲೇ 1884-85ರಲ್ಲಿ ವೈದ್ಯರೊಬ್ಬರು ಆ ಸಾಹಸಕ್ಕಿಳಿದು ಸಾಕಷ್ಟು ಕುಖ್ಯಾತಿಗೆ ಭಾಜನರಾಗಿದ್ದರು. ಆ ಸಮಯದಲ್ಲಿ ಆಫ್ರಿಕಾ ಮೂಲದಿಂದ ಯುರೋಪಿಗೆ ಪ್ರವೇಶಿಸಿದ ಕಾಲರಾ, ಸ್ಪೆಯಿನ್‌ನಲ್ಲಿ ತಳವೂರಿತ್ತು. ಆ ದೇಶದ ಅತಿ ಹಿಂದುಳಿದ ಪ್ರದೇಶವೆನಿಸಿದ್ದ ಟರ‍್ರಗೋನಾ ಪ್ರಾಂತ್ಯದ ಟೋರ್ಟೋಸ ನಗರದ ಜೈಮೀಫೆರಾನ್ ಎಂಬುವರೇ ಆ ಪ್ರಯೋಗಕ್ಕಿಳಿದವರು. ಲೂಯಿಪ್ಯಾಶ್ಚರ್ ರೋಗ ನಿರೋಧಕ ಲಸಿಕೆಗಳನ್ನು ಬಳಸಿಕೊಂಡಿದ್ದ ಸಿದ್ಧಾಂತಗಳೇ ಅವರ ಸಂಶೋಧನೆಗಳ ಅಡಿಗಲ್ಲೆಂದು ಫೆರಾನ್ ಹೇಳಿಕೊಂಡಿದ್ದರೂ, ಅವನ್ನು ತತ್ವಶಃ ಹಾಗೂ ಯಥಾವತ್ತಾಗಿ ಅನುಸರಿಸು ತ್ತಿರಲಿಲ್ಲ; ಜೊತೆಗೆ ತಮ್ಮದೇ ''ಬುದ್ಧಿಶಕ್ತಿ''ಯಿಂದ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿರುವುದಾಗಿ ಬಡಾಯಿಕೊಚ್ಚುತ್ತಿದ್ದರು.

ಫೆರಾನ್ ರೂಪಿಸಿಕೊಂಡಿದ್ದ ವಿಧಾನದಲ್ಲಿ ಆಹಾರ-ಮಾಧ್ಯಮಗಳಲ್ಲಿ ಬೆಳೆಸಿದ್ದ ಜೀವಂತ ಕಾಲರಾ ಬ್ಯಾಸಿಲ್ಲೈಗಳನ್ನು ನೇರವಾಗಿ ವ್ಯಕ್ತಿಗೆ ಚುಚ್ಚುತ್ತಿದ್ದರು. ಅವುಗಳನ್ನು ನಿಷ್ಕ್ರಿಯಗೊಳಿಸುವುದಾಗಲೀ ಇಲ್ಲವೆ ಸಾಯಿಸುವುದಾಗಲೀ ಮಾಡದೇ ನೇರವಾಗಿ ಮಾಂಸಖಂಡಗಳಿಗೆ ಇಂಜಕ್ಷನ್ ಮಾಡಿ ಸೋಂಕನ್ನು ದಾಟಿಸುತ್ತಿದ್ದರು. ಅವರ ಅನಿಸಿಕೆಯ ಪ್ರಕಾರ ಬಾಯಿ ಅಥವಾ ಜಠರದ ಮೂಲಕ ಕಾಲರಾ ಜೀವಿಗಳನ್ನು ನೀಡುತ್ತಿರಲಿಲ್ಲ ವಾದುದರಿಂದ, ಅವು ಜಠರ ಮತ್ತು ಕರುಳಿನ ಒಳಪರೆಯ ಮೇಲೆ ನೇರವಾಗಿ ಆಕ್ರಮಣ ಮಾಡಿ ವಾಂತಿ ಭೇದಿಯನ್ನುಂಟು ಮಾಡಲು ಸಾಧ್ಯವಿಲ್ಲ; ಬದಲಿಗೆ ಇಂಜಕ್ಷನ್ ಮೂಲಕ ಚರ್ಮದಡಿಯಲ್ಲಿರಿಸುವುದರಿಂದ ಕರುಳುಗಳೊಳಗೆ ಅನಾಹುತಗಳನ್ನುಂಟು ಮಾಡದೆ ದೇಹದಲ್ಲಿ ರೋಗನಿರೋಧಕ ಶಕ್ತಿಯನ್ನುಂಟುಮಾಡುತ್ತದೆಂಬುದು ಅವರ ವಾದವಾಗಿ ರುತ್ತಿತ್ತು. ಮುಂದಿನ ಸಾರಿ ಕಾಲರಾ ಸೋಂಕು ಅಂತಹವರಿಗೆ ತಗುಲಿದರೆ ಅವರಲ್ಲಿ ರೋಗ ಉಲ್ಬಣಗೊಳ್ಳದಂತೆ ಎಚ್ಚರವಹಿಸುತ್ತದೆಂಬುದು ಅವರ ಅನಿಸಿಕೆ ಯಾಗಿತ್ತು.

ಕಾಲರಾ ರೋಗದ ಭೀಕರ ಪರಿಣಾಮಗಳಿಂದ ತತ್ತರಿಸಿಹೋಗಿದ್ದ ಜನ ಸಮುದಾಯ ಹೆಚ್ಚಿನ ತಕರಾರು ಮಾಡದೆ ಫೆರಾನರ ವ್ಯಾಕ್ಸಿನೇಷನ್‌ಗೆ ಮೈಯೊಡ್ಡಿದ್ದರು.

ಸ್ಪೆಯಿನ್‌ನ ಅತ್ಯಂತ ಹಿಂದುಳಿದ ಕ್ಯಾಥೋಲಿಕ್ ಪಂಗಡವೊಂದರಲ್ಲಿ ಫೆರಾಸ್ ತಮ್ಮ ಮೊದಲ ಪ್ರಯೋಗಗಳನ್ನು ಜಾರಿಗೆ ತಂದರು; ಅದರಿಂದುಂಟಾಗುತ್ತಿದ್ದ ಹೆಚ್ಚಿನ ನೋವು, ಜ್ವರಗಳನ್ನು ಜನ ಸಹಿಸಿಕೊಂಡರು. ವಿಪರ್ಯಾಸದ ಸಂಗತಿಯೆಂದರೆ ಅಂತಹ ವ್ಯಾಕ್ಸಿನೇಷನ್ ಮಾಡಿಸಿಕೊಂಡವರಲ್ಲೇ ಹೆಚ್ಚಿನ ಕಾಲರಾ ಪ್ರಕರಣಗಳು ಕಾಣಿಸಿಕೊಳ್ಳು ತ್ತಿದ್ದುದು. ವೆಲೆನ್ಸಿಯಾ ಎಂಬಲ್ಲಿಯ ಸನ್ಯಾಸಿನಿ ಮಠ ಒಂದರಲ್ಲಿ ಎಪ್ಪತ್ತು ಜನ ಸನ್ಯಾಸಿನಿ ಯರಿಗೆ ಆ ವ್ಯಾಕ್ಸೀನನ್ನು ನೀಡಲಾಗಿತ್ತು. ಅವರಲ್ಲಿ ನಲವತ್ತು ಜನರಿಗೆ ಕಾಲರಾ ತಗುಲಿತ್ತು; ಬದಲಿಗೆ ವ್ಯಾಕ್ಸಿನೇಷನ್ ಮಾಡಿಸಿಕೊಳ್ಳಲು ನಿರಾಕರಿಸಿದ್ದ ಹತ್ತು ಜನ ಸನ್ಯಾಸಿನಿಯರಿಗೆ ಕಾಲರಾ ತಗುಲಲೇ ಇಲ್ಲ! ಕ್ರಿಶ್ಚಿಯನ್ ಮಠಾಧಿಪತಿಗಳು ಈ ದುರಂತವನ್ನು ದೇವರ ಮಹಿಮೆಯ ಎದುರಿಗೆ ವಿಜ್ಞಾನಕ್ಕಾದ ಸೋಲು ಎಂದು ತೃಪ್ತಿಪಟ್ಟು ಕೊಂಡರಂತೆ!

ಫೆರಾನರ ಜೊತೆ ಕೆಲಸಮಾಡುತ್ತಿದ್ದ ಇತರ ವಿಜ್ಞಾನಿಗಳ ಅಭಿಪ್ರಾಯದಂತೆ ಅವರಿಗೆ ಮಿಣಿಜೀವಿಶಾಸ್ತ್ರದ ಬಗೆಗೆ ಹೆಚ್ಚಿನ ಪರಿಜ್ಞಾನವಿರಲಿಲ್ಲ; ಅವರ ಹತ್ತಿರ ತೀರಾ ಹಳೆಯದಾದ ಸೂಕ್ಷ್ಮದರ್ಶಕವಿದ್ದು, ಓಬೀರಾಯನ ಕಾಲದ ರೀತಿ ನೀತಿಗಳನ್ನೇ ಅನುಸರಿಸು ತ್ತಿದ್ದರು; ಅವರಲ್ಲಿದ್ದ ಸಲಕರಣೆಗಳಿಂದ ಸರಿಯಾದ ಫಲಿತಾಂಶಗಳನ್ನು ನಿರೀಕ್ಷಿಸುವುದಕ್ಕಾಗು ತ್ತಿರಲಿಲ್ಲ; ನೀಡುತ್ತಿದ್ದ ವ್ಯಾಕ್ಸೀನ್‌ನಲ್ಲಿ ನಿಖರ ಪ್ರಮಾಣವಿದ್ದಂತಿರಲಿಲ್ಲ; ಅವೆಲ್ಲಾ ಒಂದು ಅಂದಾಜಿನಲ್ಲಿ ನಿರ್ಧಾರವಾಗುತ್ತಿದ್ದವೆಂಬುದು ಅವರ ಅಭಿಪ್ರಾಯವಾಗಿತ್ತು.

ಫೆರಾನ್ ನೀಡುತ್ತಿದ್ದ ವ್ಯಾಕ್ಸೀನಿನ ಅನಾಹುತಗಳನ್ನು ಗಮನಿಸಿದ ಕೆಲವು ಮಿಣಿಜೀವಿ ಶಾಸ್ತ್ರಜ್ಞರು ಅವರನ್ನು ಭೇಟಿಮಾಡಿದ್ದುಂಟು. ಅವರು ಪ್ರಯೋಗಶಾಲೆಯ ಒಳಗಡೆ ಯಾರನ್ನೂ ಸೇರಿಸುತ್ತಿರಲಿಲ್ಲ. ವ್ಯಾಕ್ಸೀನಿನ ಬಗೆಗೆ ಹೆಚ್ಚಿಗೆ ತಿಳಿಯಬಯಸಿದರೆ ಮೌನವ್ರತ ತಾಳಿ ಬಿಡುತ್ತಿದ್ದರಂತೆ; ತಮ್ಮ ಗುಟ್ಟನ್ನು ಇತರಿಗೆ ತಿಳಿಸಲು ಅವರು ತಯಾರಿರಲಿಲ್ಲ. ಈ ತರಹೆಯ ರಹಸ್ಯ ಕಾರ್ಯಾಚರಣೆ ನಿಜವಾದ ವಿಜ್ಞಾನಿಯೊಬ್ಬನ ಲಕ್ಷಣವಲ್ಲ; ಹಾಗಾಗಿ ವಿಜ್ಞಾನ ಲೋಕದಲ್ಲಿ ಅವರ ಬಗೆಗೆ ಜಿಗುಪ್ಸೆ ಇತ್ತು. ಕೇವಲ ಹಣ ಗಳಿಕೆಗಾಗಿ ಹೀಗೆ ಮಾಡುತ್ತಿದ್ದ ಅವರ ಬಗೆಗೆ ಸಾರ್ವಜನಿಕರಲ್ಲೂ ಸಾಕಷ್ಟು ವಿರೋಧವಿತ್ತು.

ಈ ಪರಿಸ್ಥಿತಿಯನ್ನು ತಿಳಿದುಕೊಂಡಿದ್ದ ಲೂಯಿಪ್ಯಾಶ್ಚರ್, ಫೆರಾನ್ ತಯಾರಿಸು ತ್ತಿರುವ ವ್ಯಾಕ್ಸೀನಿನಿಂದ ಯಾವುದೇ ವ್ಯಾವಹಾರಿಕ ಪ್ರಯೋಜನವಿಲ್ಲವೆಂದು ಫ್ರೆಂಚ್ ಸರ್ಕಾರಕ್ಕೆ ವರದಿಮಾಡಿದ್ದರು. ಇಂಗ್ಲೆಂಡಿನ ಕ್ಲೈನ್ ಎಂಬ ವಿಜ್ಞಾನಿ ಅವರೊಬ್ಬ ''ಡಾನ್ ಕ್ವಿಕ್ಸೋಟ್'' ಎಂದು ಗೇಲಿ ಮಾಡಿದ್ದರು. ಜರ್ಮನಿಯ ಮಿಣಿಜೀವಿ ಶಾಸ್ತ್ರಜ್ಞರಾದ ಫೈಫರ್ ಮತ್ತು ವಾಷರ್‌ಮನ್ ಎಂಬವರು ಫೆರಾನ್‌ರ ಫಲಿತಾಂಶಗಳನ್ನು ಗಣನೆಗೆ ತೆಗೆದುಕೊಂಡು ಯಾವುದೇ ಬಗೆಯ ಕಾಲರಾ ವ್ಯಾಕ್ಸೀನುಗಳಿಂದ ಯಾವುದೇ ಪ್ರಯೋಜನವಿಲ್ಲವೆಂದು ಸಾರಾಸಗಟಾಗಿ ಅಭಿಪ್ರಾಯಪಟ್ಟರು. ಅಂದರೆ ಹಾಫ್‌ಕಿನ್ನರು ಕಾಲರಾ ವ್ಯಾಕ್ಸಿನ್ ತಯಾರಿಸುವ ಮನಸ್ಸು ಮಾಡುವಷ್ಟರಲ್ಲಿ ಸಾಂಕ್ರಾಮಿಕ ರೋಗಗಳ ವಿರುದ್ಧ ವಾಕ್ಸಿನೇಷನ್ ಉಪಯುಕ್ತವೆಂಬ ಕಲ್ಪನೆಯೇ ತಿರಸ್ಕರಿಸಲ್ಪಟ್ಟಂತಿತ್ತು!

## ಹಾಫ್‌ಕಿನ್ನರ ಪ್ರಯತ್ನ

ವಿಜ್ಞಾನ ಕ್ಷೇತ್ರದಲ್ಲಿ ಹೊಸದೊಂದು ವಾದವನ್ನು ಪ್ರಸ್ತಾಪಿಸಿ ಅದನ್ನು ಸ್ಥಿರ ಪಡಿಸುವುದು ಕಷ್ಟದ ಕೆಲಸವೇ ಸರಿ. ಅದರಲ್ಲೂ ಮೊದಲೇ ತಿರಸ್ಕರಿಸಲ್ಪಟ್ಟ ವಾದವನ್ನು ಮತ್ತೆ ಪ್ರತಿಪಾದಿಸಲು ಹೊರಡುವುದಂತೂ ಇನ್ನೂ ಕಷ್ಟಕರವಾದ ಕೆಲಸವೆನ್ನುವುದರಲ್ಲಿ ಸಂದೇಹವಿಲ್ಲ. ಮೈಲಿ ಬೇನೆ, ರೇಬೀಸ್, ಆಂಥ್ರಾಕ್ಸ್‌ಗಳಂಥ ವ್ಯಾಧಿಗಳ ವಿರುದ್ಧ ಲಸಿಕೆಗಳನ್ನು ಜೆನ್ನರ್ ಮತ್ತು ಪ್ಯಾಶ್ಚರ್ ಈ ಮೊದಲೇ ಯಶಸ್ವೀ ವ್ಯಾಕ್ಸೀನುಗಳನ್ನು ಕಂಡು ಹಿಡಿದಾಗಿತ್ತು. ಕಾಲರಾ ವಿರುದ್ಧ ಫೆರಾನ್ ಮಾಡಿದ ವಿಫಲ ಪ್ರಯತ್ನವೊಂದನ್ನು ಬಿಟ್ಟರೆ ಬೇರಾವ ಉದಾಹರಣೆಗಳೂ ಆತನಕ ಇರಲಿಲ್ಲ. ಅದರ ಬಗೆಗೆ ಪ್ರಸ್ತಾಪ ಮಾಡಿದರೆ ವೈಜ್ಞಾನಿಕ ವಲಯಗಳೇ ಅಲ್ಲದೆ ಸಾರ್ವಜನಿಕರಲ್ಲೂ ಅದರ ಸ್ಮೃತಿಯೇ ಅವರನ್ನು ರೊಚ್ಚಿಗೆಬ್ಬಿಸುವಂತಿತ್ತು. ನಿಜ, ಫೆರಾನ್‌ರ ವಿಧಾನಗಳನ್ನು ಹಾಫ್‌ಕಿನ್ ಅನುಸರಿಸುವ ಇರಾದೆ ಇಟ್ಟುಕೊಂಡಿರಲಿಲ್ಲ. ಮುಂದೆ ಅದನ್ನು ಅನುಸರಿಸಲೂ ಇಲ್ಲ. ಕುಖ್ಯಾತಿ ಪಡೆದುಕೊಂಡಿದ್ದ 1885ರ ಫೆರಾನ್‌ರ ಸ್ಪೆಯಿನ್ ಪ್ರಕರಣ ಮುಂದೆ ಹಾಫ್‌ಕಿನ್ನರ ಪ್ರಯತ್ನಕ್ಕೂ ಸಾಕಷ್ಟು ಹಾನಿಯುಂಟುಮಾಡಿತು.

ಕಾಲರಾದಂಥ ಅತಿ ತೀವ್ರ ಗತಿಯಲ್ಲಿ ಸೋಂಕನ್ನುಂಟು ಮಾಡುವ ರೋಗದ ವಿರುದ್ಧ ಯಶಸ್ವಿಯಾಗಬಹುದಂಥ ವ್ಯಾಕ್ಸೀನನ್ನು ಸಂಶೋಧಿಸುವಲ್ಲಿ ಕೆಲವು ನಿಯಮಗಳಿಗೆ ಅಂಟಿರಬೇಕಾಗುತ್ತಿತ್ತು. ಮೊದಲನೆಯದಾಗಿ ಅಂತಹ ವ್ಯಾಕ್ಸೀನನ್ನು ಸ್ವೀಕರಿಸಿದ ವ್ಯಕ್ತಿಗೆ ಅದರಿಂದ ಯಾವುದೇ ಕೆಡುಕುಂಟಾಗಬಾರದು; ಎರಡನೆಯದಾಗಿ ಅದನ್ನು ಬಳಸುವ ವಿಜ್ಞಾನಿಗೆ ವ್ಯಾಕ್ಸೀನನ್ನು ತಯಾರಿಸಲು ಬಳಸಿಕೊಳ್ಳುವ ರೋಗಾಣುವಿನ ವಿಷಮತೆಯ ಬಗೆಗೆ ಪರಿಪೂರ್ಣ ಮಾಹಿತಿ ಇರಬೇಕಾಗುತ್ತದೆ.

ಈ ತತ್ವಗಳ ಆಚರಣೆಯನ್ನು ತಮ್ಮ ಗುರಿಯಾಗಿರಿಸಿಕೊಂಡು ಡಾ||ಹಾಫ್‌ಕಿನ್ ಕಾರ್ಯಪ್ರವೃತ್ತರಾದರು. ಆ ಬಗೆಗೆ ಒಂದು ಸ್ಪಷ್ಟವಾದ ಯೋಜನೆಯನ್ನೂ ತಯಾರಿಸಿ ಕೊಂಡರು. ಅದರ ಪ್ರಕಾರ ಆರೋಗ್ಯದ ಸ್ಥಿತಿಯಲ್ಲಿರುವ ಪ್ರಯೋಗಾಲಯದ ಮೊಲ ದಂತ (Guinea Pig) ಪ್ರಾಣಿಯೊಂದು ಸಾಯುವಂತೆ ಮಾಡಲು ಕಾಲರಾ ಬ್ಯಾಸಿಲೈಗಳಿಂದ ತಯಾರಿಸಿದ ''ಜೀವಿಷ''ದ ಮೊತ್ತವನ್ನು ನಿರ್ಧರಿಸುವುದು; ಅದು ಖಚಿತವಾದ ನಂತರ ಅಂತಹ ಅತಿ ಹೆಚ್ಚು ''ವಿಷಮತೆ'' ಇರುವ ಬ್ಯಾಸಿಲೈಗಳಿಂದ ಸುರಕ್ಷಿತವೆನ್ನಬಹುದಾದ ಟಾಕ್ಸಿನ್ (ಜೀವಿಷ)ನನ್ನು ತಯಾರು ಮಾಡುವ ವಿಧಾನವನ್ನು ಕಂಡು ಹಿಡಿಯುವುದು-ಇವು ಅವರ ಯೋಜನೆಯ ಪ್ರಮುಖ ಅಂಶಗಳಾಗಿದ್ದವು.

ಜೀವಂತ ಪ್ರಾಣಿಗಳನ್ನು ಬಳಸಿಕೊಂಡು ಜರುಗಿಸುವ ಈ ತರಹೆಯ ಪ್ರಯೋಗ ಗಳ ಫಲಿತಾಂಶಗಳು ಹೊರಬರಲು ಬಹಳ ಸಮಯ ಬೇಕಾಗುತ್ತದೆಂಬುದು ಸರ್ವವೇದ್ಯ. ಅಲ್ಲದೆ ಹಿಂದೆ ಫೆರಾನ್‌ರಂಥವರ ಕಲಸು ಮೇಲೋಗರದ ಪ್ರಯೋಗಗಳು ವಿಫಲ ವಾದುದು ಅವರ ಮನಸ್ಸಿನಲ್ಲಿತ್ತು. ಅಂತಹ ನೆಪಗಳನ್ನೊಡ್ಡಿ ಕಾಲಹರಣ ಮಾಡುವುದು

ಹಾಫ್‌ಕಿನ್ನರ ಜಾಯಮಾನವಾಗಿರಲ್ಲ. ಅಲ್ಲದೆ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನ ರಷ್ಯಾದ ಯುವ ವಿಜ್ಞಾನಿಯ ಮನಸ್ಸಿನಲ್ಲಿ ಆ ಸಮಯದಲ್ಲಿ ಕಾಲಕ್ಕಾಕ ರೈಲ್ವೆ ನಿಲ್ದಾಣದಲ್ಲಿನ ಕಾಲರಾದ ಪರಿಸ್ಥಿತಿಯೊಂದೇ. ಮೇ 12 (1892)ರಂದು ಅಲ್ಲಿ ನಲವತ್ತು ಮೂರು ಕಾಲರಾ ಪೀಡಿತರನ್ನು ಸ್ಥಳೀಯ ವೈದ್ಯರು ದಾಖಲಿಸಿದ್ದರು. ಅದು ತ್ವರಿತ ಗತಿಯಲ್ಲಿ ಎಲ್ಲಾ ಕಡೆ ಹರಡುವ ಸಾಧ್ಯತೆಗಳನ್ನು ಮನಗಂಡ ಹಾಫ್‌ಕಿನ್ ಕಾಲಹರಣ ಮಾಡದೆ ಕೂಡಲೇ ಕಾರ್ಯೋನ್ಮುಖರಾದರು.

ಅವರು ನಿಯೋಜಿಸಿಕೊಂಡಂತೆ ಕಾಲರಾ ಬ್ಯಾಸಿಲೈಗಳ ವಿಷಮತೆಯನ್ನು ಹೆಚ್ಚಿಸುವ ಕಾರ್ಯವನ್ನು ಮೊದಲು ಕೈಗೊಂಡರು. ಹಾಗೆ ಮಾಡಲು ಬ್ಯಾಸಿಲೈಗಳನ್ನು 30-40 ಪ್ರಾಣಿಗಳ ಮೂಲಕ (ಒಂದಾದ ಮೇಲೊಂದರಂತೆ) ಹಾಯಿಸಬೇಕೆನ್ನುವುದು ಕಂಡು ಬಂದಿತು. ಅದರಿಂದ ಬ್ಯಾಸಿಲೈಗಳ ಮಾರಕ ಶಕ್ತಿ ಇಪ್ಪತ್ತು ಪಟ್ಟು ವೃದ್ಧಿಯಾಗುತ್ತಿತ್ತು. ಈ ಪ್ರಯೋಗಗಳ ಫಲಿತಾಂಶ ತಿಳಿಯಲು ಕನಿಷ್ಠ ಪಕ್ಷ ಒಂದು ತಿಂಗಳಾದರೂ ಬೇಕಾಗುತ್ತಿತ್ತು. ಮುಂದೆ ಅವು ಬೇಕಾದ ಸಮಯದಲ್ಲಿ ಬಳಸಿಕೊಳ್ಳಲು ಅನುಕೂಲವಾಗಲು ಅವುಗಳನ್ನು ಕೃತಕ ಆಹಾರ-ಮಾಧ್ಯಮ (culture medium) ಗಳಲ್ಲಿ ಪ್ರನಾಳಗಳಲ್ಲಿಟ್ಟು 'ಬೆಳೆಸುವ' ಏರ್ಪಾಡು ಮಾಡಿಕೊಂಡರು. ಅದರಿಂದ ತಯಾರಾದ ಕಾಲರಾ ಟಾಕ್ಸಿನ್‌ನ ಒಂದು ಸಿ.ಸಿ. (ಘನಸೆಂಟಿಮೀಟರ್) ದ್ರಾವಣವನ್ನು ಪ್ರಯೋಗಾಲಯದ ಮೊಲವೊಂದರ ಮಾಂಸ ಖಂಡಕ್ಕೆ ಚುಚ್ಚಲಾಗುತ್ತಿತ್ತು. ಹಾಫ್‌ಕಿನ್ನರ ಅಂದಾಜು ಎಷ್ಟು ಕರಾರು ವಾಗಿರುತ್ತಿತ್ತೆಂದರೆ ಆ ಮೊಲ ಎಷ್ಟು ಸಮಯದಲ್ಲಿ ಟಾಕ್ಸಿನ್‌ಗೆ ಬಲಿಯಾಗುತ್ತದೆಂಬುದನ್ನು ಮೊದಲೇ ಹೇಳಿಬಿಡುತ್ತಿದ್ದರಂತೆ! ಹಾಗೆ ತಯಾರಿಸಿ ಕಾಲರಾ ಟಾಕ್ಸಿನ್‌ನ ಮಾರಕ ಪ್ರಭಾವ ಪ್ರಾಣಾಪಹಾರಿ (lethal) ಪ್ರಮಾಣವನ್ನು ಖಚಿತಪಡಿಸಿಕೊಂಡು, ಮುಂದೆ ಅದನ್ನು ಮಾನವ ಚಿಕಿತ್ಸೆಗೆ ಬಳಸುವ ಪ್ರಯೋಗಗಳನ್ನು ಜರುಗಿಸುತ್ತಿದ್ದರು.

ಈ ವಿಧಾನಗಳನ್ನು ಪ್ರಯೋಗಾಲಯದ ಮೊಲ ಮತ್ತು ಪಾರಿವಾಳಗಳ ಮೇಲೆ ಮುಂದುವರಿಸಿದರು. ಅದರಿಂದ ಪ್ರೊ:ರೂ ಅವರ ಪ್ರಯೋಗಾಲಯದಲ್ಲಿ ಎಷ್ಟೋ ಕಾಲದಿಂದ ಸಾಕುತ್ತಿದ್ದ ಮೊಲ ಮತ್ತು ಪಾರಿವಾಳಗಳ ಮಾರಣ ಹೋಮವೇ ಆಯಿತೆನ್ನಲಾಗಿದೆ. ಹಾಗೆ ದೊರೆಯುತ್ತಿದ್ದ ಟಾಕ್ಸಿನ್‌ನನ್ನು ಹಿಂದೆ ಮಾಂಸಖಂಡಗಳಿಗೆ ಚುಚ್ಚುತ್ತಿದ್ದುದರ ಬದಲು ಅದು ಕೇವಲ ಚರ್ಮದ ಅಡಿಭಾಗದಲ್ಲಿ (subcutaneously) ಚುಚ್ಚುವ ಹೊಸ ವಿಧಾನವೊಂದನ್ನು ಆರಂಭಿಸಿದರು. ಹಾಗೆ ವಾಕ್ಸಿನೇಷನ್ ಮಾಡಿದ ಚರ್ಮದ ವಲಯ ಸ್ವಲ್ಪ ದಿನದಲ್ಲೇ ಕೊಳತಂತಾಗಿ ಮುಂದೆ ಅಲ್ಲಿ ಕಲೆಯಾಗುತ್ತಿತ್ತು. ಆದರೆ ಹಿಂದಿನಂತೆ ಟಾಕ್ಸಿನ್ ಮಾರಕವಾಗಿ ಪ್ರಾಣಿಗಳೆಲ್ಲಾ ಸಾಯುತ್ತಿರಲ್ಲ. ಅಂದರೆ ಆ ರೀತಿಯಲ್ಲಿ ತಯಾರು ಮಾಡಿದ ರೋಗಾಣುಗಳು ಪ್ರಾಣಿಗಳಿಗೆ ಮಾರಕವಾಗಲಾರವೆಂದು ಅರ್ಥೈಸಬಹುದಾಗಿತ್ತು. ಆದರೂ ಚರ್ಮದಡಿಯಲ್ಲಿ ಸೇರಿಸಿದ ಆ ರೋಗಾಣುಗಳಲ್ಲಿ ಇನ್ನೂ ಹೆಚ್ಚಿನ ವಿಷಮತೆ ಉಳಿದುಕೊಂಡಿರಬಹುದೆಂಬ ಅನುಮಾನ ಉಳಿದುಕೊಳ್ಳುತ್ತಿತ್ತು.

ಅವುಗಳ ವಿಷಮತೆಯನ್ನು ಇನ್ನಷ್ಟು ಕುಂಠಿತಗೊಳಿಸುವುದರಿಂದ ಮನುಷ್ಯರಿಗೆ ಉಪಯೋಗಿಸಿದಾಗ ನಿರೀಕ್ಷಿತ ಫಲಿತಾಂಶಗಳು ಯಾವುದೇ ಅಪಾಯಕ್ಕೆಡೆಯಿಲ್ಲದೆ ದೊರೆಯಬಹುದೆಂಬುದು ಮುಂದಿನ ಅನಿಸಿಕೆಯಾಯಿತು. ಆ ಸಲುವಾಗಿ ಬ್ಯಾಸಿಲೈಗಳು ಸಹಿಸಿಕೊಳ್ಳಬಹುದಾದ ವಾತಾವರಣದ ಮಟ್ಟವನ್ನು ಏರ್ಪಡಿಸುವ ವ್ಯವಸ್ಥೆಗಳಾದವು.

ಮುಂದಿನ ಹಂತದಲ್ಲಿ ಹಾಫ್‌ಕಿನ್ ಶಾಖದ ಮಟ್ಟವು ಸದಾ 39 $^{0}$c ನಲ್ಲಿರಬಹುದಾದ ತಾಪನಿಯಂತ್ರಣ (thermostat) ಯಂತ್ರದಲ್ಲಿ ಬ್ಯಾಸಿಲೈಗಳಿರುವಂತೆ ಏರ್ಪಾಡು ಮಾಡಿದರು; ಹಾಗು ಅಲ್ಲಿಯ ವಾತಾವರಣದಲ್ಲಿ ಯಥೇಚ್ಛವಾಗಿ ಶುದ್ಧ ಗಾಳಿಯೂ ಇರುವಂತೆ ನೋಡಿಕೊಂಡರು. ಈ ಏರ್ಪಾಡಿನಿಂದ ಕಾಲರಾ ಬ್ಯಾಸಿಲೈಗಳು ಒಣಗಿದಂತಾಗಿ, ಅವುಗಳ ವಿಷಮತೆಯೂ ಬಹಳಷ್ಟು ಕುಂಠಿತವಾಗಿರುವುದು ಕಂಡುಬಂದಿತು. ಈ ರೀತಿ ಕುಂಠಿತ ವಿಷಯಮತೆಯ ರೋಗಾಣುಗಳನ್ನು ಮತ್ತೆ ಮೊಲಗಳ ಚರ್ಮದಡಿಯಲ್ಲಿ ಇಂಜಕ್ಷನ್ ಮೂಲಕ ಚುಚ್ಚಲಾಯಿತು; ಹಾಗೆ ಇಂಜಕ್ಷನ್ ಕೊಟ್ಟ ಜಾಗದಲ್ಲಿ ಈ ಸಾರಿ ಊರಿಯೂತ ಕಾಣಿಸಿಕೊಳ್ಳಲಿಲ್ಲ; ಚರ್ಮ ಕೊಳೆತು ಹೋಗಲೂ ಇಲ್ಲ! ಮೊದಲೇ ನಿರೀಕ್ಷಿಸಿದಂತೆ ಮುಂದೆ ಅವುಗಳಿಗೆ ಕಾಲರಾ ರೋಗಾಣುಗಳ ಸೋಂಕನ್ನು ದಾಟಿಸಿದಾಗ ಕಾಲರಾ ರೋಗ ವ್ಯಕ್ತಪಡಲಿಲ್ಲ; ಅಂದರೆ ಕಾಲರಾವನ್ನು ಪ್ರತಿಬಂಧಿಸುವ ಸಾಮರ್ಥ್ಯವನ್ನು ಅವು ಗಳಿಸಿಕೊಂಡಿದ್ದವು!

ಈ ರೀತಿಯಲ್ಲಿ ವಿಷಮತೆಯನ್ನು ಕುಂಠಿತಗೊಳಿಸಿ ತಯಾರಿಸಿದ ಲಸಿಕೆ (ವ್ಯಾಕ್ಸೀನ್) ಮನುಷ್ಯರಿಗೆ ಅಪಾಯ ಉಂಟು ಮಾಡಲಾರವೆಂಬುದನ್ನು ಖಚಿತಪಡಿಸಲು ಇನ್ನೂ ಕೆಲವು ಪ್ರಯೋಗಗಳನ್ನು ಜರುಗಿಸಿದರು. ಆ ದಿಸೆಯಲ್ಲಿ ಮೊದಲನೆಯ ಹೆಜ್ಜೆಯಾಗಿ ವಿಷಮತೆಯನ್ನು ಕುಂಠಿತಗೊಳಿಸಿದ ವ್ಯಾಕ್ಸೀನಿನ ಪ್ರಯೋಗವಾದ ಮೊಲಗಳ ಆಹಾರದ ಜೊತೆ ಅತಿ ಹೆಚ್ಚು ಮಾರಕ ಲಕ್ಷಣವಿರುವ ಬ್ಯಾಸಿಲೈಗಳನ್ನು ನೀಡಿದರು; ಅವು ಸಾಮಾನ್ಯವಾಗಿ ಒಂದು ಆನೆಯನ್ನೇ ಸಾಯಿಸುವ ಸಾಮರ್ಥ್ಯವುಳ್ಳವಾಗಿದ್ದರೂ, ಆ ಮೊಲಗಳಲ್ಲಿ ಕಾಲರಾ ಪ್ರಕಟವಾಗಲೇ ಇಲ್ಲ; ಅಂತಹದೇ ಪ್ರಯೋಗಗಳನ್ನು ಗಿನಿಇಲಿ ಮತ್ತು ಪಾರಿವಾಳ ಮೇಲೂ ಜರುಗಿಸಿದರು. ಅವುಗಳಿಗೂ ಸಹಾ ಮೊದಲು ಅವರಲ್ಲಿ ತಯಾರಾದ ರೋಗ ನಿರೋಧಕ ಲಸಿಕೆಯನ್ನು ನೀಡಿದ್ದದಾದ್ದರಿಂದ ಕಾಲರಾ ವಿರುದ್ಧ, ನಿರೋಧಕ ಶಕ್ತಿ ವೃದ್ಧಿಯಾಗಿತ್ತು; ಆದರಿಂದ ಅವುಗಳಲ್ಲೂ ಯಾವುದೇ ದುಷ್ಪರಿಣಾಮಗಳು ಕಾಣಿಸಿಕೊಳ್ಳಲಿಲ್ಲವೆಂಬುದರಲ್ಲಿ ಸಂದೇಹವಿರಲಿಲ್ಲ.

ಡಾ॥ ಹಾಫ್‌ಕಿನ್ ತಮಗೆ ದೊರೆತ ಉತ್ತೇಜನಕಾರಿ ಪರಿಣಾಮಗಳನ್ನು ಜುಲೈ 9ರಂದು ಪ್ಯಾರಿಸ್ ಬಯೋಲಾಜಿಕಲ್ ಸೊಸೈಟಿ ಅಧಿವೇಶನದಲ್ಲಿ ಬಹಿರಂಗಪಡಿಸಿದರು. ''ಗಿನಿ ಇಲಿಗಳಲ್ಲಿ ಏಷ್ಯನ್ ಕಾಲರಾ'' ಎಂಬ ಆ ಪ್ರಬಂಧ ತುಂಬಾ ಗಂಭೀರವಾದ ವಿಷಯಗಳನ್ನೊಳಗೊಂಡಿತ್ತು. ಮತ್ತೊಂದು ವಾರದಲ್ಲೇ ಇತರ ಕೆಲವು ಪ್ರಾಣಿಗಳ ಮೇಲೆ ಜರುಗಿಸಿದ ಪ್ರಯೋಗಗಳ ವರದಿಯನ್ನು ಅದೇ ಸೊಸೈಟಿಯ ಸಭೆಯಲ್ಲಿ ಮಂಡಿಸಿದರು.

ಈ ಎಲ್ಲಾ ವರದಿಗಳಿಂದ ತಮ್ಮ ನಗರದಲ್ಲೇ ಇರುವ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲೇ ಭಾರತದ ಅಸ್ಸಾಂ ಪ್ರಾಂತ್ಯ, ಇಂಡೋ-ಚೀನಾ, ಸಿಲೋನ್(ಶ್ರೀಲಂಕಾ)ಗಳಂಥ ಏಷ್ಯಾಪ್ರದೇಶಗಳಲ್ಲಿ ಅತ್ಯುಗ್ರ ರೀತಿಯಲ್ಲಿ ಧಾಳಿ ಮಾಡುತ್ತಿರುವ ಕಾಲರಾದ ವಿಷಮ ರೀತಿ ಬ್ಯಾಸಿಲೈಗಳಿಂದ ಬೆಳೆಸಿದ ರೋಗಾಣು ಇರಬಹುದೆಂಬುದು ಅದೇ ಮೊದಲ ಸಾರಿಗೆ ಪ್ಯಾರಿಸ್ಸಿನ ಜೀವಶಾಸ್ತ್ರಜ್ಞರ ಗಮನಕ್ಕೆ ಬಂದಿರಬೇಕು.

ಹಾಫ್‌ಕಿನ್ ತಮ್ಮ ವರದಿಯಲ್ಲಿ ಕಾಲರಾವಿರುದ್ಧ ಲಸಿಕೆಯನ್ನು ತಯಾರಿಸುವಲ್ಲಿ ಅನುಸರಿಸಿದ ರೀತಿನೀತಿಗಳನ್ನು ಸ್ಥೂಲವಾಗಿ ಪ್ರಸ್ತಾಪಿಸಿದ್ದರು. ಕಾಲರಾ ವಿರುದ್ಧದ ಲಸಿಕೆಯನ್ನು ಅತಿ ಹೆಚ್ಚಿನ ಡೋಸಿನಲ್ಲಿ ಮೊದಲೇ ಮೊಲಗಳಿಗೆ ನೀಡಿದ್ದು, ಮತ್ತೆ ಕೆಲವೇ ದಿನಗಳಲ್ಲಿ ಅವುಗಳಿಗೆ ರೋಗಕಾರಕ ಕಾಲರಾ ರೋಗಾಣುಗಳನ್ನು ಅತಿ ಹೆಚ್ಚು ಪ್ರಮಾಣದಲ್ಲಿ ನೀಡಿದರೂ ಅವುಗಳಲ್ಲಿ ಹೇಗೆ ಕಾಲರಾ ಪ್ರಕಟವಾಗಲಿಲ್ಲ; ಹಾಗೂ ಮತ್ತಾವ ದುಷ್ಪರಿಣಾಮಗಳೂ ಉಂಟಾಗಲಿಲ್ಲವೆಂಬುದನ್ನು ವಿವರಿಸಿದ್ದರು. ಅದರಿಂದ ಈಗ ತಯಾರಾದ ವ್ಯಾಕ್ಸೀನು ತುಂಬಾ ಪರಿಣಾಮಕಾರಿಯಾಗಬಹುದೆಂದು ಹೇಳಿದಾಗ ಸಭೆಯಲ್ಲಿ ನೆರೆದಿದ್ದ ಯುವ ವಿಜ್ಞಾನಿಗಳ ತಂಡ ಹರ್ಷೋದ್ಗಾರ ಮಾಡಿ, ಕರತಾಡತನ ಮಾಡಿದರು. ಅವರಂತೆಯೇ ಯುವವಿಜ್ಞಾನಿಯೊಬ್ಬ ಮಾಡಿದ್ದ ಸಾಧನೆ ಅವರೆಲ್ಲರಿಗೆ ಉತ್ತೇಜನಕಾರಿಯಾಗಿತ್ತು.

ವಿಜ್ಞಾನಿಗಳ ಸಭೆಗಳಲ್ಲಿ ಸಾಮಾನ್ಯವಾಗಿ ಕರತಾಡನ ಮಾಡಿ ಬಹಿರಂಗವಾಗಿ ಪ್ರೋತ್ಸಾಹ ನೀಡುವ ಪದ್ಧತಿ ಇರುವುದಿಲ್ಲ. ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ ಹೆಸರಾಂತ ಸಾಂಕ್ರಾಮಿಕ ರೋಗ ಶಾಸ್ತ್ರಜ್ಞ ಡಾ॥ ಲಾವೆರಾನ್‌ರಿಗೆ ಸಭಿಕರ ಅಂತಹ ವರ್ತನೆ ಸರಿ ಬರಲಿಲ್ಲ. ಬಯೋಲಾಜಿಕಲ್ ಸೊಸೈಟಿಯಂಥ ಗಂಭೀರ ಸಭೆಯಲ್ಲಿ ಹಿಂದಿನಿಂದ ರೂಢಿಸಿಕೊಂಡು ಬಂದಿದ್ದ ಸಂಪ್ರದಾಯಗಳನ್ನು ಮುರಿಯುವ ಔಚಿತ್ಯ ಅವರಿಗೆ ಕಂಡುಬರಲಿಲ್ಲ. ''ವಿಜ್ಞಾನಿಗಳ ಸಭೆಯಲ್ಲಿ ಅಂತಹ ಭಾವೋದ್ರೇಕಿತ ನಡವಳಿಕೆಗಳು ತರವಲ್ಲ; ಅವು ನಮಗೆ ಪರಕೀಯ; ಕೇವಲ ವಾಸ್ತವಾಂಶಗಳು ಮತ್ತು ಪರಸ್ಪರ ಗೌರವಭಾವನೆಗಳು ಮಾತ್ರ ನಮ್ಮ ಈ ನಾಲ್ಕು ಗೋಡೆಗಳ ನಡುವಿನ ವ್ಯವಹಾರ ಗಳಲ್ಲಿರತಕ್ಕದ್ದು.'' ಎಂದು ಸಭಿಕರನ್ನು ಛೇಡಿಸಿದರು. ಅಂದಿನ ಬೆಳಗಿನ ಪತ್ರಿಕೆಗಳಲ್ಲಿ ಕಾಲರಾರೋಗ ನಾಗಾಲೋಟದಿಂದ ಹರಡುತ್ತಿದ್ದುದನ್ನು ಓದಿದ ಹಲವರು ಕಿನ್ನ ಮನಸ್ಕರಾಗಿದ್ದರು; ಅಂತಹಶ ಸಂದರ್ಭದಲ್ಲಿ ಯುವ ವಿಜ್ಞಾನಿಯೊಬ್ಬ ಅದನ್ನು ನಿಯಂತ್ರಿಸಬಹುದಾದ ವಿಧಾನವೊಂದರ ಮಂಡನೆಗೆ ಪ್ರೋತ್ಸಾಹ ನೀಡುವುದರಲ್ಲಿ ತಪ್ಪಿಲ್ಲವೆಂಬ ಅಭಿಪ್ರಾಯವಿದ್ದವರು ಅಲ್ಲಿದ್ದರು. ಅಂದು ಶನಿವಾರವಾಗಿದ್ದರಿಂದ ಹೆಚ್ಚಿನ ಸಂಖ್ಯೆಯ ವಿಜ್ಞಾನಿಗಳು ಸೇರಿದ್ದು ಸಭೆಗೆ ಮೆರಗು ಕೊಟ್ಟಿತ್ತು.

**ಲಾ ಇಲ್ಲುಸ್ಟ್ರೇಷನ್** ಎಂಬ ನಿಯತ ಕಾಲಿಕ ಪತ್ರಿಕೆ ತನ್ನ 23ರ (1892) ಸಂಚಿಕೆಯಲ್ಲಿ ಇತ್ತೀಚೆಗೆ ಕಾಲರಾದಿಂದ ಸಾವಿಗೀಡಾದರ ಉದ್ದನೆಯ ಪಟ್ಟಿಯನ್ನು

ಪ್ರಕಟಿಸಿತ್ತು. ಪಟ್ಟಿಯ ಕೆಳಭಾಗದಲ್ಲಿ 'ಕಾಲರಾ ನಿರೋಧಕ ವ್ಯಾಕ್ಸೀನ್'' ಎಂಬ ಶೀರ್ಷಿಕೆಯಡಿಯಲ್ಲಿ ಹಾಫ್‌ಕಿನ್‌ರ ಇತ್ತೀಚಿನ ಪ್ರಯೋಗಗಳ ಬಗೆಗೆ ಪ್ರಸ್ತಾಪ ಮಾಡಿತ್ತು. ಪ್ರಸ್ತುತ ಮೊಲ ಮತ್ತು ಗಿನಿ ಇಲಿಗಳಲ್ಲಿ ಆ ವ್ಯಾಕ್ಸಿನ್ ಪ್ರಯೋಗಿಸಲ್ಪಟ್ಟಿದ್ದು. ಅದು ಒಳ್ಳೆಯ ಫಲಿತಾಂಶ ದೊರಕಿಸಿದೆ; ಮನುಷ್ಯರ ಮೇಲೂ ಅದು ಜರುಗಿ ಯಶಸ್ಸು ಕಂಡು ಬಂದರೆ ಇಡೀ ಮನುಕುಲಕ್ಕೆ ಅದರಿಂದ ಉಪಕಾರವಾದೀತು; ಅಂತಹ ಪ್ರಯೋಗಗಳನ್ನು ಆದಷ್ಟು ಬೇಗ ಜರುಗಿಸಬೇಕೆಂದು ಪತ್ರಿಕೆ ಆಗ್ರಹ ಪಡಿಸಿತ್ತು.

ಪ್ಯಾಶ್ಚರ್ ಇನ್ಸಿಟಿಟೂಟ್‌ನ ಪ್ರೊ: ರೂ ಅವರ ಪ್ರಯಯೊಗಾಲಯದಲ್ಲಿಯೇ ಹಾಫ್‌ಕಿನ್ನರ ಎಲ್ಲಾ ಪ್ರಯೋಗಗಳು ಜರುಗುತ್ತಿದ್ದು ಅದರ ಆಗು ಹೋಗುಗಳು ರೂ ಅವರ ಗಮನವನ್ನೇನೊ ಸೆಳೆದಿದ್ದವು. ಮಾನವರ ಮೇಲೆ ಯಾವುದೇ ವ್ಯಾಕೀನಿನಂಥ ಪ್ರಯೋಗ ನಡೆಯುವ ವಿಷಯದಲ್ಲಿ ತುಂಬಾ ಎಚ್ಚರಿಕೆ ವಹಿಸುವುದು ಅವರ ಸ್ವಭಾವ. ಅವರೆಂದೂ ಶುಷ್ಕಪಾಂಡಿತ್ಯ ಪೂರ್ವ ವಾದಗಳಿಗೆ ಮಣಿಯುವವರಲ್ಲ. ಈ ಸಂದರ್ಭದಲ್ಲೂ ಕಾಲರಾ ವ್ಯಾಕ್ಸೀನನ್ನು ಮಾನವರ ಮೇಲೆ ಪ್ರಯೋಗಿಸುವುದಕ್ಕೆ ಸಮ್ಮತಿಸುವಂತಿರಲಿಲ್ಲ; ಹಿಂದೆಯೂ ಕೆಲವು ಸಾರಿ ಅವರ ವರ್ತನೆ ಇಂತಹದ್ದೇ ಆಗಿತ್ತು.

ಪ್ರೊ: ರೂ ಬಹಳ ಹಿಂದಿನಿಂದಲೂ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಮಹಾವಿಜ್ಞಾನಿ ಲೂಯಿಪ್ಯಾಶ್ಚರ್‌ರ ಪ್ರಮುಖ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದವರು. ಹಾಗೆ ನೋಡಿದರೆ ಪ್ಯಾಶ್ಚರ್ ಇನ್ಸ್ಟಿಟೂಟ್‌ನಲ್ಲಿ ಅವರೊಬ್ಬರೇ ಮೆಡಿಕಲ್ ಡಾಕ್ಟರ್ ಆಗಿದ್ದವರು. ಬಹಳ ಹಿಂದೆ ಪ್ಯಾಶ್ಚರ್ ರೇಬಿಸ್ ರೋಗದ ವಿರುದ್ಧ ನಿರೋಧಕ ವ್ಯಾಕ್ಸೀನು ಕಂಡು ಹಿಡಿದಿದ್ದು, ಪ್ರಾಣಿಗಳ ಮೇಲೆ ಅದರ ಸುರಕ್ಷತೆಯನ್ನು ಸಾಬೀತು ಪಡಿಸಿದ್ದರು. ಅದರ ಮಾನವ ಪ್ರೊಯೋಗಕ್ಕಾಗಿ ಕೆಲವು ನಾಯಿ ಕಡಿದ ಮಕ್ಕಳಿಗೆ ನೀಡುವುದಕ್ಕೆ ಪ್ಯಾಶ್ಚರ್ ತಯಾರಿದ್ದಂತಿದ್ದರು. ಅವಸರದಲ್ಲಿ ಅಂತಹ ಪ್ರಯೋಗವನ್ನು ಮನುಷ್ಯರ ಮೇಲೆ ಜರುಗಿಸಲು ಪ್ರೊ: ರೂ ಸಮ್ಮತಿಸಲಿರಲಿಲ್ಲವಂತೆ. ಈ ಸಾರಿ ಕಾಲರಾ ವ್ಯಾಕ್ಸೀನಿನ ಬಗೆಗೂ ಅವರ ನಿಲುವು ಅಂತಹದ್ದೇ ಆಗಿತ್ತು.

ಇದಕ್ಕೆಲ್ಲಾ ಕಾರಣಗಳಿರದಿರಲಿಲ್ಲ. ಹತ್ತೊಂಭತ್ತನೇ ಶತಮಾನದಲ್ಲಿ ವ್ಯವಸ್ಥಿತ ರೀತಿಯಲ್ಲಿ ವೈದ್ಯಕೀಯ ತರಬೇತಿ ಪಡೆಯದೆ, ಮತ್ತು ಹಿಪ್ಪೋಕ್ರಿಟ್ಸ್ ಶಪಥಕ್ಕೆ ಬದ್ಧರಾಗಿರದಿದ್ದವರು ವೈದ್ಯ ವೃತ್ತಿಯಲ್ಲಿ ತೊಡಗಿಸಿಕೊಳ್ಳುವಂತಿರಲಿಲ್ಲ. ಆ ಸಮಯದಲ್ಲಿ ಸರ್ಜಿಕಲ್ (ಶಸ್ತ್ರಚಿಕಿತ್ಸೆ) ತರಬೇತಿ ಪಡೆಯದಿದ್ದವರು ಮೆಡಿಕಲ್ ಡಾಕ್ಟರುಗಳ ಸಮೂಹಕ್ಕೆ ಸೇರಿಕೊಳ್ಳಲು ತೀವ್ರ ಆಕ್ಷೇಪ ಎತ್ತುವವರೂ ಇರುತ್ತಿದ್ದರು; ಬಹಳ ಕಾಲ ವಾದ-ವಿವಾದಗಳು ಜರುಗಿದ ನಂತರವೇ ಸರ್ಜನ್ ವೃತ್ತಿಯವರನ್ನು ಮೆಡಿಕಲ್ ಡಾಕ್ಟರುಗಳೆಂದು ಪರಿಗಣಿಸುವಂತಾದುದು. ಈ ಕಾರಣದಿಂದಲೇ ವೈದ್ಯ ಸಮೂಹದವರು ವಿಜ್ಞಾನಿಯಾದ ಲೂಯಿ ಪ್ಯಾಶ್ಚರ್ ಮತ್ತು ಅವರ ವ್ಯಾಕ್ಸೀನೇಷನ್ ಪದ್ಧತಿಯನ್ನು ವಿರೋಧಿಸುತ್ತಿದ್ದರು. ಮೆಡಿಕಲ್ ಕಾಲೇಜೊಂದರಲ್ಲಿ ವೈದ್ಯಕೀಯ ವಿಷಯಗಳನ್ನು ಕ್ರಮವರಿತು ಅಭ್ಯಾಸ

ಮಾಡದ ರಾಸಾಯನ ಶಾಸ್ತ್ರಜ್ಞರಾದ ಪ್ಯಾಶ್ಚರ್ ವೈದ್ಯಕೀಯ ಕ್ಷೇತ್ರದಲ್ಲಿ ಕೈಯಾಡಿಸುವುದನ್ನು ವಿರೋಧಿಸುತ್ತಿದ್ದರು. ಅಂತಹ ಮಹಾ ವಿಜ್ಞಾನಿಯ ಮೇಲೆ ಆಗಾಗ್ಗೆ ಅಪವಾದಗಳನ್ನು ಹೊರಿಸಿ ನಿಂದನೆಗೊಳಪಡಿಸುತ್ತಿದ್ದರು.

''ರಾಸಾಯನ ಶಾಸ್ತ್ರಜ್ಞನೊಬ್ಬ ವೈದ್ಯಕೀಯ ಕ್ಷೇತ್ರದ ಬೆಳವಣಿಗೆಗೆ ಕಾರಣನಾಗುತ್ತಾನೆಂಬುದನ್ನು ನಾನೆಂದೂ ನಂಬುವುದಿಲ್ಲ; ಸತ್ತ ಮೇಲೆ ನನ್ನ ಗೋರಿಯ ಮೇಲೆ 'ರಾಸಾಯನ ಶಾಸ್ತ್ರಜ್ಞರ ವಿರುದ್ಧ ಉಗ್ರವಾಗಿ ಹೋರಾಡಿದವರಿವರು' ಎಂದು ಬರೆಯಬೇಕು ಎಂಬ ಆಶಯವನ್ನು ಚಾರ್ಲ್ಸ್ ಪೀಟರ್ ಎಂಬ ಪ್ಯಾರಿಸ್ಸಿ ಖ್ಯಾತ ವೈದ್ಯರೊಬ್ಬರು ತಮ್ಮ ಭಾಷಣವೊಂದರಲ್ಲಿ ಹೇಳಿದ್ದರಂತೆ. ವೈದ್ಯಕೀಯ ಕ್ಷೇತ್ರದಲ್ಲಿ ವೈದ್ಯರಲ್ಲದವರ ಪ್ರವೇಶಕ್ಕೆ ಅದೆಷ್ಟು ವಿರೋಧವಿತ್ತೆನ್ನುವುದರನ್ನು ಈ ಪ್ರಸಂಗ ತೋರಿಸುತ್ತದೆ.

ಅದೇನೇ ಇದ್ದರೂ ಹತ್ತಂಭೊತ್ತನೆ ಶತಮಾನದ ಉತ್ತರಾರ್ಧ ಹಾಗೂ ಇಪ್ಪತ್ತನೇ ಶತಮಾನದ ಮೊದಲ ದಶಕಗಳಲ್ಲಿ ವೈದ್ಯಕೀಯ ಕ್ಷೇತ್ರದ ಪ್ರಮುಖ ಸಾಧನೆಗಳೆಲ್ಲಾ ವೈದ್ಯಕೀಯ ಪದವಿಗಳಿಸದ ಇತರ ಮಹನೀಯರಿಂದಲೇ ಆದವೆಂಬುದನ್ನು ಮರೆಯುವಂತಿಲ್ಲ. ಜೀವ ಶಾಸ್ತ್ರಜ್ಞರು, ರಾಸಾಯನ ಶಾಸ್ತ್ರಜ್ಞರು ಮತ್ತು ಭೌತಶಾಸ್ತ್ರಜ್ಞರು, ಅಕ್ಷರಶಃ ವೃತ್ತಿನಿರತ ವೈದ್ಯರ ''ತಲೆಯ ಮೇಲೆಯೆ'' ಎಂಬಂತೆ ಅನಾದಿಯಿಂದಲೂ ಮಾರಕವಾದ ಹಲವು ರೋಗರುಜಿನಗಳಿಂದ ನರಳುತ್ತಿದ್ದವರಿಗೆ ಸಹಾಯ ಹಸ್ತ ನೀಡಿದ್ದರು. ವೃತ್ತಿಯಲ್ಲಿ ರಾಸಾಯನ ಶಾಸ್ತ್ರಜ್ಞನಾದ ಲೂಯಿ ಫ್ಯಾಶ್ಚರ್ ವೈದ್ಯಕೀಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅದ್ವಿತೀಯವಾದುದು; ಉರಿಯೂತ, ಹಾಗೂ ರೋಗ ನಿರೋಧಕ ವ್ಯವಸ್ಥೆಗಳ ಮೇಲೆ ಬೆಳಕು ಚೆಲ್ಲಿದ ಇಲ್ಯಾ ಮೆಕ್ನಿಕೋವ್ ಪ್ರಾಣಿ ಶಾಸ್ತ್ರಜ್ಞರಾಗಿದ್ದರು; ರೋಗಾಣುಗಳನ್ನು ಗುರಿಯಿಟ್ಟು ಕೊಲ್ಲುವ ಮ್ಯಾಜಿಕ್ ಬುಲೆಟ್‌ಗಳಂಥ ಮದ್ದುಗಳನ್ನು ಒದಗಿಸಿದ ಪಾಲ್ ಎರ್ಲಿಚ್ ಒಬ್ಬ ಜೀವ-ರಾಸಾಯನ ಶಾಸ್ತ್ರಜ್ಞರಾಗಿದ್ದರು, ಸಲ್ಫೋನಾ ಮೈಡ್ ಗುಂಪಿನ ಮದ್ದುಗಳನ್ನು ಕಂಡು ಹಿಡಿದಿದ್ದ ಗೆರ್ ಹಾರ್ಡ್‌ಡಾಮ್‌ಗ್ಕ ಜರ್ಮನಿಯ ರೋಗಾಣು ಶಾಸ್ತ್ರಜ್ಞರಾಗಿದ್ದರು; ಎಕ್ಸರೇ ಸಾಧನವನ್ನು ಆವಿಷ್ಕರಿಸಿದ ಪ್ರೊ: ರಾಂಜೆನ್ ಒಬ್ಬ ಭೌತಶಾಸ್ತ್ರಜ್ಞರಾಗಿದ್ದರು; ಅದೇ ರೀತಿಯಲ್ಲಿ ಪೆನಿಸಿಲಿನ್ ಕಂಡು ಹಿಡಿದ ಲಂಡನ್ನಿನ ಅಲೆಗ್ಸಾಂಡರ್ ಪ್ಲೆಮಿಂಗ್, ಸ್ಟ್ರೆಪ್ಟೋಮೈಸಿನ್ ಶೋಧಿಸಿದ ಒಡೆಸ್ಸಾದ ಜಾಲ್‌ಮನ್ ವಾಕ್ಸ್‌ಮನ್ ವಾಸ್ತವವಾಗಿ ವೈದ್ಯರೇ ಆಗಿದ್ದರೂ ಅವರೆಂದೂ ರೋಗಿಗಳ ಚಿಕಿತ್ಸೆಯಲ್ಲಿ ತೊಡಗಿಕೊಂಡವರಲ್ಲ. ಅವರೆಲ್ಲರೂ ಮನುಕುಲದ ಉದ್ಧಾರಕರೇ ಆಗಿರಲಿಲ್ಲವೇ?

## ಸ್ವಯಂ ಪ್ರಯೋಗ !

ನಾವೀಗ ಪ್ರೊ: ರೂ ಮತ್ತು ನಾಲ್ಕು ಜನ ರಷ್ಯನ್ನರ (ಹಾಫ್‌ಕಿನ್ನರೂ ಸೇರಿದಂತೆ) ಕಥೆಯತ್ತ ಗಮನ ಹರಿಸೋಣ. ಆ ಸಂಭಾಷಣೆಗಳಲ್ಲಿ ಏನು ನಡೆಯುತ್ತೆಂಬುದರ ಪೂರ್ಣ ವಿವರಗಳು ಲಭ್ಯವಿಲ್ಲ. ಆದರೆ ಪ್ರೊ: ರೂ ಎಂದಿನಂತೆ ತಮ್ಮ ಎಚ್ಚರದ ಸ್ಥಿತಿಯಲ್ಲೇ

ಇದ್ದರೆನಿಸುತ್ತದೆ. ಕಾಲರಾ ವ್ಯಾಕ್ಸೀನನ್ನು ಮಾನವರ ಮೇಲೆ ಪ್ರಯೋಗ ನಡೆಸದಿರಲು ಅವರಿಗೆ ಅದಾವ ಕಾರಣಗಳಿದ್ದವೆಂಬುದನ್ನು ಊಹಿಸುವುದು ಕಷ್ಟವೆ. ಮಹಾನ್ ವಿಜ್ಞಾನಿ ಲೂಯಿ ಪ್ಯಾಶ್ಚರ್‌ರ ನೆಚ್ಚಿನ ಸಹೋದ್ಯೋಗಿ ಹಾಗೂ ಸ್ನೇಹಿತರೂ ಆಗಿದ್ದ ಅವರಿಗೆ ಆ ರೀತಿಯ ಕಟ್ಟೆಚ್ಚರ ವಹಿಸಲು ಸಾಕಷ್ಟು ಕಾರಣಗಳಿದ್ದಿರಬೇಕೆಂಬ ವಿಷಯ ಪ್ಯಾರಿಸ್ಸಿನ ಪತ್ರಿಕಾವಲಯದವರಿಗೂ ತಿಳಿದೇ ಇತ್ತೆನಿಸುತ್ತದೆ. ನಿಜ, 1892ರಲ್ಲಿ ಪ್ಯಾರಿಸ್ಸಿನಲ್ಲಿ ಪ್ಯಾಶ್ಚರ್ ಇನ್ಸ್ಟಿಟ್ಯೂಟ್ ಆರಂಭವಾದಗಲೂ ವೈದ್ಯ ಸಮುದಾಯದ ಮುಖವಾಣಿಯಾಗಿದ್ದ **ಪ್ಯಾರಿಸ್ ಮೆಡಿಕಲ್ ಜರ್ನಲ್**, ಪ್ಯಾಶ್ಚರ್‌ರ ಇನ್ಯಾಕುಲೇಷನ್ (ವ್ಯಾಕ್ಸೀನೇಷನ್) ಪದ್ಧತಿಯನ್ನು ಫೆರಾನರ ಇನಾಕ್ಯುಲೇಷನ್ ಪದ್ಧತಿಯಂತೆಯೆ ''ಮೋಸಗಾರಿಕೆಯ ವೈದ್ಯವಿಧಾನ''ವೆಂದು ಅನುಮಾನದಿಂದಲೇ ನೋಡುತ್ತಿತ್ತು; ಪ್ರಪಂಚದ ಇತರ ಕಡೆಗಳಲ್ಲಿದ್ದ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ಗಳ ಮೇಲೂ ಅಂತಹ ದೂಷಣೆಗಳಿರುತ್ತಿದ್ದವು. ಆದುದರಿಂದ ಆಗಲೇ ಪ್ಯಾಶ್ಚರ್ ಇನ್ಸ್ಟಿಟ್ಯೂಟ್ ಮತ್ತು ಇನಾಕ್ಯುಲೇಷನ್ ಮೇಲೆ ಇವೆಯೆನ್ನಲಾದ ''ಅಪಾದನೆ'' ಗಳ ಎದುರಿಗೆ ಮತ್ತೂ ಒಂದು ''ತಪ್ಪು'' ಮಾಡುವುದಕ್ಕೆ ಪ್ರೊ: ರೂ ತಯಾರಿರಲಿಲ್ಲ; ಸಂಸ್ಥೆಯ ಮೇಲೆ ಮತ್ತಷ್ಟು ''ಗುರುತರ ಆಪಾದನೆ''ಗಳನ್ನು ಆಹ್ವಾನಿಸುವುದು ತರವಲ್ಲವೆಂಬುದು ಅವರ ಅಭಿಮತವಾಗಿತ್ತೆನಿಸುತ್ತದೆ.

ಆದರೆ ಈ ನಾಲ್ವರು ರಷ್ಯನ್ನರ ಅಭಿಪ್ರಾಯವೇ ಭಿನ್ನವಾಗಿತ್ತು. ಆ ಸಮಯದಲ್ಲೇ ಭೀಕರ ಕಾಲರಾ ಸಾಂಕ್ರಾಮಿಕ ಅವರ ತಾಯ್ನಾಡಿಗೆ ನುಗ್ಗಿ ಜನ ಸಮೂಹವನ್ನು ಗುಡಿಸಿ ಸಾರಿಸ ಹತ್ತಿತ್ತು. ಈ ಸಾರಿ ವೋಲ್ಗಾ ನದಿಯು ಸಮುದ್ರಕ್ಕೆ ಸೇರುವ ಅಳಿವೆಯ ಮೂಲಕ ಪ್ರವೇಶ ಮಾಡಿದ ಕಾಲರಾ ಕ್ರಿಮಿಯಾದ ಬಾಲಕ್ಲಾವಕ್ಕೆ ಜಿಗಿದಿತ್ತು; ಮತ್ತೆ ವೋಲ್ಗಾ ನದಿಯ ಮೂಲಕವೇ ಪ್ರಯಾಣ ಮುಂದುವರಿಸಿ ಸರಟೋವ್, ಬಾವ್‌ಲಿನ್‌ಸ್ಕ, ನಿಜ್ನಿ ನೋವ್ಸ್ ಗೋರೋಡ್, ಇಂದಿನ ಗೋರ್ಕಿಯ ಮೂಲಕ ಮಾಸ್ಕೋ ವೋರೋನೆಜ್ ಮತ್ತು ಸೆಯಿಂಟ್ ಪೀಟರ್ಸ್‌ಬರ್ಗ್ ಗಳಿಗೆ ತಲುಪಿತ್ತು. ತೀರಾ ಅಸಹಾಯಕ ಪರಿಸ್ಥಿತಿಯನ್ನು ತಲುಪಿದ್ದ ವೈದ್ಯ ಸಮುದಾಯ ಮತ್ತು ಸರಕಾರದಲ್ಲಿ ಜನರಿಗೆ ವಿಶ್ವಾಸ ಉಳಿದಿರಲಿಲ್ಲ. ವಿಕಾರ ಸ್ವರೂಪದ ಸುಳ್ಳು ಸುದ್ದಿ ಸಮಾಚಾರಗಳು ದೇಶದ ಮೂಲೆ ಮೂಲೆಗಳಲ್ಲಿ ಹರಡುತ್ತಿದ್ದವು. ಕಾಲರಾ ಸಾಂಕ್ರಾಮಿಕ ಎಂಬ ಪರಿಸ್ಥಿತಿಯೇ ಇಲ್ಲ; ವೈದ್ಯರೆಲ್ಲಾ ಜನ ಸಮುದಾಯವನ್ನು ನಿರ್ನಾಮ ಮಾಡುವುದರಲ್ಲಿ ತೊಡಗಿದ್ದಾರೆ; ಹಾಗೂ ಜನರನ್ನು ಸಜೀವವಾಗಿ ಹೂಳುತ್ತಿದ್ದಾರೆ ಎಂದು ಮುಂತಾದ ಸುದ್ಧಿ ಸಮಾಚಾರಗಳು ಆಗ ಎಲ್ಲಾ ಕಡೆ ಪ್ರಚಲಿತವಿದ್ದವು. ಉನ್ಮತ್ತ ಜನರ ಗುಂಪೊಂದು ಅಷ್ಟ್ರಾಖಾನ್ ಎಂಬಲ್ಲಿನ ಆಸ್ಪತ್ರೆಯಲ್ಲಿದ್ದ ರೋಗಿಗಳನ್ನೆಲ್ಲಾ ಬೀದಿಗೆಳೆದು ಹಾಕಿದರು; ಆಸ್ಪತ್ರೆಯನ್ನು ಮುಚ್ಚಿ ಬೀಗ ಜಡಿದರು; ಅದರಲ್ಲಿದ್ದ ವೈದ್ಯರನ್ನು ಬೀದಿಗೆಳೆದು ದಯಾದಾಕ್ಷಿಣ್ಯವಿಲ್ಲದೆ ಚಚ್ಚಿದರು; ಅವರ ಸಹಾಯಕನನ್ನು ಕೊಂದೇ ಹಾಕಿದರು. ಸಾರಟೋಗೋವ್‌ನಲ್ಲಿದ್ದ ಆಸ್ಪತ್ರೆಯನ್ನು ಸುಟ್ಟು ಹಾಕಿದರು; ಅಲ್ಲಿದ್ದ ಆರು ವೈದ್ಯರ ಮನೆ ಮಠಗಳನ್ನು ಲೂಟಿ ಮಾಡಿದರು. ಖಾವ್‌ಲಿನ್ ಸ್ಕನ ಜನಪ್ರಿಯ ಯುವ ವೈದ್ಯ ಡಾ॥ ಮೋಲ್ಚಾನೋವ್‌ರನ್ನು ಕುದುರೆ ಗಾಡಿಯಿಂದ

ಹೊರಗೆಳೆದು ಸಾಯುವ ತನಕ ಚಚ್ಚಿದರು; ಅವರ ಮೃತ ಶರೀರ ನಡು ಬೀದಿಯಲ್ಲಿ ಅನಾಥವಾಗಿ ಬಿದ್ದು ಕೊಂಡಿತ್ತು. ವಿಷಪ್ರಾಷನ ಮಾಡುತ್ತಿದ್ದನೆಂದು ಮಕ್ಕಳು ಗೇಲಿ ಮಾಡುತ್ತಿದ್ದರು; ಮಹಿಳೆಯರು ಅವರ ಮುಖಕ್ಕೆ ಉಗುಳುತ್ತಿದ್ದರಂತೆ. ಆ ಊರಿಗೆ ಬಂದಿದ್ದ ಆ ಯುವ ವೈದ್ಯ ಅಲ್ಲಿಯ ಜನರನ್ನು ಅಕ್ಕರೆಯಿಂದ ಚಿಕಿತ್ಸೆ ಮಾಡಿದ್ದ; ಹಲವಾರು ಜನರನ್ನು ಬದುಕಿಸಿದ್ದ. ಕೆಲವೇ ದಿನಗಳ ಹಿಂದೆ ಜನರ ಆರಾಧ್ಯ ದೈವನಾಗಿದ್ದ ಡಾ॥ ಮೋಲ್ಚಾನೋವ್‌ನನ್ನು ಕಾಲರಾದಿಂದ ಜನ ರೊಚ್ಚಿಗೆದ್ದು ಅವಮಾನ ಪಡಿಸಿ ಕೊಂದು ಹಾಕಿದ್ದರೆಂದರೆ ಕಾಲರಾದಿಂದ ಉದ್ಭವಿಸಿದ ಕ್ಷೋಭೆಯ ಅರಿವಾಗಬಹುದು.

ಸರ್ಕಾರದವರಿಂದ ಪೊಲೀಸ್ ಪಡೆಯನ್ನು ಕಳುಹಿಸಿ ಗಲಭೆಗಳನ್ನು ಹತ್ತಿಕ್ಕುವುದನ್ನು ಬಿಟ್ಟರೆ ಬೇರಿನ್ನೇನನ್ನು ಮಾಡಲಾಗುತ್ತಿರಲಿಲ್ಲ. ಚಕ್ರವರ್ತಿಯ ಸುರಕ್ಷತೆಗಾಗಿ ಅರಮನೆಯ ಸುತ್ತ ಕ್ವಾರೆಂಟೀನ್ ವ್ಯವಸ್ಥೆಯನ್ನು ಬಿಗಿಗೊಳಿಸಿದರು! ವೈದ್ಯ ಸಮೂಹದವರ ವಿರೋಧವಿದ್ದರೂ ಮತೀಯ ವಾದಿಗಳು ಕಲಾರಾದಿಂದ ಬಿಡುಗಡೆ ಪಡೆಯಲು ಪ್ರಾರ್ಥನಾ ಮೆರವಣಿಗೆಗಳನ್ನು ನಡೆಸುತ್ತಲೇ ಇದ್ದರು; ಪೋಲೀಸರು ಅವರಿಗೆ ಪ್ರೋತ್ಸಾಹ ನೀಡುತ್ತಿದ್ದರು.

ರಷ್ಯಾ ದೇಶದಲ್ಲೆಲ್ಲಾ ಸಾವಿರ ಸಾವಿರ ಗಟ್ಟಲೆ ಜನ ಸಾಯುತ್ತಲೇ ಇದ್ದರು; ಸ್ವಲ್ಪ ಸಮಯದಲ್ಲೇ ಪ್ಯಾರಿಸ್ಸಿನ ಹೊರವಲಯದಲ್ಲೂ ಕಾಲರಾ ಕಾಲಿರಿಸಿದ ಸುದ್ದಿಗಳು ಬರಲಾರಂಭಿಸಿದವು; ನಾನೂರಕ್ಕೂ ಹೆಚ್ಚು ಸಾವುಗಳು ಸಂಭವಿಸಿವೆಯೆಂಬ ವದಂತಿಗಳಿದ್ದವು; ಅದಿನ್ನೇನು ಪ್ಯಾರಿಸ್‌ಗೂ ಮುತ್ತಿಗೆ ಹಾಕುವುದು ಸನ್ನಿಹಿತವಾಯಿತು. ರಷ್ಯಾದಲ್ಲಿ ಸಂಭವಿಸುತ್ತಿದ್ದ ಅಪಾರ ಸಂಖ್ಯೆಯ ಸಾವುಗಳೇ ಅಲ್ಲದೆ ಪ್ಯಾರಿಸ್ಸಿನ ಮೂಲಕ ಇಡೀ ಯೂರೋಪನ್ನೇ ಕಬಳಿಸುವ ಪರಿಸ್ಥಿತಿಯಿತ್ತು. ಹಾಫ್‌ಕಿನ್ ತಯಾರಿಸಿದ್ದ ವ್ಯಾಕ್ಸೀನನ್ನು ಮನುಷ್ಯರ ಮೇಲೆ ಈ ಸನ್ನಿವೇಶದಲ್ಲಿ ಪ್ರಯೋಗಿಸದಿರುವುದು ಇಡೀ ಮಾನವ ಸಮಾಜಕ್ಕೇ ದ್ರೋಹ ಬಗೆದಂತಾಗುತ್ತಿತ್ತು. ಬಹುಶಃ ಪ್ರೊ: ರೂ ಅವರ ಮನಸ್ಸು ಸಹ ಅದರ ಬಗೆಗೆ ಈಗ ಬದಲಾಗುವ ಸ್ಥಿತಿಗೆ ಬಂದಿತೆನ್ನಲಾಗಿದೆ. ಹಾಫ್‌ಕಿನ್ನರಿಗೆ ಇನ್ನ್ಯಾರೊಡನೆಯೂ ವಿಚಾರವಿನಿಮಯ ಮಾಡುವ ಅವಕಾಶವಿರಲಿಲ್ಲ. ಪ್ರೊ: ಮೆಕ್ನಿಕೋವ್ ಅಟ್ಲಾಂಟಿಕ್ ಕಡಲ ತೀರದ ಬ್ರಿಟಾನಿಯಾದಲ್ಲಿ ಆಗ ತಾನೆ ತಲೆಯೆತ್ತುತ್ತಿದ್ದ ಕಾಲರ ಪ್ರಕರಣಗಳನ್ನು ಪರಿಶೀಲಿಸಲು ತೆರಳಿದ್ದರು.

## ಜುಲೈ 18, 1892.

ಕಾಲರಾ ಸಾಂಕ್ರಾಮಿಕದ ಇತಿಹಾಸದಲ್ಲಿ ಅದೊಂದು ಮರೆಯಲಾಗದ ದಿನ. ವ್ಲಾದಿಮಿರ್ ಹಾಫ್‌ಕಿನ್ ಕಾಲರಾ ನಿರೋಧದ ಬಗೆಗೆ ತಾವೇ ತಯಾರಿಸಿದ ವ್ಯಾಕ್ಸೀನಿನ ಸುರಕ್ಷತೆಯನ್ನು ಜಗತ್ತಿಗೆ ಶ್ರುತಪಡಿಸಿದ ದಿನ. ಹಾಫ್‌ಕಿನ್ ಆ ಸಲುವಾಗಿ ಕಾಲರಾ ವ್ಯಾಕ್ಸೀನಿನ ಮಾನವ ಪ್ರಯೋಗಕ್ಕೆ ತಮ್ಮನ್ನೇ ಒಡ್ಡಿಕೊಂಡರು ಆ ದಿನ. ಆ ಪ್ರಯೋಗ

ಹೊರ ಜಗತ್ತಿಗೆ ತಿಳಿಯದಂತೆ ಎಚ್ಚರ ವಹಿಸಿದ್ದರು. ಸಾಮಾನ್ಯವಾಗಿ ಪ್ರಯೋಗಾಲಯದ ಪ್ರಾಣಿಗಳಿಗೆ ನೀಡುತ್ತಿದ್ದುದರ ಬಹು ಪಾಲು ಹೆಚ್ಚು ಪ್ರಮಾಣದ ವ್ಯಾಕ್ಸೀನನ್ನು ಅವರು ಬಳಸಿದ್ದು; ತಮ್ಮ ಚರ್ಮದಡಿಯಲ್ಲಿ ಅದನ್ನು ಇಂಜಕ್ಷನ್ ಮೂಲಕ ಚುಚ್ಚಿಸಿಕೊಂಡರು. ಕೆಲವೇ ತಾಸುಗಳಲ್ಲಿ ಅವರ ಮೈ ಶಾಖ ಏರಿತ್ತು; ತೀವ್ರ ಬಗೆಯ ತಲೆ ನೋವು ಕಾಣಿಸಿಕೊಂಡಿತು. ಬಹಳಷ್ಟು ಅಸ್ವಸ್ಥರಾದಂತೆ ಕಂಡರೂ ಅದನ್ನು ಸಹಿಸಿಕೊಂಡರು. ಆದರೂ ಅಂದು ಪ್ರಯೋಗಾಲಯದಲ್ಲಿ ತಮ್ಮ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿಯೇ ಇದ್ದರು. ಆರು ದಿನಗಳ ನಂತರ ತೀವ್ರ ವಿಷಮ ಬ್ಯಾಸಿಲೈಗಳಿಂದ ತಯಾರಿಸಿದ ಎರಡನೇ ಡೋಸ್ ವ್ಯಾಕ್ಸೀನನ್ನು ಚುಚ್ಚಿಸಿಕೊಂಡರು. ಈ ಸಾರಿ ಮೈ ಶಾಖ ಹಿಂದಿನ ಸಾರಿಗಿಂತಲೂ ಹೆಚ್ಚು ಏರಿತ್ತು; ಆದರೆ ಅಸ್ವಸ್ಥತೆ ಮುಂದಿನ 24 ಗಂಟೆಗಳಿಗೆ ಮಾತ್ರ ಸೀಮಿತವಾಯಿತು. ಜುಲೈ 25ರ ಸಂಜೆಯ ಹೊತ್ತಿಗೆ ಅವರೇ ತಯಾರಿಸಿಕೊಂಡು ಅವರ ಮೇಲೆಯೇ ಪ್ರಯೋಗ ಮಾಡಿಕೊಂಡ ವಾಕ್ಸೀನ್ ಮನುಷ್ಯರಿಗೆ ಸುರಕ್ಷಿತವೆಂಬುದು ಸಾಬೀತಾದಂತಾಯಿತು. ಈ ನಡುವಿನ ಅವಧಿಯಲ್ಲಿ ರಷ್ಯಾದಿಂದ ಬಂದಿದ್ದ ಅವರ ಸ್ನೇಹಿತರಾದ ಡಾ॥ ಯುವೆಯಿನ್, ವಿಲ್‌ಬುಷೇವಿಚ್ ಮತ್ತು ಟೋಮಾಮ್‌ಷೇವ್ ಅವರಗುಳೂ ಸಹ ಸ್ವಯಂಪ್ರೇರಿತರಾಗಿ ಕಾಲರಾ ವ್ಯಾಕ್ಸೀನಿನ ಇಂಜಕ್ಷನ್ ಮಾಡಿಸಿಕೊಂಡರು. ಅವರೆಲ್ಲರ ಪೈಕಿ ಟೋಮಾಮ್‌ಷೇವ್‌ರಿಗೆ ತೀವ್ರ ಪ್ರತಿಕ್ರಿಯೆಯಾದಂತಿತ್ತು; ಮೈ ಶಾಖ $39^0C$ ಸೆಂಟಗ್ರೇಡ್‌ಗೆ ಏರಿತ್ತು; ಆದರೆ ಮುಂದಿನ 12 ಗಂಟೆಯೊಳಗೇ ಅವರು ಸಹಜಸ್ಥಿತಿಗೆ ಬಂದರು.

ಹಾಫ್‌ಕಿನ್ನರಿಗೆ ತಮ್ಮ ವಾಕ್ಸೀನ್ ಮನುಷ್ಯರಿಗೆ ಯಾವ ರೀತಿಯಲ್ಲೂ ಹಾನಿಕರವಲ್ಲವೆಂಬುದು ಖಚಿತವಾದ ನಂತರ, ವಿಷಯವನ್ನು ವಿಜ್ಞಾನ ಜಗತ್ತಿಗೆ ತಿಳಿಸುವ ಅಭಿಲಾಷೆಯುಂಟಾಯಿತು. ಜುಲೈ 30 ರಂದು ಜರುಗಿದ ಪ್ಯಾರಿಸ್ ಬಯೋಲಾಜಿಕಲ್ ಸೊಸೈಟಿಯ ಸಭೆಯಲ್ಲಿ ಆ ಬಗೆಗೆ ಭಾಷಣ ಮಾಡಿದರು. ''ನಾನು ಎರಡು ಸಾರಿ ತೆಗೆದುಕೊಂಡ ವ್ಯಾಕ್ಸೀನಿನಿಂದ ಯಾವುದೇ ದುಷ್ಪರಿಣಾಮ ಉಂಟಾಗಿಲ್ಲ; ಆದುದರಿಂದ ಇತರ ಮನುಷ್ಯರ ಮೇಲೆ ಅದರ ಪ್ರಯೋಗ ಹಾನಿಕರವಾಗಲಾರದು; ಅದರ ಸುರಕ್ಷತೆಗೆ ಯಾವ ಅನುಮಾನಗಳಿಗೂ ಆಸ್ಪದವಿಲ್ಲದಂತೆ ಸಾಬೀತಾಗಿದೆ, ಆದುದರಿಂದ ಯಾವುದೇ ಅಪಾಯದ ಹೆದರಿಕೆ ಇಲ್ಲದೆ ಇದನ್ನು ಸಾರ್ವಜನಿಕರಲ್ಲಿ ಪ್ರಯೋಗ ಮಾಡಬಹುದು. ವ್ಯಾಕ್ಸೀನನ್ನು ತೆಗೆದುಕೊಂಡ ಆರು ದಿನಗಳಲ್ಲಿ ಕಾಲರಾವನ್ನು ಪ್ರತಿರೋಧಿಸುವ ಶಕ್ತಿ ಉಂಟಾಗುತ್ತದೆಂಬುದು ನನ್ನ ನಂಬಿಕೆ'' ಎಂದು ವಿವರಿಸಿದರು.

ಈ ಸಭೆಯ ವರದಿಗಳು ಮೊದಲು ವೈದ್ಯಕೀಯ ಪತ್ರಿಕೆಗಳಲ್ಲಿ ಮಾತ್ರ ಪ್ರಕಟವಾದವು. ಹಾಫ್‌ಕಿನ್ನರೂ ಸೇರಿದಂತೆ ಈ ನಾಲ್ಕು ಜನ ರಷ್ಯನ್ ಧೀರೋದಾತ್ತ ಯುವಕರ ಸಾಹಸಕಾರ್ಯ ಪ್ಯಾರಿಸ್‌ನ ಸುದ್ದಿ ಮಾಧ್ಯಮಗಳಿಗೆ ತಲುಪುವುದಕ್ಕೆ ಹೆಚ್ಚು ಸಮಯ ಹಿಡಿಯಲಿಲ್ಲ. ಬಹಳ ಕಾಲದಿಂದ ಸಾರ್ವಜನಿಕರು ಕಾಲರಾ ಹತೋಟಿಗೆ

ನಿರೀಕ್ಷಿಸುತ್ತಿದ್ದ ಪರಿಹಾರವೊಂದು ದೊರಕಿದಂತಾಯಿತೆಂದು ಅವರೆಲ್ಲಾ ಸಂತಸ ಪಟ್ಟರು. **ಲಾ ಇಲ್ಲ ಸ್ಟ್ರೇಷನ್ ಪತ್ರಿಕೆ** ''ಶಕ್ತಿಗುಂದಿದ ಕಾಲರಾ ರೋಗಾಣುಗಳನ್ನು ಡಾ|| ಹಾಫ್‌ಕಿನ್ ಮತ್ತು ಅವರ ಸ್ನೇಹಿತರು ತಮ್ಮ ಮೇಲೆಯೇ ಮೊದಲು ಪ್ರಯೋಗ ಮಾಡಿಕೊಂಡಿದ್ದು ಒಂದು ಹುಚ್ಚು ಸಾಹಸವೇ ಸರಿ. ಆದರೆ ಮನುಕುಲದ ಹಿತದೃಷ್ಟಿಯಿಂದ ಸ್ವಾಗತಾರ್ಹ ಪ್ರಯತ್ನವೆನ್ನಬೇಕು. ಈ ಪ್ರಯತ್ನ ಇನ್ನೂ ಹೆಚ್ಚಿನ ಯಶಸ್ಸುಗಳಿಗೆ ನಾಂದಿಯಾಗಲಿ. ಶಹಭಾಸ್ ಭಲೆ, ಭಳಿರೇ!'' ಎಂದು ವ್ಲಾದಿಮಿರ್ ಹಾಪ್‌ಕಿನ್ನರನ್ನು ಹಾಡಿ ಹೊಗಳಿತು.

ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲೂ ಹೆಚ್ಚಾಗಿ ಯಾರದೂ ಗಮನ ಸೆಳೆಯದ, ಸಂಕೋಚ ಪ್ರವೃತ್ತಿಯ ಉಪಗ್ರಂಥ ಪಾಲಕ ರಷ್ಯನ್ ಯುವಕ ವ್ಲಾದಿಮಿರ್ ಹಾಪ್‌ಕಿನ್ನ ದಿನ ಬೆಳಗಾಗುವಷ್ಟರಲ್ಲೇ ಪ್ರಖ್ಯಾತ ಪುರುಷರಂತಾದರು. ಅವರನ್ನು ನೋಡಲು, ಸಂಧಿಸಿ ಮಾತುಕತೆಯಾಡಲು ವಿಜ್ಞಾನಿಗಳು, ವಿದ್ವಾಂಸರು, ಪತ್ರಕರ್ತರು ಮುಂತಾದ ಉತ್ಸಾಹಿಗಳೆಲ್ಲಾ ಗುಂಪು ಗುಂಪಾಗಿ ಪ್ಯಾಶ್ಚರ್ ಇನ್ಸ್ಟಿಟ್ಯೂಟ್ ಕಡೆ ಧಾವಿಸುತ್ತಿದ್ದರು. ಮಾತೃ ಭೂಮಿ ರಷ್ಯಾವೂ ಸೇರಿದಂತೆ ಪ್ರಪಂಚದಾದ್ಯಂತದ ವರ್ತಮಾನ ಪತ್ರಿಕೆಗಳು ಹಾಫ್‌ಕಿನ್ ಮತ್ತು ಅವರ ವ್ಯಾಕ್ಸೀನ್ ಬಗೆಗೆ ವರದಿಗಳನ್ನು ಪ್ರಕಟಿಸಲಾರಂಭಿಸಿದವು. ಈ ಸಂದರ್ಭ ವನ್ನು ಸ್ವಂತ ಲಾಭಕ್ಕಾಗಿ ಬಳಸಿಕೊಳ್ಳಲು ಪ್ರಯತ್ನಿಸುವವರೂ ಇದ್ದರೆಂದರೆ ಆಶ್ಚರ್ಯವಾಗಬಹುದು. ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನ್ ಪತ್ರಿಕೆಯ ವರದಿಗಾರ ಸ್ಟಾನ್ ಹೋಪ್ ಎಂಬುವರು ಹಾಫ್‌ಕಿನ್ ತಯಾರಿಸಿದ್ದ ವ್ಯಾಕ್ಸೀನನ್ನು ಚುಚ್ಚಿಗೆಸಿಕೊಂಡು ನಂತರ ಕಾಲರಾ ಹಾವಳಿ ಅತಿಯಾಗಿರುವ ಹ್ಯಾಮ್‌ಬರ್ಗ್‌ನಲ್ಲಿದ್ದುಕೊಂಡು ಆ ರೋಗಕ್ಕೆ ಒಡ್ಡಿಕೊಳ್ಳುವುದಾಗಿ ಬಡಾಯಿಕೊಚ್ಚಿ ಕೊಂಡಿದ್ದರು. ಬಹುಶಃ ಹಾಫ್‌ಕಿನ್ನರಿಗೆ ಲಭಿಸಿದ್ದ ಖ್ಯಾತಿಯಂತೆ ತಾವೂ ಹೆಸರುಗಳಿಸ ಬಹುದೆನ್ನಿಸಿಕೊಂಡಿದ್ದರೆನಿಸುತ್ತದೆ. ಆದರೆ ರಷ್ಯಾದ **ವ್ರಾಚ್** ಎಂಬ ಪತ್ರಿಕೆ ''ಸ್ಟಾನ್ ಹೋಫ್‌ರ ಆಶಯ ಒಳ್ಳೆಯದಿರಬಹುದು; ಆದರೆ ಹಾಫ್‌ಕಿನ್ ಮತ್ತು ಅವರ ಮೂರುಜನ ರಷ್ಯನ್ ಒಡನಾಡಿಗಳು ಆ ವ್ಯಾಕ್ಸೀನ್ ಹಾನಿಕರ ವಲ್ಲವೆಂಬುದನ್ನು ಸಾಬೀತುಗೊಳಿಸಿದ್ದಾರೆ. ಸ್ಟಾನ್ ಹೋಪ್ ಹ್ಯಾಮಬರ್ಗ್‌ನಲ್ಲಿ ಇರಬಹು ದಾದ ಸಮಯದಲ್ಲಿ ಅವರಿಗೆ ಕಾಲರಾ ಬರಲೀ ಅಥವಾ ಬರದಿರಲಿ ಅದರಿಂದ ಏನನ್ನು ಸಾಧಿಸಿದಂತಾಗುವುದಿಲ್ಲ; ಆ ಸಲುವಾಗಿ ಹೊಸದಾದ ಪ್ರಯೋಗ ಜರುಗಿಸ ಬೇಕಿಲ್ಲ''ವೆಂದು ತಳ್ಳುಹಾಕಿ ಸರಿಯಾದ ಉತ್ತರ ನೀಡಿತು.

ಕಾಲರಾ ವಿರುದ್ಧ ಯಶಸ್ವಿ ವ್ಯಾಕ್ಸೀನ್‌ನ ತಯಾರಿಕೆಯಿಂದಾಗಿ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನ ಜೀವಶಾಸ್ತ್ರವಿಭಾಗ ಈಗ ಕೀರ್ತಿ ಶಿಖರದ ತುತ್ತ ತುದಿಯನ್ನು ತಲುಪಿದಂತಾ ಯಿತು. ಆನಂದಭರಿತರಾದ ಪ್ರೊ: ರೂ, ತಮ್ಮ ಮತ್ತು ಪ್ಯಾಶ್ಚರ್‌ರ ಪರವಾಗಿಯೂ ಹಾಫ್‌ಕಿನ್ನರನ್ನು ಅಭಿನಂದಿಸಿದರು. ಪ್ರೊ: ಮೆಕ್ನಿಕೋವ್ ಅವರಿಗೆ ತಮ್ಮನ್ನೇ ಬೆನ್ನು ಹತ್ತಿ ಬರುತ್ತಿದ್ದ ಶಿಷ್ಯನ ಬಗೆಗೆ ಅಭಿಮಾನ ಉಕ್ಕಿ ಹರಿಯಿತು. ಲೂಯಿಪ್ಯಾಶ್ಚರ್ ತುಂಬಾ ಅಸ್ವಸ್ಥರಾಗಿದ್ದು ಆ ಸಮಯದಲ್ಲಿ ಪ್ರಯೋಗಾಲಯಕ್ಕೆ ಬರುವ ಸ್ಥಿತಿಯಲ್ಲಿರಲಿಲ್ಲ. ಆದರೂ

ವಿಜ್ಞಾನ ಲೋಕದಲ್ಲಾಗುತ್ತಿದ್ದ ಬೆಳವಣಿಗೆಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ತಮ್ಮ ಪ್ರಯೋಗಾಲಯದ ಯುವ ವಿಜ್ಞಾನಿ ಹಾಫ್‌ಕಿನ್ ಗಳಿಸಿದ ಯಶಸ್ಸು ಅವರ ಮನಸ್ಸಿಗೆ ಮುದ ನೀಡಿತು. ಅವರೇ ಹಾಫ್‌ಕಿನ್ನರಿಗೆ ತಮ್ಮ ವೈಯಕ್ತಿಕ ಅಭಿನಂದನೆಗಳನ್ನು ತಿಳಿಸಿದರು. ಪ್ರಪಂಚದಲ್ಲೇ ಆ ಕಾಲದ ವಿಜ್ಞಾನ ಪ್ರಪಂಚದ ಮುಂಚೂಣಿಯಲ್ಲಿದ್ದ ಲೂಯಿ ಪ್ಯಾಶ್ಚರ್‌ರಂಥ ಮಹಾನುಭಾವರ ಆಶೀರ್ವಾದ ಮತ್ತು ಮೆಚ್ಚುಗೆ ದೊರೆತರೆ ಯಾರಿಗೆ ತಾನೇ ಹರ್ಷವಾಗುವುದಿಲ್ಲ? ಹಾಫ್‌ಕಿನ್ನರಿಗೆ ಅದೊಂದು ತಮ್ಮ ಜೀವಮಾನದ ಅಮೃತ ಗಳಿಗೆಯಂತಾಯಿತು.

ಕೇವಲ 32ರ ಎಳೆಯ ವಯಸ್ಸಿನಲ್ಲಿ ಶತಶತಮಾನಗಳಿಂದ ಮಾನವ ಕುಲಕ್ಕೆ ಮಾರಕವಾಗಿದ್ದಂಥ ಕಾಲರಾವನ್ನು ನಿಯಂತ್ರಿಸುವ ಮಹತ್ವದ ಶೋಧನೆಯ ಯಶಸ್ಸು ಹಾಫ್‌ಕಿನ್ನರ ಮನಸ್ಸಿನಲ್ಲಿ ಅದೇ ಮೊದಲ ಬಾರಿಗೆ ಎಂದಿಲ್ಲದ ಸಂತೃಪ್ತಿಯನ್ನುಂಟು ಮಾಡಿತ್ತು. ಹಾಗೆ ನೋಡಿದರೆ ಆ ಸಂಶೋಧನೆಯ ಯಶಸ್ಸು ಆಕಸ್ಮಿಕವಾಗೇನೂ ಬಂದುದಲ್ಲ. ಅತ್ಯಂತ ಜಾಗರೂಕತೆಯಿಂದ ಕ್ರಮಬದ್ಧವಾಗಿ ಯೋಚಿಸಿ, ಯೋಜಿಸಿ ಸತತವಾದ ಪರಿಶ್ರಮದ ಕೆಲಸದ ಪ್ರತಿಫಲವಾಗಿತ್ತು. ವೈಯಕ್ತಿಕವಾಗಿ ಅವರ ಪ್ರತಿಭೆಯ ಫಲ ಅದಾಗಿರಬಹುದಾದರೂ, ತಮ್ಮ ದೇಶವೇ ಅಲ್ಲದೆ ಪ್ರಪಂಚದಾದ್ಯಂತ ಸಾಮಾನ್ಯ ಜನರು ಅನುಭವಿಸುತ್ತಿದ್ದ ಬವಣೆಯೇ ಅವರ ಸ್ಫೂರ್ತಿಯ ಸೆಲೆಯಾಗಿತ್ತೆಂದರೆ ಅತಿಶಯೋಕ್ತಿಯಲ್ಲ. ಹಿಂದೆ ಉಜ್ವಲ ಕ್ರಾಂತಿಕಾರಿಯಾಗಿ ತಮ್ಮ ಜೀವವನ್ನೇ ಪಣ ಒಡ್ಡಿ ಹೋರಾಡಿದ್ದೂ ಸಹ ಇಂತಹ ಸ್ಫೂರ್ತಿಯಿಂದಲೇ. ಅವರ ಗುರು ನಾಸ್ತಿಕವಾದಿ ಪ್ರೊ: ಮೆಕ್ನಿಕೋವರ ಧ್ಯೇಯವಾಗಿದ್ದ ಸೂತ್ರ-ಪ್ರತಿಯೊಬ್ಬ ವಿದ್ಯಾವಂತನೂ ತನ್ನ ಜನ ಸಮುದಾಯದ ಜೀವರಕ್ಷಣೆ ಹಾಗೂ ಸುಖಕ್ಕಾಗಿ ಹೋರಾಡಬೇಕೆಂಬುದು-ಈ ಶಿಷ್ಯನ ಧ್ಯೇಯವೂ ಆಗಿತ್ತು. ಅಂತಹ ಧ್ಯೇಯವನ್ನು ಸಾಧಿಸಬೇಕೆಂಬ ಆತ್ಮವಿಶ್ವಾಸ ಅವರ ಪ್ರಯೋಗಗಳ ಸಫಲತೆಗೆ ಕಾರಣವಾಗುತ್ತಿದ್ದವು. ಆದರೂ ಇಲ್ಲಿಯವರೆಗೆ ಕಷ್ಟ ಕೋಟಲೆಗಳ ಹಾದಿಯಲ್ಲೇ ಜಿವನ ಸಾಗಿಸುತ್ತಾ ಬಂದಿದ್ದ ಯುವ ವಿಜ್ಞಾನಿಯ ಮುಂದಿನ ದಾರಿಯೇನೂ ಸುಗಮವಾಗಿರಲಿಲ್ಲ.

೫

# ಆಸೆ-ನಿರಾಸೆ

ರಷ್ಯಾದಲ್ಲಿದ್ದಾಗ ವ್ಲಾದಿಮಿರ್ ಹಾಫ್‌ಕಿನ್ನರ ಬಾಲ್ಯ ಮತ್ತು ಯೌವ್ವನ ಕಾಲದ ಜೀವನದ ರೀತಿನೀತಿಗಳನ್ನು ಗಮನಿಸಿದವರಿಗೆ ಅವರ ಸ್ವದೇಶಾಭಿಮಾನದ ಆಳ ಅಂತರಾಳಗಳ ಪರಿಚಯವಾಗಿರಬಹುದು. ದುಷ್ಟ ಝಾರ್ ದೊರೆ ಮತ್ತು ಅವರ ಸಮುದಾಯದವರಿಂದ ರಷ್ಯಾದ ಜನತೆಯು ಅನುಭವಿಸುತ್ತಿದ್ದ ದಬ್ಬಾಳಿಕೆ, ಕ್ರೌರ್ಯಗಳಿಗೆ ಇತಿಮಿತಿ ಇರಲಿಲ್ಲ. ಅವರ ದಾಸ್ಯದಿಂದ ಮುಕ್ತಿ ಪಡೆಯಲು ಹಲವಾರು ಕ್ರಾಂತಿಗಳು ತಲೆಯೆತ್ತಿದವು. ಅರಸೊತ್ತಿಗೆಯನ್ನು ಕಿತ್ತೊಗೆಯಲು ಈ ಗುಂಪುಗಳವರೂ ಸಹಾ ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರು. ಸ್ವತಃ ದೊರೆ ಮತ್ತು ಅವರ ಆಜ್ಞೆಗಳನ್ನು ಯಾವುದೇ ದಯಾ ದಾಕ್ಷಿಣ್ಯಗಳಿಲ್ಲದೆ ಜಾರಿಗೆ ತರುತ್ತಿದ್ದ ಅಧಿಕಾರಿಗಳ ಕೊಲೆಗಳು ಅವರಿಂದಲೇ ಆಗಿದ್ದವು. ವಿದ್ಯಾರ್ಥಿಯಾಗಿದ್ದಾಗ ಸ್ವತಃ ಹಾಫ್‌ಕಿನ್ನರೇ ಅಂತಹ ಚಟುವಟಿಕೆಗಳ ಮುಂಚೂಣಿಯಲ್ಲಿರುತ್ತಿದ್ದರು. ಕೆಲ ಕಾಲ ಸೆರೆಮನೆಯಲ್ಲೂ ಕಳೆದಿದ್ದರು. ಪೋಲಿಸರು ಅವರ ಮೇಲೆ ವರ್ಷಾನುಗಟ್ಟಲೇ ಕಟ್ಟೆಚ್ಚರದ ಕಣ್ಗಾವಲಿರಿಸಿರುತ್ತಿದ್ದರು. ಬೇಸತ್ತು ದೇಶವನ್ನೇ ಬಿಟ್ಟು ಹೊರಗಡೆ ಜೀವನ ನಡೆಸಬೇಕೆಂದು ಪ್ರಯತ್ನಿಸಿದಾಗಲೆಲ್ಲಾ ಸರ್ಕಾರದವರು ಇಲ್ಲಸಲ್ಲದ ಅಡೆತಡೆಗಳನ್ನು ಒಡ್ಡುತ್ತಿದ್ದರು. ಕಾಲಕ್ರಮೇಣ ಅವರ ನರೋದ್ನಾಯ ವೋಲ್ಯಾ ಕ್ರಾಂತಿಕಾರಿ ಪಕ್ಷವೂ ನಿರ್ನಾಮವಾಯಿತು; ಅವರ ಸಂಗಡಿಗರೆಲ್ಲಾ ಸೆರೆಮನೆ ಸೇರಿದ್ದರು. ಮುಂದೆ ಜೀವನ ನಿರ್ವಹಣೆಗಾಗಿ ಸ್ವಿಟ್ಸರ್‌ಲ್ಯಾಂಡ್‌ಗೆ ಬಂದವರು, ಅಲ್ಲಿಂದ ಪ್ಯಾರಿಸ್ಸನ್ನು ತಲುಪಿದರು; ತಮ್ಮ ಇನ್ನೊಂದು ಪ್ರೀತಿಯ ಹವ್ಯಾಸವಾದ ಸಂಶೋಧನಾ ರಂಗ ಪ್ರವೇಶಿಸಿದರು. ಆಗಿನ ಶ್ರದ್ಧಾಪೂರ್ವಕ ಕೆಲಸ ಕಾರ್ಯ ಪ್ರತಿಫಲವೇ ಕಾಲರಾ ನಿರೋಧಕ ಲಸಿಕೆಯ ಆವಿಷ್ಕಾರವಾದದ್ದು. ಬಾಹ್ಯ ನೋಟಕ್ಕೆ ಅವರೊಬ್ಬ ಸದಾ ಕಾರ್ಯನಿರತ ವಿಜ್ಞಾನಿಯಂತೆ ಕಾಣುತ್ತಿದ್ದರು. ಆದರೆ ಅವರು ಯಾವಾಗಲೂ ಸ್ವದೇಶದ ಸ್ಥಿತಿಗತಿಗಳಲ್ಲೂ ಮುಳುಗಿ ಹೋಗಿರುತ್ತಿದ್ದರು; ಅವರ ಮತ್ತೊಂದು ಮಹತ್ವಾಕಾಂಕ್ಷೆಯೆಂದರೆ ಪ್ರಪಂಚದ ಜನ ಸಮುದಾಯವನ್ನು ಕಾಲರಾದಿಂದ ಮುಕ್ತ ಮಾಡುವುದಾಗಿತ್ತು. ಕಾಲರಾ ಲಸಿಕೆಯನ್ನು ತಮ್ಮ ಮೇಲೆ ಪ್ರಯೋಗಿಸಿಕೊಂಡ ಕೇವಲ 24 ಗಂಟೆಗಳಲ್ಲೇ ಅವರ ಸ್ವದೇಶಾಭಿಮಾನದ ಉತ್ಕಟಾಕಾಂಕ್ಷೆ ವ್ಯಕ್ತವಾಯಿತು. ಸಂಶೋಧನಾ ಸಂಸ್ಥೆಯ ಮುಖ್ಯಸ್ಥರಾದ ಪ್ರೊ.:ರೂ ಮುಖಾಂತರ ತಮ್ಮ ಉದ್ದೇಶವನ್ನು ಅರುಹಿಕೊಂಡರು. ಕಾಲರಾ ವಿರುದ್ಧ ಲಸಿಕೆ

ತಯಾರಿಸುವ ಅವರ ಪ್ರಯತ್ನ ಯಶಸ್ವಿಯಾದರೆ, ಅದನ್ನು ತಯಾರಿಸುವ ವಿಧಾನ ಮತ್ತು ಪ್ರಯೋಗಿಸುವ ರೀತಿ ನೀತಿಗಳನ್ನೊಳಗೊಂಡ ಫಲಿತಾಂಶಗಳನ್ನೆಲ್ಲಾ ಸದಾ ಕಾಲರಾದ ಬವಣೆಯನ್ನು ಅನುಭವಿಸುತ್ತಿರುವ ತಮ್ಮ ಸ್ವದೇಶಕ್ಕೆ ಯಾವುದೇ ಆರ್ಥಿಕ ಪ್ರತಿಫಲಾಪೇಕ್ಷೆ ಇಲ್ಲದೆ ಧಾರೆಯೆರೆಯುವುದೇ ಅವರ ಕೋರಿಕೆಯಾಗಿತ್ತು. ಹಾಫ್‌ಕಿನ್ನರ ನಿಸ್ವಾರ್ಥ ಮನೋಭಾವದ ಕೋರಿಕೆಯನ್ನು ಆಲಿಸಿದ ಲೂಯಿಪ್ಯಾಶ್ಚರ್ ಮಹಾನುಭಾವರು ತಮ್ಮ ಉದಾರತೆಯನ್ನು ತೋರಿಸಲು ಹಿಂಜರಿಯಲಿಲ್ಲ. ತಮ್ಮ ಪ್ರಯೋಗಾಲಯದಲ್ಲಾದ ಸಂಶೋಧನೆಗಳ ಗುಟ್ಟನ್ನು ಇನ್ನೊಂದು ರಾಷ್ಟ್ರಕ್ಕೆ ಬಿಟ್ಟುಕೊಡಲು ಪ್ಯಾಶ್ಚರ್‌ರಂಥವರಲ್ಲದೆ ಬೇರಿನ್ನಾರಾದರೂ ಒಪ್ಪುತ್ತಿರಲಿಲ್ಲ. ಅವರ ಉದ್ದೇಶವೂ ಮನುಕುಲವನ್ನು ಕಾಲರಾದಂಥ ಪಿಡುಗಿನ ಹಾವಳಿಯಿಂದ ರಕ್ಷಿಸುವುದೇ ಆಗಿತ್ತಲ್ಲವೇ? ಹಾಫ್‌ಕಿನ್ನರ ಲಸಿಕೆ ಪ್ರಾಣಿಗಳು ಮತ್ತು ಮನುಷ್ಯರ ಮೇಲೆ ಯಾವುದೇ ದುಷ್ಪರಿಣಾಮ ಬೀರುವುದಿಲ್ಲವೆಂದು ಖಚಿತವಾದ ನಂತರ ಪ್ಯಾಶ್ಚರ್, ಹಾಫ್‌ಕಿನ್ನರ ಕೋರಿಕೆಗೆ ಅನುಮತಿ ನೀಡಿದರಂತೆ.

ರಷ್ಯಾಕ್ಕೆ ಕಾಲರಾ ವ್ಯಾಕ್ಸೀನಿನ ಫಲಿತಾಂಶಗಳನ್ನು ನೀಡುವ ನಿರ್ಧಾರವಾದ ನಂತರ ಸ್ವತಃ ಲೂಯಿಪ್ಯಾಶ್ಚರ್ ಅವರೇ ಅಲ್ಲಿನ ವಿಜ್ಞಾನ ವಿಷಯಗಳ ಮುಖ್ಯಸ್ಥರೊಡನೆ ಪತ್ರ ವ್ಯವಹಾರ ಆರಂಭಿಸಿದರು. ಸೆಯಿಂಟ್ ಪೀಟರ್ಸ್‌ಬರ್ಗ್‌ನಲ್ಲಿ ವಿಜ್ಞಾನ ವಿಭಾಗದ ಮುಖ್ಯಸ್ಥರಾದ (ರಾಜಕುಮಾರ) ಪ್ರಿನ್ಸ್‌ಓಲ್ಡೆನ್‌ಬರ್ಗ್‌ರನ್ನು ಉದ್ದೇಶಿಸಿ ಆ ಪತ್ರ ಬರೆಯಲಾಗಿತ್ತು. ಪತ್ರದಲ್ಲಿ ತಮ್ಮ ಪ್ರಯೋಗಾಲಯದಲ್ಲಿ ಕಾರ್ಯನಿರತರಾಗಿರುವ ವ್ಲಾದಿಮಿರ್ ಹಾಫ್‌ಕಿನ್‌ರ ಕಾಲರಾನಿರೋಧ ಲಸಿಕೆಯ ಯಶಸ್ಸಿನ ಬಗೆಗೆ ವಿವರಿಸಿದ್ದರು; ಆ ದಿಸೆಯಲ್ಲಿ ಯುವ ವಿಜ್ಞಾನಿ ಹಾಫ್‌ಕಿನ್ನರ ಕಾರ್ಯದಕ್ಷತೆಯನ್ನು ಹೃತ್ಪೂರ್ವಕವಾಗಿ ಕೊಂಡಾಡಿದ್ದರು. ಆ ಸಂಶೋಧನೆ ಫಲಿತಾಂಶಗಳನ್ನು ರಷ್ಯಾದ ಕಾಲರಾ ಪೀಡಿತ ಜನಸ್ತೋಮದ ಒಳಿತಿಗಾಗಿ ಯಾವುದೇ ನಿರ್ಬಂಧ ಅಥವಾ ಆರ್ಥಿಕ ಅಭಿಲಾಷೆಯಿಲ್ಲದೆ ಬಳಸಿಕೊಳ್ಳಬಹುದೆಂದು ತಿಳಿಸಿದ್ದರು. ವಿಷಯ ತಿಳಿದ ಹಾಫ್‌ಕಿನ್ನರ ಸಂತೋಷಕ್ಕೆ ಪಾರವಿಲ್ಲವಾಯಿತು. ಈ ಪತ್ರದ ಜೊತೆಗೆ ಪ್ರೊ:ರೂ ಅವರ ಅನುಮೋದನೆಯ ಪತ್ರವೂ ಸೇರಿತ್ತು. ಎಲ್ಲಕ್ಕಿಂತ ಮಿಗಿಲಾಗಿ ರಷ್ಯಾದವರೇ ಆಗಿದ್ದ ಹಾಗೂ ಸಂಶೋಧನೆಯನ್ನು ಯಶಸ್ವಿಯಾಗಿ ಜರುಗಿಸಿದ್ದ ಹಾಫ್‌ಕಿನ್ನರಿಂದ ಒಂದು ಮನವಿ ಪತ್ರವನ್ನೂ ಸೇರಿಸಲಾಗಿತ್ತು. ತಮ್ಮ ಮನವಿಯಲ್ಲಿ ಅನುಮತಿ ದೊರೆತರೆ ತಾವೇ ರಷ್ಯಾಕ್ಕೆ ಬಂದು ವ್ಯಾಕ್ಸೀನನ್ನು ತಯಾರಿಸುವ ವಿಧಿವಿಧಾನಗಳು ಮತ್ತು ಪ್ರಯೋಗಿಸುವ ರೀತಿನೀತಿಗಳನ್ನು ಅಲ್ಲಿಯ ವೈದ್ಯ ಸಮುದಾಯದವರಿಗೆ ಪ್ರದರ್ಶಿಸಲು ತಯಾರಿರುವುದಾಗಿ ತಿಳಿಸಿದ್ದರು. ಈ ಮೂರೂ ಪತ್ರಗಳನ್ನು ಒಂದೇ ಲಕೋಟೆಯಲ್ಲಿಟ್ಟು ಟಪಾಲು ಮೂಲಕ ರವಾನಿಸಲಾಗಿತ್ತು. ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನ ನಿರ್ದೇಶಕ, ಮೇಲ್ವಿಚಾರಕ ಹಾಗೂ ಸಂಶೋಧಕ, ಮೂರೂ ಜನರು ತಮ್ಮ ಜನ ಸೇವಾ ತತ್ಪರತೆಯನ್ನು ಪ್ರದರ್ಶಿಸಿದ್ದರು.

ಮಿಣಜೀವಿ ಶಾಸ್ತ್ರಕ್ಷೇತ್ರದಲ್ಲಿ ಪ್ರಪಂಚದಲ್ಲೇ ಅದ್ವಿತೀಯರೆನಿಸಿದ್ದ ಲೂಯಿ ಪ್ಯಾಶ್ಚರರಂತಹ ಮಹಾವಿಜ್ಞಾನಿಯಿಂದ ಶಿಫಾರಸ್ಸು ಪತ್ರಪಡೆಯುವುದೆಂದರೆ ಒಂದು

ಮಹತ್ಸಾಧನೆಯೇ ಸರಿ; ಆ ಸಮಯದಲ್ಲಿ ಅವರನ್ನು ಪ್ರಶ್ನಿಸುವವರೇ ಇರಲಿಲ್ಲವೆನ್ನಬಹುದು. ಮಿಣಜೀವಿಗಳನ್ನು ಸೂಕ್ಷ್ಮದರ್ಶಕದ ಸಹಾಯದಿಂದ ಪ್ರದರ್ಶಿಸಿದ್ದ ಇನ್ನೊಬ್ಬ ಮಹಾನ್ ವಿಜ್ಞಾನಿ ಜರ್ಮನಿಯ ರಾಬರ್ಟ್‌ಕಾಖ್ ಕೆಲಸಾರಿ ಪ್ಯಾಶ್ಚರ್‌ರ ಅಭಿಪ್ರಾಯಗಳನ್ನು ವಿರೋಧಿಸುತ್ತಿದ್ದರಷ್ಟೆ. ಡಾ|| ಕಾಖ್‌ರ ಸಂಶೋಧನೆಯ ತತ್ವಗಳನ್ನೇ ತಳಹದಿಯಾಗಿರಿಸಿ ಕೊಂಡು ಹಾಫ್‌ಕಿನ್ನರೇ ವ್ಯಾಕ್ಸೀನಿನ ಶೋಧನೆಯನ್ನು ಜರುಗಿಸಿದ್ದರಿಂದ ಆ ಬಗೆಗೆ ಅವರೇನೂ ಸಂಶಯ ವ್ಯಕ್ತಪಡಿಸಿರಲಿಲ್ಲ.

ಈ ಹಿನ್ನೆಲೆಯಲ್ಲಿ ಸ್ವದೇಶದಲ್ಲಿ ತಮ್ಮ ಸಂಶೋಧನೆಯ ಫಲಿತಾಂಶ ದೇಶಬಾಂಧವರ ಪ್ರಯೋಜನಕ್ಕೆ ಬರಬಹುದೆಂಬ ಹೆಮ್ಮೆ ಮೂಡುತ್ತಿತ್ತು. ಅದೇನಾದರೂ ಸಾಧ್ಯವಾದರೆ ಸ್ವದೇಶಕ್ಕೆ ಹಿಂದಿರುಗುವ ಸಾಧ್ಯತೆಗಳ ಅಶಾಂಕುರವೂ ಮೂಡಿರಬೇಕು ಅವರ ಮನಸ್ಸಿನಲ್ಲಿ. ಆ ಸಮಯದಲ್ಲೇ ಕಾಲರಾ ಸಾಂಕ್ರಾಮಿಕ ರಷ್ಯಾದ ಸೆಯಿಂಟ್ ಪೀಟರ್ಸ್‌ಬರ್ಗ್ ಮುಂತಾದ ಹಲವು ಕಡೆ ವಿಪರೀತವಾಗಿ ಹರಡುತ್ತಿತ್ತು. ಅಂತಹ ಸಂದರ್ಭದಲ್ಲಿ ರಷ್ಯಾ ಸರ್ಕಾರವು ತಾವು ನೀಡಲು ತಯಾರಾಗಿದ್ದ ಸಹಾಯ ಹಸ್ತವನ್ನು ನಿರಾಕರಿಸಬಾರದೆಂಬುದು ಅವರ ನಿರೀಕ್ಷೆಯಾಗಿತ್ತು. ಇನ್ನೇನು ಇಷ್ಟರಲ್ಲೇ ಪ್ರಿನ್ಸ್ಓಲ್ಡೆನ್‌ಬರ್ಗ್, ಆಗಿನ ಕಾಲರಾ ಪರಿಸ್ಥಿತಿಯನ್ನು ಗಮನಿಸಿ ತಮ್ಮನ್ನು ರಷ್ಯಾಕ್ಕೆ ಕರೆಸಿಕೊಳ್ಳುತ್ತಾರೆಂದು ಹಾಫ್‌ಕಿನ್ ಹಗಲು ಕನಸುಗಳನ್ನು ಕಾಣಲಾರಂಭಿಸಿದ್ದರು. ಯಾವ ಸಮಯದಲ್ಲಾದರೂ ಕರೆಯೋಲೆ ಬಂದರೂ ಕೂಡಲೇ ಹೊರಡಲು ತಯಾರಿರುವ ಸಲವಾಗಿ ಗಂಟುಮೂಟೆಗಳನ್ನು ಕಟ್ಟಿಬಿಟ್ಟಿದ್ದರಂತೆ.ಆದರೆ ಸೆಯಿಂಟ್ ಪೀಟರ್ಸ್‌ಬರ್ಗ್‌ನಲ್ಲಿ ಆಗ ಜರಗುತ್ತಿದ್ದ ವಿದ್ಯಮಾನಗಳೇ ಬೇರೆಯಾಗಿದ್ದವು.

## ಕಾಲರಾ ವ್ಯಾಕ್ಸೀನ್ ಬಳಕೆಗೆ ಸ್ವದೇಶದಲ್ಲಿ ನಕಾರ

ಪ್ರಿನ್ಸ್ ಓಲ್ಡೆನ್ ಬರ್ಗ್ ಅವರು ಜರ್ಮನ್ ರಾಜಮನೆತನದ ಮೂಲದವರು. ಬಹಳ ಹಿಂದೆ ರಷ್ಯಾಕ್ಕೆ ಬಂದಿದ್ದು ಅವರು ಸೆಯಿಂಟ್ ಪೀಟರ್ಸ್‌ಬರ್ಗ್‌ನಲ್ಲಿ ನೆಲೆಸಿದ್ದರು. ಝಾರ್ ರಾಜ ಮನೆತನದೊಡನೆ ಸಂಬಂಧವೂ ಬೆಳೆದಿತ್ತು. ಯೌವ್ವನದಲ್ಲಿ ಮಿಲಿಟರಿ ಸೇರಿ ಹಲವು ಹುದ್ದೆಗಳನ್ನಲಂಕರಿಸಿ ನಿವೃತ್ತರಾಗಿದ್ದರು; ನಂತರದ ವರ್ಷಗಳಲ್ಲಿ ಅದ್ಹೇಗೋ ವೈಜ್ಞಾನಿಕ ವಿಷಯಗಳಲ್ಲಿ, ಅದರಲ್ಲೂ ವೈದ್ಯಕೀಯ ವಿಚಾರಗಳಲ್ಲಿ ಅವರು ಆಸಕ್ತಿ ಬೆಳಸಿಕೊಂಡಿದ್ದರು. ಅಂತಹ ಹವ್ಯಾಸವೊಂದು 1890ರ ದಶಕದಲ್ಲಿ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿರುವವರಿಗೆ ಅವಶ್ಯಕವೆನಿಸುತ್ತಿತ್ತು. ಇಂಗ್ಲೆಂಡ್ ಮತ್ತು ಯುರೋಪಿನ ರಾಷ್ಟ್ರಗಳಲ್ಲಿ ಆಗ ವಿಶ್ವಮಾನ್ಯರಾಗಿದ್ದ, ಕ್ಲಾಡ್ ಬರ್ನಾಡ್, ಲೂಯಿ ಪ್ಯಾಶ್ಚರ್, ಜೋಸೆಫ್ ಲಿಸ್ಟರ್ ಮೊದಲಾದವರ ಶ್ರೇಷ್ಠತೆ ಮತ್ತು ಖ್ಯಾತಿಗಳು ರಷ್ಯಾದ ಅರಮನೆಯವರೆಗೂ ಮುಟ್ಟಿದ ವಿಷಯವಾಗಿತ್ತು. ವೈಜ್ಞಾನಿಕ ವಿಷಯಗಳಲ್ಲಿ ತಮ್ಮ ದೇಶದವರು ಅವರೆಲ್ಲರಿಗಿಂತ ಕಡಿಮೆಯವರಲ್ಲ ಎಂದು ತೋರಿಸಿಕೊಳ್ಳಬೇಕೆಂಬ ಆಕಾಂಕ್ಷೆ ಅವರಿಗೂ ಇತ್ತು. ಆಗ

ರಷ್ಯಾದ ಚಕ್ರವರ್ತಿಯಾಗಿದ್ದ ಮೂರನೇ ಅಲೆಗ್ಸಾಂಡರ್‌ರ ಮನವೊಲಿಸಿ ಅಲ್ಲೊಂದು ಪ್ಯಾಶ್ಚರ್ ಇನ್ಸ್ಟಿಟ್ಯೂಟ್ ನಿರ್ಮಿಸುವುದಕ್ಕಾಗಿ ಮೂವತ್ತು ಲಕ್ಷ ರೂಬೆಲ್ಲುಗಳನ್ನು ಮಂಜೂರು ಮಾಡಿಸಿಕೊಂಡಿದ್ದರು. (ಈ ದೊರೆಯ ಕಾಲದಲ್ಲೇ ಒಡೆಸ್ಸಾ ವಿಶ್ವವಿದ್ಯಾಲಯದಲ್ಲಿ ಗಲಭೆಗಳಾದದ್ದು; ಪ್ರೊ.ಮೆಕ್ನಿಕೋವ್ ಮತ್ತಿತರ ಶ್ರೇಷ್ಠ ಬೋಧಕರೆಲ್ಲಾ ಅದನ್ನು ತ್ಯಜಿಸಿ ಹೊರದೇಶಗಳಿಗೆ ವಲಸೆ ಹೋಗುವಂತಾದುದು; ಅಲ್ಲಿಯ ಶೈಕ್ಷಣಿಕ ವಾತಾವರಣವೇ ಕುಲಗೆಟ್ಟು ವಿಶ್ವವಿದ್ಯಾಲಯ ದಿವಾಳಿ ಎದ್ದಿತ್ತು). ಚಕ್ರವರ್ತಿಗಳ ನೆರವಿನಿಂದ ಆ ಸಂಸ್ಥೆ ಸ್ಥಾಪನೆಯಾದಾಗ, ಅವರಿಗಿಂತ ತಾವೇನೂ ಕಡಿಮೆಯವರಲ್ಲವೆಂದು ತೋರ್ಪಡಿಸುವ ಸಲುವಾಗಿ ಪ್ರಿನ್ಸ್ ಓಲ್ಡೆನ್‌ಬರ್ಗ್‌ರೇ ಇಂಪೀರಿಯಲ್ ಇನ್ಸ್ಟಿಟ್ಯೂಟ್ ಆಫ್ ಎಕ್ಸ್‌ಪೆರಿಮೆಂಟಲ್ ಮೆಡಿಸಿನ್ ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದ್ದರು. ಆರಂಭದ ವರ್ಷಗಳಲ್ಲಿ ರಷ್ಯಾದ ಮಹೋನ್ನತ ಅಂಗಕ್ರಿಯಾ ಶಾಸ್ತ್ರಜ್ಞರೆಂದು ವಿಶ್ವವಿಖ್ಯಾತಿ ಪಡೆದ ಐವಾನ್ ಪಾವ್‌ಲೋವರಂಥ ಹಲವಾರು ಶ್ರೇಷ್ಠ ವಿಜ್ಞಾನಿಗಳ ತಂಡವೇ ಇಲ್ಲಿ ನೆರೆದಿತ್ತು. ಆದರೆ ಅಂತಹ ಮಹಾನ್ ವಿಜ್ಞಾನಿಗಳನ್ನು ಕೇವಲ ತಾವು ನೀಡುತ್ತಿರುವ ಸಂಬಳಕ್ಕಾಗಿ ದುಡಿಯುತ್ತಿರುವ ಅಡಿಯಾಳುಗಳಂತೆ ಕಾಣತೊಡಗಿದರು. ಅದರಿಂದ ಬೇಸತ್ತ ಅವರೆಲ್ಲಾ ಸ್ವಲ್ಪಸಮಯದಲ್ಲೇ ಆ ಸಂಸ್ಥೆಯನ್ನು ತ್ಯಜಿಸಿದರು. ಮುಂದೆ ತಮಗೆ ಅಡಿಯಾಳಾಗಿ ವರ್ತಿಸಬಹುದಾದ ಷ್ಪೆರ್ಕ್ ಎಂಬ ಸಾಮಾನ್ಯ ಯೋಗ್ಯತೆಯ ವಿಜ್ಞಾನಿಯೊಬ್ಬರನ್ನು ಅದರ ನಿರ್ದೇಶಕರಾಗಿ ನೇಮಿಸಿಕೊಂಡಿದ್ದರು.

ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಿಂದ ಕಳುಹಿಸಿದ ಪತ್ರ ರಷ್ಯಾದ ವಿಜ್ಞಾನ ವಿಭಾಗದ ಮುಖ್ಯಸ್ಥರಾದ ಪ್ರಿನ್ಸ್ ಓಲ್ಡೆನ್ ಬರ್ಗ್‌ರಿಗೆ ತಲುಪಿತು. ಅದನ್ನು ಓದಿದ ಓಲ್ಡೆನ್ ಬರ್ಗ್‌ರಿಗೆ ಮುಂದೇನು ಮಾಡಬೇಕೆಂಬುದು ಸ್ವಲ್ಪ ಇರುಸು ಮುರುಸಿನ ಸಂಗತಿಯಾಯಿತು. ಹೊರದೇಶಗಳಿಂದ ವಿಜ್ಞಾನಿಗಳು, ವಿದ್ವಾಂಸರು, ಕ್ರೀಡಾಪಟುಗಳು ಮುಂತಾದವರನ್ನು ಆಹ್ವಾನಿಸುವ ವಿಷಯ ವಿದೇಶಾಂಗ ಖಾತೆಯವರಿಗೆ ಸಂಬಂಧಿಸಿದ್ದು. ಪ್ರಿನ್ಸ್ ಓಲ್ಡೆನ್ ಬರ್ಗ್‌ರಂಥ ಉನ್ನತ ಸ್ಥಾನದಲ್ಲಿರುವವರೂ ಸಹ ಇಂಥಾ ನಿಯಮವನ್ನು ಬದಿಗಿರಿಸಿ ವಿಜ್ಞಾನಿಗಳನ್ನು ಕರೆಸುವಂತಿರಲಿಲ್ಲ. ಆದುದರಿಂದ ಪ್ಯಾರಿಸ್ಸಿನ ಮೂರೂ ಪತ್ರಗಳನ್ನು ವಿದೇಶಾಂಗ ಖಾತೆಯ ಅಧಿಕಾರಿಗಳ ಅಭಿಪ್ರಾಯಕ್ಕಾಗಿ ಒಪ್ಪಿಸಿದರು. ಓಲ್ಡೆನ್ ಬರ್ಗ್‌ರಿಗೆ ಹಾಫ್‌ಕಿನ್ನರ ಪೂರ್ವಾಪರಗಳು ತಿಳದಿರಲಿಲ್ಲ. ಆದರೆ ವಿದೇಶಾಂಗ ಖಾತೆಯವರಿಗೆ ಅದು ತಿಳಿಯದಿರಲು ಸಾಧ್ಯವಿರಲಿಲ್ಲ.

ವಿದೇಶಾಂಗ ಖಾತೆಯ ಅಧಿಕಾರಿಗಳು ವ್ಲಾದಿಮಿರ್ ಹಾಫ್‌ಕಿನ್ನರ ಬಗೆಗೆ ತಮ್ಮಲ್ಲಿದ್ದ ದಾಖಲೆಗಳನ್ನೆಲ್ಲಾ ಜಾಲಾಡಿಸಿದರು. ವ್ಲಾದಿಮಿರ್ ವಿದ್ಯಾರ್ಥಿದೆಸೆಯಲ್ಲಿ ಭಾಗಿಯಾಗುತ್ತಿದ್ದ ಕ್ರಾಂತಿಕಾರಿ ಚಟುವಟಿಕೆಗಳು, ನರೋದ್ನಾಯ ವೋಲ್ಯಾಪಾರ್ಟಿಯ ಸದಸ್ಯತ್ವ, ಮೂರು ಸಾರಿ ಬಂಧನಕ್ಕೊಳಗಾದುದು, ಪೊಲೀಸರು ಕಣ್ಣಾವಲಿರಿಸಿದ್ದು, ಪರದೇಶಕ್ಕೆ ಹೋಗಿ, ಅದರ ಪರವಾನಿಗಿಯ ಅವಧಿ ಮುಗಿದರೂ ಸ್ವದೇಶಕ್ಕೆ ವಾಪಸಾಗದಿದ್ದುದು, ಆ ಬಗೆಗೆ

ಫ್ರಾನ್ಸ್‌ನಲ್ಲಿದ್ದ ರಷ್ಯಾದ ರಾಯಬಾರಿ ಕಛೇರಿಗೂ ತಿಳಿಸದಿದ್ದುದು ಹಾಗೂ ಪ್ಯಾರಿಸ್ಸಿನಲ್ಲೂ ಎಡಪಂಥೀಯ ಉಗ್ರವಾದಿಗಳ ಸಂಪರ್ಕಇಟ್ಟುಕೊಂಡಿರುವುದು-ಮುಂತಾದ ಹಾಫ್‌ಕಿನ್ನರ ಹಿಂದಿನ ಮತ್ತು ಇಂದಿನ ಜಾತಕವನ್ನೆಲ್ಲಾ ಒಂದಾದ ಮೇಲೊಂದರಂತೆ ಪತ್ತೆಮಾಡಿದರು. ಈ ಎಲ್ಲಾ ಸಂಗತಿಗಳ ಬಗೆಗೆ ವಿವರವಾದ ವರದಿಯನ್ನು ತಯಾರಿಸಿದರು. ಹಿಂದೆ ಒಡೆಸ್ಸಾನಗರದ ನಿವಾಸಿಯಾಗಿದ್ದ 32 ವರ್ಷದ ಯೆಹೂದಿ ವ್ಲಾದಿಮಿರ್ ಹಾಫ್‌ಕಿನ್‌ರನ್ನು ಮತ್ತೆ ರಷ್ಯಾ ಪ್ರವೇಶ ಮಾಡುವ ಅವಕಾಶ ಮಾಡಿ ಕೊಡುವುದು ಸರಿಯಲ್ಲ- ಎಂದು ವಿದೇಶಾಂಗ ಖಾತೆಯವರು ತಿಳಿಸಿದ್ದರು.

ಈ ವರದಿಯಿಂದ ವಿಜ್ಞಾನ ಪಕ್ಷಪಾತಿಯೆನಿಸಿಕೊಂಡಿದ್ದ ಪ್ರಿನ್ಸ್‌ಓಲ್ಡೆನ್‌ಬರ್ಗ್ ಇನ್ನಷ್ಟು ಪೇಚಿಗೆ ಸಿಲುಕಿದಂತಾಯಿತು. ವಿದೇಶಾಂಗ ಮತ್ತು ಪೋಲಿಸ್ ಇಲಾಖೆಯವರ ಅಭಿಪ್ರಾಯವನ್ನು ಒಮ್ಮೆಲೇ ತಳ್ಳಿಹಾಕುವಂತಿರಲಿಲ್ಲ. ಹೊರದೇಶದಿಂದ ವಿಜ್ಞಾನಿಯೊಬ್ಬ ನನ್ನು (ಅವರು ಹಿಂದೆ ತಮ್ಮದೇಶದವರೇ ಆಗಿದ್ದರೂ ಸಹಾ)ನೇರವಾಗಿ ಆಹ್ವಾನಿಸ ಲಾಗದಂಥ ಪರಿಸ್ಥಿತಿಯಿಂದ ನುಣುಚಿಕೊಳ್ಳಲು ಹುನ್ನಾರವೊಂದನ್ನು ಯೋಚಿಸಿದರು. ಆ ಬಗೆಗೆ ಸರಿಯಾದ ನಿರ್ಧಾರ ಮಾಡಲು ಸಮಿತಿಯೊಂದನ್ನು ನೇಮಿಸಿದರು. ಆ ಸಮಿತಿಯಲ್ಲಿ ವೈದ್ಯರು, ಸಾರ್ವಜನಿಕ ಆರೋಗ್ಯಾಧಿಕಾರಿಗಳು, ವಿಜ್ಞಾನಿಗಳು ಹಾಗೂ ಕೆಲವು ಸೈನ್ಯಾಧಿಕಾರಿಗಳನ್ನು ಸೇರಿಸಿದ್ದರು. ಸಭೆ ಇಂಪೀರಿಯಲ್ ಇನ್ಸಿಟ್ಯೂಟ್ ಆಫ್‌ಮೆಡಿಸಿನ್‌ನಲ್ಲಿ ಜರುಗಿತು. ಜೊತೆಗೆ ಝಾರ್ ಚಕ್ರವರ್ತಿಯ ಕೆಲವು ಕುಟುಂಬ ವೈದ್ಯರನ್ನು ವಿಶೇಷವಾಗಿ ಆಹ್ವಾನಿಸಲಾಗಿತ್ತು. ಮಿಣಜೀವಿಶಾಸ್ತ್ರ ತಜ್ಞರಾದ ಡಾ॥ ರಾಪ್‌ಚೆವ್‌ಸ್ಕಿಯವರು ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಮೊದಲಿಗೆ ಪ್ಯಾಶ್ಚರ್, ರೂ ಮತ್ತು ಹಾಫ್‌ಕಿನ್ನರ ಪತ್ರಗಳನ್ನು ಸಭೆಗೆ ಓದ ಲಾಯಿತು. ನಂತರ ಅಧ್ಯಕ್ಷರಾದ ರಾಪ್‌ಚೆವ್‌ಸ್ಕಿ 1885 ಸ್ಪೆಯಿನ್‌ನ ಫೆರಾನ್ ಇದೇ ರೀತಿಯಲ್ಲಿ ಕಾಲರಾ ವ್ಯಾಕ್ಸೀನನ್ನು ತಯಾರಿಸಿ ಬಳಸಿದಾಗ ಉಂಟಾದ ಅನಾಹುತಗಳ ಬಗೆಗೆ ಪ್ರಸ್ತಾಪಿಸಿದರು. ಆ ಸಮಯದಲ್ಲಿ ಸ್ಪೆಯಿನ್‌ಗೆ ಅವರೇ ಖುದ್ದಾಗಿ ಹೋಗಿ ಪರಿಶೀಲಿಸಿದ ಅನುಭವಗಳನ್ನು ವಿವರಿಸಿದರು; ಅಲ್ಲಿ ನಡೆದ ಅನಾಹುತಗಳು ಎಲ್ಲರಿಗೂ ತಿಳಿದುದೇ; ಹಾಗಾಗಿ ಮುಂದಿನ ದಿನಗಳಲ್ಲಿ ಕಾಲರಾ ವ್ಯಾಕ್ಸೀನಿನ ಪ್ರಸ್ತಾಪ ಬಂದಾಗಲೆಲ್ಲಾ ತಾವುವಿರೋಧಿಸಿದ್ದನ್ನು ನೆನಪಿಸಿಕೊಂಡರು. ಆ ತರಹದ ವ್ಯಾಕ್ಸೀನುಗಳು ಸಾರ್ವಜನಿಕ ಆರೋಗ್ಯಕ್ಕೆ ತುಂಬಾ ಹಾನಿಯುಂಟುಮಾಡಬಲ್ಲವು. ಹೊಟ್ಟೆಯೊಳಗಡೆ ಇರುವ ಜಠರ, ಕರುಳುಗಳಲ್ಲಿ ಉದ್ಭವಿಸುವ ಕಾಲರಾ ವ್ಯಾಧಿಗೆ ಚರ್ಮದಡಿಯಲ್ಲಿ ಚುಚ್ಚುವ ವ್ಯಾಕ್ಸೀನು ಏನೂ ಪ್ರಭಾವ ಬೀರಲಾರದೆಂಬ ಅವರ ಖಚಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿ ದರು. ನಂತರ ಮಾತಾಡಿದ ಇತರ ಸದಸ್ಯರೆಲ್ಲಾ ಅವರ ಅಭಿಪ್ರಾಯಗಳಿಗೇ ಒತ್ತುಕೊಟ್ಟರು.

ಸಭೆಯಲ್ಲಿ ಅಂಗೀಕರಿಸಿದ ನಿರ್ಣಯದಲ್ಲಿ ''ರೋಗಗಳು ಬಾರದಂತೆ ವ್ಯಾಕ್ಸಿನೇಷನ್ ಅಥವಾ ಇನಾಕ್ಯುಲೇಷಗಳನ್ನು ನೀಡುವುದು ವೈದ್ಯ ಸಮುದಾಯದವರಿಗೆ

ಹೊಸದೇನೂ ಅಲ್ಲ. ಏಳು ವರ್ಷಗಳ ಹಿಂದೆ ಸ್ಪೆಯಿನ್‌ನ ಫೆರಾನ್‌ರು ಇಂಥಹದೇ ಪ್ರಯೋಗಗಳನ್ನು ಮಾಡಿದ್ದರು. ಅದರಿಂದ ಉಂಟಾದ ದುಷ್ಪರಿಣಾಮಗಳು ಸರ್ವರಿಗೂ ವೇದ್ಯ; ಆದುದರಿಂದ ಇಂತಹ ಪ್ರಯೋಗಗಳನ್ನು ಪ್ರಯೋಗಾಲಯಗಳಲ್ಲಿ ಪ್ರಾಣಿಗಳ ಮೇಲೆ ಜರುಗಿಸುತ್ತಿರುವುದು ಸೂಕ್ತ; ಮಾನವರ ಮೇಲೆ ಜರುಗಿಸಲೇಬೇಕೆಂದರೆ ಪ್ರಸ್ತುತ ಕಾಲರಾ ಅತ್ಯಂತ ಉಲ್ಬಣಾವಸ್ಥೆಯಲ್ಲಿರುವ ಸಯಾಮ್ (SIAM-INDOCHINA) ನಂತಹ ದೇಶದ ಜನರ ಮೇಲೆ ಮಾಡಬಹುದು'' ಎಂದು ತಿಳಿಸಲಾಗಿತ್ತು. ಪ್ಯಾಶ್ಚರ್‌ರ ಪತ್ರದಲ್ಲಿ ಹಾಫ್‌ಕಿನ್ನರನ್ನು ಅವರ ಪ್ರಯೋಗಗಳನ್ನು ಪ್ರದರ್ಶಿಸಲು ರಷ್ಯಾಕ್ಕೆ ಆಹ್ವಾನಿಸಲು ಪ್ರಸ್ತಾಪಿಸಿದ್ದರ ಬಗೆಗೂ ಪ್ರಸ್ತಾಪಿಸಲಾಗಿತ್ತಷ್ಟೆ. ಅದರ ಬಗೆಗೆ ಚರ್ಚೆಗಳು ನಡೆದವು. ಅಲ್ಲಿ ಸೇರಿದ್ದ ಪ್ರಭೃತಿಗಳು ಆ ಪ್ರಯೋಗಗಳನ್ನು ಪ್ರದರ್ಶಿಸಲು ಯಾವ ಮಹನೀಯರ ಅವಶ್ಯಕತೆಗಳೇನೂ ಇಲ್ಲ, ಅವುಗಳನ್ನು ಮಾಡಿಕೊಳ್ಳಲು ನಾವು ಶಕ್ತರಾಗಿದ್ದೇವೆ'' ಎಂಬ ನಿರ್ಣಯವನ್ನು ಸೇರಿಸಿದ್ದರಂತೆ.

ಡಾ||ರಾಪ್‌ಚಿವ್‌ಸ್ಕಿ ಅವರ ನೇತೃತ್ವದಲ್ಲಿ ಅಂದು ಅಂಗೀಕರಿಸಿದ ನಿರ್ಣಯಗಳು ತುಂಬಾ ವಿರೋಧಾಭಾಸಗಳಿಂದ ಕೂಡಿದ್ದವು. ಪ್ರಸ್ತುತ ಹಾಫ್‌ಕಿನ್ ಜರುಗಿಸಿದ ಪ್ರಯೋಗಗಳ ಮಾಹಿತಿಗಳನ್ನು ವಿವರವಾಗಿ ಅಭ್ಯಾಸಮಾಡದೆ, ಅವುಗಳನ್ನು ಫೆರಾನಂಥವರ ಹಿಂದಿನ ಪ್ರಯೋಗಗಳೊಡನೆ ತುಲನೆ ಮಾಡಿದ್ದು ಸರಿಯಾದ ಮಾರ್ಗವಾಗಿರಲಿಲ್ಲ. ಅಲ್ಲದೆ ಅಂತಹ ಸಮಸ್ಯೆಯನ್ನು ಪ್ರಯೋಗಾಲಯಗಳಲ್ಲಿ ಅದೆಷ್ಟು ಕಾಲ ಮುಂದುವರಿಸಿಕೊಂಡು ಹೋಗಲುಸಾಧ್ಯವಾಗುತ್ತದೆ? ಅಂತಹ ಪ್ರಯೋಗದ ಗೊತ್ತು ಗುರಿಗಳೇನು? ಇಡೀ ರಷ್ಯಾದಾದ್ಯಂತ ಕಾಲರಾ ಹರಡುತ್ತಿದ್ದು, ಪ್ರತಿದಿನ ಸಾವಿರಾರು ಜನರನ್ನು ಬಲಿತೆಗೆದುಕೊಳ್ಳುತ್ತಿರುವಾಗ, ಅದನ್ನು ದೂರದ ಸಯಾಮ್ ದೇಶದ ಜನರ ಮೇಲೆ ಪ್ರಯೋಗ ನಡೆಸುವುದರ ಔಚಿತ್ಯವಾದರೂ ಏನು? ಅಲ್ಲದೆ ಅಲ್ಲಿಯ ಜನರಿಗೂ ರಷ್ಯಾದವರಿಗೂ ವ್ಯತ್ಯಾಸಗಳೇನಾದರೂ ಇವೆಯೇ? ಸಭೆ ಇಂತಹ ವಿಷಯಗಳ ಕಡೆಗೆ ಗಮನಹರಿಸದೆ ರಾಪ್‌ಚಿವಸ್ಕೀಯವರ ಅಭಿಪ್ರಾಯಗಳಿಗೆ ಪುರಸ್ಕಾರ ನೀಡಿ ನಿರ್ಣಯ ಮಾಡಿದ್ದು ದುರದೃಷ್ಟಕರವೆನ್ನಬಹುದು.

ಪತ್ರಿಕೆಗಳಲ್ಲಿ ಸಭೆಯ ನಡೆವಳಿಕೆಗಳ ವರದಿಯೇನೋ ಆಗಿತ್ತು. ಆದರೆ ಯಾವ ಪತ್ರಿಕೆಯೂ ಮೇಲಿನ ವಿಷಯಗಳ ಬಗೆಗೆ ಟೀಕೆ-ಟಿಪ್ಪಣಿ ಮಾಡಿರಲಿಲ್ಲ. ರಷ್ಯಾದಲ್ಲೇ ಆಗ 50 ಲಕ್ಷ ಜನರಿಗೆ ಕಾಲರಾ ತಗಲಿ ಸುಮಾರು 20 ಲಕ್ಷ ಜನರು ಸಾವೀಗಿಡಾಗಿದ್ದದು ಬಹುಶಃ ಅವರಾರ ಗಮನಕ್ಕೂ ಬಂದಿರಲಿಲ್ಲವೇನೋ? ಮನುಷ್ಯರ ಜೀವನ್ಮರಣ ಸಮಸ್ಯೆಯಲ್ಲಿ ರಾಜಕೀಯ ಕೈವಾಡ ನಡೆದಿತ್ತು. ಒಟ್ಟಿನಲ್ಲಿ ಪ್ರಿನ್ಸ್ ಓಲ್ಡೆನ್‌ಬರ್ಗ್‌ರ ಅಂತರ್ಯದಲ್ಲಿ ಹಾಫ್‌ಕಿನ್ನರನ್ನು ರಷ್ಯಾಕ್ಕೆ ಕರೆಸಿಕೊಳ್ಳುವುದಕ್ಕಾಗಲೀ ಮತ್ತು ಅವರ ವ್ಯಾಕ್ಸಿನಿನ ಪ್ರಯೋಗ ಮಾಡುವುದಕ್ಕಾಗಲೀ ಇದ್ದ ವಿರೋಧವನ್ನು ಸಮರ್ಥಿಸಿಕೊಳ್ಳಲು ಪರಿಣಿತರ ಸಭೆ ಅನುವು ಮಾಡಿಕೊಟ್ಟಿತ್ತು.

ಸೆಯಿಂಟ್ ಪೀಟರ್ಸ್‌ಬರ್ಗ್‌ನಲ್ಲಿ ವೈಜ್ಞಾನಿಕ ವಿಷಯವೊಂದನ್ನು ರಾಜಕೀಯ ನಾಟಕದ ಪ್ರಹಸನವನ್ನಾಗಿ ಮಾಡುತ್ತಿದ್ದುದು ಪ್ಯಾರಿಸ್‌ನಲ್ಲಿದ್ದ ಹಾಫ್‌ಕಿನ್ನರು ಗ್ರಹಿಸುವ ಸ್ಥಿತಿಯಲ್ಲಿರಲಿಲ್ಲ. ಸರಳ ಹಾಗೂ ನೇರ ನಡೆನುಡಿಗಳ ಯುವವಿಜ್ಞಾನಿಯ ತಲೆಗೆ ಇಂತಹ ಕ್ಷುಲ್ಲಕ ವಿಚಾರಗಳು ಹೊಳೆಯುವುದಾದರೂ ಎಂತು? ಮುಂದೆ ಇಪ್ಪತ್ತು ವರ್ಷಗಳ ನಂತರ ಅವರು ಬರೆದ ಪುಸ್ತಕವೊಂದರಲ್ಲಿ ಈ ಬಗೆಗೆ ಅವರಲ್ಲಿದ್ದ ಮುಗ್ಧ ಮನೋಭಾವ ವ್ಯಕ್ತವಾಗಿತ್ತು 'ಸ್ಪೆಯಿನ್ ದೇಶದಲ್ಲಿ1885ರಲ್ಲಿ ಜರುಗಿಸಿದ್ದ ಪ್ರಯೋಗಗಳು ಅಷ್ಟೇನೂ ತೃಪ್ತಿಕರವಾದವಲ್ಲ ಎಂಬ ಕಾರಣದಿಂದ ರಷ್ಯಾ ಸರ್ಕಾರ ನನ್ನ ಬೇಡಿಕೆಯನ್ನು ತಿರಸ್ಕರಿಸಿರಬೇಕು. ಆ ಕಾಲದ ಹೆಸರಾಂತ ಮಿಣಜೀವ ತಜ್ಞರಲ್ಲಿ ಈ ತರಹೆಯ ಅಭಿಪ್ರಾಯಗಳಿದ್ದಾಗ ಯಾರೇನು ಮಾಡಲಾದೀತು?'' ಎಂದು ತಮ್ಮ ಅಳಲನ್ನು ತೋಡಿ ಕೊಂಡಿದ್ದರು. ಆದುದರಿಂದ ರಷ್ಯಾ ಸರ್ಕಾರದ ಅಧಿಕಾರಿಗಳು ಬಹುಶಃ ವಿನಾಕಾರಣ ದಿಂದ ತಮಗೆ ಅನ್ಯಾಯವೆಸಗಲಾರರೆಂಬುದು ಅವರ ಅಭಿಪ್ರಾಯವಾಗಿತ್ತೆನಿಸುತ್ತದೆ.

ದುರಾಡಳಿತ ನಡೆಸುತ್ತಿದ್ದ ಝಾರ್ ದೊರೆ ಜನಸಾಮಾನ್ಯರ ಸ್ವಾಸ್ಥ್ಯ ಸಮಸ್ಯೆಗಳನ್ನು ಕಡೆಗಣಿಸಿ ತನಗೆ ಇರಬಹುದಾದ ಕಾಲ್ಪನಿಕ ವ್ಯಾಧಿಯ ಬಗೆಗೆ ಅದೆಷ್ಟು ಕಾಳಜಿ ವಹಿಸುತ್ತಿದ್ದರೆಂಬುದಕ್ಕೆ ಆ ಸಂದರ್ಭದ ಒಂದು ಪ್ರಕರಣವನ್ನು ಇಲ್ಲಿ ಉಲ್ಲೇಖಿಸಬಹುದು.

ಫ್ರಾನ್ಸಿನಲ್ಲಿ ರಷ್ಯಾದ ರಾಯಭಾರಿಯಾಗಿದ್ದ ಬೇರನ್ ವೋರೆನ್‌ಹೀಮ್ ವಿದೇಶಾಂಗ ಮಂತ್ರಿಗಳಿಗೆ ಬರೆದ ಪತ್ರವೊಂದರಲ್ಲಿ ''ಫ್ರೆಂಚ್ ನಾಗರಿಕ ಎಂ.ಕ್ಲೂಸೆಟ್ ಎಂಬವರು ಕಂಡು ಹಿಡಿದ ಔಷಧವನ್ನು ಜೊತೆಗಿರುವ ಪೊಟ್ಟಣದಲ್ಲಿಟ್ಟು ಕಳುಹಿಸುತ್ತಿದ್ದೇನೆ; ಚಕ್ರವರ್ತಿಗಳಾದ ಜಾರ್ಜ್ ಅಲೆಗ್ಸಾಂಡ್ರೋ ವಿಚ್ ಅವರು ನರಳುತ್ತಿರುವ ವ್ಯಾಧಿಯನ್ನು ಈ ಮದ್ದು ಗುಣಪಡಿಸುತ್ತದೆ; ಅದನ್ನು ಉಪಯೋಗಿಸುವ ರೀತಿನೀತಿಗಳನ್ನು ಇದರ ಜೊತೆ ಇರಿಸಿಲಾಗಿದೆ''. ಔಷಧ ಪೆಟ್ಟಿಗೆಯನ್ನು ಸ್ವೀಕರಿಸಿದ ಚಕ್ರವರ್ತಿಗಳು ಫ್ರಾರಿಸ್ಸಿನ ಕ್ಲೂಸೆಟ್‌ರನ್ನು ಸೂಕ್ತರೀತಿಯಲ್ಲಿ ವಂದಿಸತಕ್ಕದ್ದು ಎಂದು ನೀಲಿ ಪೆನ್ಸಿಲ್‌ನಲ್ಲಿ ಆ ಪತ್ರದ ಮೇಲೆ ಟಿಪ್ಪಣಿ ಬರೆದಿದ್ದರಂತೆ. ಮುಂದಿನ ಕೆಲವೇ ದಿನಗಳಲ್ಲಿ ಕ್ಲೂಸೆಟ್‌ರಿಗೆ ರಷ್ಯಾ ಸರ್ಕಾರದಿಂದ ಭಾರಿ ಮೊತ್ತದ ಚೆಕ್ ಸಂದಾಯವಾಯಿತು. ಅದು ನಿಜವಾಗಿಯೂ ರಾಜಗಾಂಭೀರ್ಯ ಮತ್ತು ಮರ್ಯಾದೆಗೆ ತಕ್ಕುದಾಗಿತ್ತು.! ಜನ ಸಾಮಾನ್ಯರ ಕಷ್ಟನಷ್ಟಗಳಿಗೆ ಕಿಂಚಿತ್ತಾದರೂ ಸ್ಪಂದಿಸದ ರಾಜಶಾಹಿ ತಮ್ಮ ಸ್ವಂತಕ್ಕೆ ಏನಾದರೂ ಮಾಡಿಕೊಳ್ಳಲು ತಯಾರಿರುತ್ತಾರೆಂಬುದಕ್ಕೆ ಇದೊಂದು ಸಣ್ಣ ನಿದರ್ಶನ.

## ೬

# ಏಟು-ಎದಿರೇಟು

ನಾವೀಗ ಇಪ್ಪತ್ತೊಂದನೆ ಶತಮಾನಕ್ಕೆ ಪಾದಾರ್ಪಣೆ ಮಾಡಿದ್ದೇವೆ; ನಮ್ಮ ನಾಗರಿಕತೆ ಅತ್ಯುನ್ನತ ಮಟ್ಟದಲ್ಲಿದೆಯೆನ್ನಬಹುದು. ಮಾನವನ ಜೀವನದ ಎಲ್ಲಾ ಸ್ತರಗಳಲ್ಲೂ ನಂಬಲಾಗದಷ್ಟು ಬೆಳವಣಿಗೆಗಳಿವೆ. ಗ್ರಹತಾರೆಗಳನ್ನು ತಲುಪಿದ್ದಾಗಿದೆ; ನಮ್ಮ ಆತ್ಮದ ನೆಲೆಯೆಂದು ಪರಿಗಣಿಸಲಾಗಿದ್ದ ಹೃದಯವನ್ನು ತೆಗೆದು ಹಾಕಿ ಬೇರೆಯವರ ಹೃದಯವನ್ನು ನಾಟಿ ಹಾಕುವುದು ಸಾಧ್ಯವಾಗಿದೆ; ಇನ್ನೂ ಮುಂದುವರಿದು ಕೃತಕವಾದ ಲೋಹದ ಹೃದಯವೇ ಎದೆಗೂಡಿನಲ್ಲಿ ಮನೆಮಾಡಬಹುದಾದ ದಿನ ದೂರದಲ್ಲಿಲ್ಲ.

ಈ ಎಲ್ಲಾ ಬೆಳವಣಿಗೆಗೆಗಳು ಒಂದೇ ಜಿಗಿತದಿಂದ ಉಂಟಾದವಲ್ಲ. ಆ ಹಾದಿಯಲ್ಲಿ ಸಹಸ್ರಾರು ವರುಷಗಳು ಪಯಣಮಾಡಬೇಕಾಯಿತು; ಅಸಂಖ್ಯಾತ ಅಡೆತಡೆಗಳನ್ನು ದಾಟಬೇಕಾಯಿತು. ಪಯಣದಲ್ಲಿ ತೊಡಗಿದವರು ಅಪಾರ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಯಿತು. ವ್ಲಾದಿಮಿರ್ ಹಾಫ್‌ಕಿನ್ ಬಹಳ ಕಾಲದಿಂದ ಅತ್ಯಂತ ಶ್ರಮವಹಿಸಿ ತಯಾರಿಸಿದ ಕಾಲರಾ ನಿರೋಧಕ ವ್ಯಾಕ್ಸೀನನ್ನು ಸಾರ್ವಜನಿಕರಿಗೆ ಬಳಸಲು ಅನುಭವಿಸಿದ ಅಡೆತಡೆಗಳನ್ನು ಈ ತನಕ ನೋಡಿದ್ದೇವೆ. ಪ್ರಾಣಾಪಾಯವನ್ನು ಲೆಕ್ಕಿಸದೇ ಅದನ್ನು ಮೊಟ್ಟಮೊದಲು ತಮ್ಮ ಮೇಲೆ ಪ್ರಯೋಗಿಸಿಕೊಂಡು ಪ್ರದರ್ಶಿಸಿದರೂ ಮಾನವ ಸಹಜ ಅಡೆತಡೆಗಳು ಅದ್ಹೇಗೆ ಅಡ್ಡಬರುತ್ತಿವೆಯೆಂಬುದನ್ನು ಈಗಾಗಲೇ ಗಮನಿಸಲಾಗಿದೆ.

ವೈದ್ಯ ವಿಜ್ಞಾನ ಇತಿಹಾಸದಲ್ಲಿ ನಡೆದು ಬಂದ ರೀತಿಯೇ ಹೀಗೆ. ಈ ವಿಜ್ಞಾನಕ್ಕೆ ಮೂರು ಸಾವಿರ ವರ್ಷಗಳ ಇತಿಹಾಸವಿದೆ; ಅದರುದ್ದಕ್ಕೂ ದಾರಿ ಕಾಣದ ಭ್ರಮಾಲೋಕದಲ್ಲಿ ವಿಹರಿಸಿದ್ದೇ ಆಯಿತು. ಇದು ಸ್ವಲ್ಪ ಮಟ್ಟಿಗೆ ಸಹಜವೇ ಅನ್ನಿಸಬಹುದು; ಯಾವುದೇ ನಂಬಿಕೆಯನ್ನು ತ್ಯಜಿಸಿ ಹೊರಬರಬೇಕಾದರೆ, ಮೊದಲಿಗೆ ಅಂತಹ ನಂಬಿಕೆಗಳನ್ನು ಗಳಿಸಿಕೊಂಡಿರಬೇಕಷ್ಟೆ. ವೈದ್ಯಲೋಕ ಸಾಧಿಸಿತ್ತೆನ್ನಬಹುದಾದ ಅಥವಾ ಮುಂದೆ ಸಾಧಿಸಬಹುದಾದ ಹಲವು ''ಮಹತ್ಕಾರ್ಯ''ಗಳಿಗೆ ಮಾನವರು ತಮ್ಮ ನಂಬಿಕೆಗಳಿಗೆ ಅಸಂಖ್ಯಾತ ಸಾರಿ ಮಾರು ಹೋಗಿದ್ದುಂಟು, ಮಾನವರ ಆಯುಷ್ಯವನ್ನು ಮುಂದೂಡುವ ಪ್ರಭಾವಗಳಿವೆ ಎನ್ನಲಾಗಿದ್ದ ಹಲವು ''ಸಂಜೀವಿನಿ'' ಮದ್ದುಗಳು ಆಗಾಗ್ಗೆ ಬೆಳಕಿಗೆ ಬರುತ್ತಲೇ ಇವೆ. ಕ್ಯಾನ್ಸರ್ ಕಾಯಿಲೆಯನ್ನು ಆಮೂಲಾಗ್ರವಾಗಿ ಗುಣಪಡಿಸಿ ಕಿತ್ತೊಗೆಯುವ ಚಿಕಿತ್ಸಾ ವಿಧಾನಗಳ ಬಗೆಗೆ 1890ರ ಸಮಯದಿಂದಲೂ ವೈದ್ಯಕೀಯ

ಪತ್ರಿಕೆಗಳಲ್ಲಿ ಪ್ರಕಟಣೆಗಳು ಹೊರಬರುತ್ತಲೇ ಇವೆ: (ಈಗಲೂ ಅವುಗಳಿಗೇನೂ ಕಡಿಮೆ ಇಲ್ಲ!) ಮೆಸ್‌ಮರ್‌ನ ಪ್ರಯೋಗಗಳು-ವಶೀಕರಣ ವಿದ್ಯೆ ಕೌಂಟ್‌ಕಾಗ್ ಲಿಯೋಸ್ಟ್ರೋ, ವೊರನೋವ್‌ರಂಥವರ ಕಸಿಕಟ್ಟುವಂಥ ಚಮತ್ಕಾರಿಕ ಕಾರ್ಯಗಳು ಮನುಷ್ಯರ ಭಾವನಾಶಕ್ತಿಯನ್ನು ಒಂದಲ್ಲ ಒಂದು ಸಾರಿ ಸೆರೆ ಸೆರೆಹಿಡಿದಿವೆ. ಹತ್ತೊಂಬತ್ತನೆ ಶತಮಾನದ ಮಧ್ಯಭಾಗದವರೆಗೂ ಕಾಯಿಲೆಗಳ ಉಗಮದ ಬಗೆಗೆ ಪ್ರತಿಯೊಂದು ದಶಕದಲ್ಲೂ ಬೇರೆ ಬೇರೆ ಸಿದ್ಧಾಂತಗಳ ಮಂಡನೆಗಳಾಗುತ್ತಲೇ ಇದ್ದವು. ಕಾಯಿಲೆಗಳನ್ನು ವಾಸಿಮಾಡುವ ಕ್ಷೇತ್ರದಲ್ಲೂ ಪರಿಸ್ಥಿತಿ ವಿಭಿನ್ನವಾಗಿರಲಿಲ್ಲ. ಸೀಸೆಗಟ್ಟಲೇ ಸಿದ್ಧೌಷಧಗಳು, ಕಷಾಯಗಳು, ತೊಟ್ಟುಗಳು, ಗುಳಿಗೆ, ಮುಲಾಮುಗಳನ್ನು  ನುಂಗಿಸಿ ಬಿಡುತ್ತಲೇ ಇದ್ದರು. ಮಧ್ಯ ಯುಗದ''ಔಷಧಸಂಹಿತೆ''ಯ ಮದ್ದುಗಳು, ಆಗಿನ ವೈದ್ಯರ ಚಿತ್ರವಿಚಿತ್ರ ಉಡುಗೆ ತೊಡುಗೆಗಳು ಬದಲಾಗುತ್ತಿದ್ದಂತೆಯೇ ಅವೂ ಬದಲಾಗುತ್ತಲಿದ್ದವು. ಕುದಿಯುತ್ತಿರುವ ಎಣ್ಣೆಯಲ್ಲಿ ನಾಯಿ ಮರಿಗಳನ್ನು ಹಾಕಿ ಕರಿದ ಎಣ್ಣೆಯನ್ನು ಸುಟ್ಟಿಕೊಂಡವರ ಗಾಯಗಳಿಗೆ ಹದಿನಾರನೇ ಶತಮಾನದಲ್ಲಿ ಲೇಪಿಸುವ ಪದ್ಧತಿ ಇತ್ತೆಂದರೆ ಆ ಕಾಲದ ವೈದ್ಯಲೋಕದ ಪರಿಸ್ಥಿತಿಗೆ ಹಿಡಿದ ಕೈಗನ್ನಡಿ ಅದಾಗಿತ್ತೆನ್ನಬಹುದು.

ಚಿಕಿತ್ಸಾ ವಿಧಾನಗಳೂ ಸಹ ನಂಬಲಾಗದಷ್ಟು ವಿಚಿತ್ರ ರೀತಿಯವಾಗಿರುತ್ತಿದ್ದವು. ಪ್ಯಾರಿಸ್‌ನ ಪ್ರೊ: ಎಡೋವರ್ಡ ಬೋಸ್‌ಕ್ವಿಲ್ಲೊನ್ ಮುಂಜಾನೆ ಮೆಡಿಕಲ್ ವಿದ್ಯಾರ್ಥಿಗಳನ್ನುದ್ದೇಶಿಸಿ ''ಈ ದಿನ ಏನು ಮಾಡೋಣ, ವಾರ್ಡಿನ ಎಡಭಾಗದಲ್ಲಿರುವ ರೋಗಿಗಳಿಗೆಲ್ಲಾ ಭೇದಿಯಾಗುವ ಮದ್ದು ನೀಡೋಣ; ಬಲಭಾಗದಲ್ಲಿರುವವರ ರಕ್ತಸ್ರಾವ ಮಾಡಿಸೋಣ''! ಎಂದು ಸೂಚನೆಗಳನ್ನು ನೀಡುತ್ತಿದ್ದರಂತೆ. ಎಡೋವರ್ಡ್ ಬಾಸ್‌ಕ್ವಿಲೋನ್ ಆ ಕಾಲದ ಒಬ್ಬ ಮಹಾನ್ ವೈದ್ಯ. ''ಹೋಟೆಲ್‌ಡಿಯ್ಯು'' ಆಸ್ಪತ್ರೆಯಲ್ಲಿ ಬೋಧನೆ ಮಾಡುತ್ತಿದ್ದವರು.

ವೈದ್ಯ ಸಮೂಹದವರು ಕಾಯಿಲೆಗಳನ್ನು ವಾಸಿಮಾಡುವ ಬಗೆಗೆ ಸಾರ್ವಜನಿಕರು ವಿವಿಧ ಬಗೆಯ ಭ್ರಾಂತಿಗಳನ್ನು ಕಲ್ಪಿಸಿಕೊಂಡಿದ್ದರು; ವೃತ್ತಿಯ ಬಗೆಗೆ ಅವರಲ್ಲಿ ಅಪಾರ ನಂಬಿಕೆಯೂ ಉಂಟಾಗಿತ್ತು. ಆದರೆ ಬಹಳಷ್ಟು ಸಂದರ್ಭಗಳಲ್ಲಿ ಅವರಿಟ್ಟಿದ್ದ ವಿಶ್ವಾಸ ಹುಸಿಯಾಗಿಬಿಡುತ್ತಿತ್ತು. ಈ ರೀತಿಯ ಆಶಾಭಂಗದ ಸ್ಥಿತಿ ವೈದ್ಯವೃತ್ತಿಯವರೂ ಹೊರ ತಾಗಿರಲಿಲ್ಲ. ಆಗಿನ ವೈದ್ಯರ ಸಂಘಟನೆಗಳಾದ ಮೆಡಿಕಲ್ ಸೊಸೈಟಿಗಳು, ಅಕಾಡೆಮಿಗಳು, ಹೊಸಹೊಸದಾಗಿ ಹೊರಬರುತ್ತಿದ್ದ ಮದ್ದುಗಳು ಮತ್ತು ಚಿಕಿತ್ಸಾ ವಿಧಾನಗಳ ಬಗೆಗೆ ತೀರಾ ಅನುಮಾನದಿಂದಲೇ ನೋಡುತ್ತಿದ್ದವು. ಈ ಪ್ರವೃತ್ತಿ ಹತ್ತೊಂಭತ್ತನೇ ಶತಮಾನದ ನಡುಗಾಲದವರೆಗೂ ಮುಂದುವರಿದುಕೊಂಡು ಬಂದಿತ್ತು. ಪ್ರಸ್ತುತ ಎದೆಗೂಡನ್ನು ಬೆರಳುಗಳಿಂದ ತಟ್ಟಿ ಪರೀಕ್ಷಿಸುವ ''ಪರ್ಕಷನ್'' ವಿಧಾನ ಮತ್ತು ಹೃದಯ ಮತ್ತು ಶ್ವಾಸಕೋಶಗಳಿಂದ ಉದ್ಭವಿಸುವ ಶಬ್ದಗಳನ್ನು ಆಲಿಸಿಕೊಳ್ಳುವಂಥ ''ಆಸ್ಕಲ್‌ಟೇಷನ್'' ವಿಧಾನಗಳನ್ನು ಆ ಕಾಲದ ಬಹುಪಾಲು ವೈದ್ಯರು ಅನುಮಾನ ದಿಂದಲೇ ನೋಡುತ್ತಿದ್ದರು.

ವಿಯನ್ನಾದ ಡಾ॥ ಇಯಾನ್‌ಬ್ರುಗ್ಗರ್ 1761ರಲ್ಲೇ ಪರ್ಕಷನ್ ವಿಧಾನವನ್ನು ಸಲಹೆ ಮಾಡಿದ್ದರು. ಅವರ ಸಹೋದ್ಯೋಗಿಗಳು ಅವರೊಬ್ಬ ಮಾನಸಿಕ ಸಮತೋಲನವನ್ನು ಕಳೆದುಕೊಂಡ ವ್ಯಕ್ತಿಯೆಂದು ಗೇಲಿ ಮಾಡಿ ಗೋಳು ಹೋಯ್ದುಕೊಳ್ಳುತ್ತಿದ್ದರಂತೆ; ಮುಂದಿನ ಅರವತ್ತು ವರ್ಷಗಳು ಅದು ಬಹುಮಟ್ಟಿಗೆ ಜಾರಿಗೆ ಬರಲೇಇಲ್ಲ. ಎದೆಗೂಡಿನ ಅವಯವಗಳ ಶಬ್ದಗಳನ್ನು ಆಲಿಸುವುದಕ್ಕೆ ಆ ಸಮಯದಲ್ಲಿ ಬಳಸಲ್ಪಡುತ್ತಿದ್ದ ಮರದ ಕೊಳವೆ ಸ್ಟೆಥಾಸ್ಕೋಪ್‌ನ ಮೂಲ ಸಾಧನವನ್ನು ಫ್ರೆಂಚ್ ವೈದ್ಯ ಲೆನೆಕ್ 1820ರಲ್ಲಿ ಬಳಕೆಗೆ ತಂದಾಗ ಇಂತಹದೇ ಪ್ರತಿಕ್ರಿಯೆ ಕಾದಿತ್ತು. ಮುಂದಿನ ಇಪ್ಪತ್ತು ವರ್ಷಗಳ ನಂತರವೂ ಬರ್ಲಿನ್ ಮತ್ತು ವಿಯೆನ್ನಾಗಳಲ್ಲಿ ಸ್ಟೆಥಾಸ್ಕೋಪ್ ಪರಿಹಾಸ ಕ್ಕೊಳಗಾದ ಸಲಕರಣೆಯಾಗಿತ್ತು.

ಹತ್ತೊಂಬತ್ತನೇ ಶತಮಾನದ ನಡುಗಾಲದಲ್ಲಿ ಕಣ್ಣಿನ ಒಳಭಾಗವನ್ನು ಪರೀಕ್ಷೆ ಮಾಡಲು ಜಾರಿಗೆ ಬಂದ ನಿರುಪದ್ರವಕಾರಿ ನೇತ್ರ-ದರ್ಶಕ ಬ್ಯಾಟರಿಯನ್ನು ಹೆಸರಾಂತ ಭೌತಶಾಸ್ತ್ರಜ್ಞ ಹಾಗೂ ವೈದ್ಯನೂ ಆಗಿದ್ದ ಹೆರ್‌ಮನ್‌ಹೆಲ್‌ಮ್ಹೋಲ್ಟ್ಜ್ ಜಾರಿಗೆ ತಂದಾಗಲೂ ವೈದ್ಯಸಮೂಹ ಅದನ್ನು ಅನುಮಾನದಿಂದಲೇ ನೋಡಿತು. ಹೆಸರಾಂತ ಜರ್ಮನ್ ಶಸ್ತ್ರ ವೈದ್ಯರೊಬ್ಬರು ಬೆಳಕಿನ ಕಿರಣವನ್ನು ನೇರವಾಗಿ ಕಣ್ಣಿನೊಳಗಡೆ ತೂರಿಸುವಂತಹ ಸಲಕರಣೆಯೊಂದನ್ನು ಬಳಸುವುದನ್ನು ತಾವೆಂದು ಯೋಚಿಸಲಾರರೆಂದು ಉದ್ಗಾರವೆತ್ತಿದರಂತೆ. ಅದೀಗ ನೇತ್ರತಜ್ಞರ ಅತ್ಯುಪಯುಕ್ತ ಸಾಧನವಾಗಿರುವುದನ್ನು ನೋಡಬಹುದು.

ಇಂತಹ ಹಿನ್ನೆಲೆಯಲ್ಲಿ ವೈದ್ಯ ವಿಜ್ಞಾನ ಶಾಖೆಯಲ್ಲಿ ಮಿಣಜೀವಿಶಾಸ್ತ್ರ 1870ರಲ್ಲಿ ಉದಯಿಸಿ,ಅದರಿಂದ ವ್ಯಾಕ್ಸೀನ್/ಲಸಿಕೆಗಳು ಬಳಕೆ ಬಂದಾಗಿನ ಪ್ರತಿಕ್ರಿಯೆಗಳನ್ನು ಊಹಿಸಬಹುದು. ಅವು ಸಹಾ ವೈದ್ಯ ಸಮೂಹದವರ ದೂಷಣೆ ಮತ್ತು ಅಪಹಾಸ್ಯಗಳಿಗೆ ಗುರಿಯಾದುದು ಅಚ್ಚರಿಯೇನಲ್ಲ. ಲೂಯಿಪ್ಯಾಶ್ಚರ್‌ರಂಥ ಮಹಾನ್ ವಿಜ್ಞಾನಿ 1881ರಲ್ಲಿ ಲಂಡನ್ನಿನಲ್ಲಿ ಜರುಗಿದ ವಿಜ್ಞಾನ ಸಮ್ಮೇಳನದಲ್ಲಿ ಸಾಂಕ್ರಾಮಿಕ ರೋಗಗಳನ್ನು ನಿರೋಧಿಸಲು ವ್ಯಾಕ್ಸಿನೇಷನ್ ವಿಧಾನವನ್ನು ಪ್ರಸ್ತಾಪಿಸಿದರು. ಮತ್ತೊಬ್ಬ ಖ್ಯಾತ ವಿಜ್ಞಾನಿ ರಾಬರ್ಟ್ ಕಾಖ್‌ರವರಿಂದಲೇ ಅವರು ಅಪಹಾಸ್ಯಕೀಡಾಗಬೇಕಾಯಿತು. ಆ ವಿಧಾನ ತುಂಬಾ ಒಳ್ಳೆಯದೆನ್ನಬಹುದಾದರೂ ಸಾಧ್ಯವಾಗುವಂತಹದಲ್ಲ ಎಂದು ತಮ್ಮ ವಿರೋಧವನ್ನು ವ್ಯಕ್ತಪಡಿಸಿದರಂತೆ. ಅವರು ಹೇಳಿದ Too good to be true ಎಂಬ ಪದಗಳ ಸಮುಚ್ಚಯ ವಾಕ್ಸಿನೇಷನ್ ವಿರೋಧಿಗುಂಪಿನವರ ಧ್ಯೇಯ ಸಾರುವ ಘೋಷಣೆಯೇ ಆಯಿತು.

ಶತಶತಮಾನಗಳಿಂದ ಚಿಕಿತ್ಸೆ ಮಾಡಲಾಗದಿದ್ದ ನೂರಾರು ಸಾಂಕ್ರಾಮಿಕ ರೋಗಗಳನ್ನು ಮುಂದೆ ಪ್ಯಾಶ್ಚರ್‌ರ ವ್ಯಾಕ್ಸಿನೇಷನ್ ವಿಧಾನಗಳಿಂದ ಹತೋಟಿಗೆ ತರಲು ಸಾಧ್ಯವಾದಾಗ ರಾಬರ್ಟ್ ಕಾಖ್‌ರ ಪರಿಹಾಸ್ಯದ ಮಾತುಗಳೇ ಅಕ್ಷರಶಃ Too good to be true ಆದದ್ದೂ ಈಗಇತಿಹಾಸವಾಗಿದೆ. ಈ ರೀತಿಯ ಸಂದೇಹಕರ ಅಪಸ್ವರ

ವೆತ್ತುತ್ತಿದ್ದ ಕಾಖ್‌ರ ವಿರುದ್ಧವೇ ವೈದ್ಯ ಸಮೂಹ ತಿರುಗಿಬೀಳುವಂಥ ಪರಿಸ್ಥಿತಿಯೂ ಉಂಟಾಗಿತ್ತು. ಮುಂದಿನ ವರ್ಷಗಳಲ್ಲಿ ಮಿಣಜೀವಶಾಸ್ತ್ರ ವಿಜ್ಞಾನ ಸಾಕಷ್ಟು ಅಡೆತಡೆಗಳ ನಡುವೆಯೂ ಪ್ರಗತಿ ಸಾಧಿಸಿತು. ಲೂಯಿಪ್ಯಾಶ್ಚರ್ ನೆರಡಿರೋಗದ ವಿರುದ್ಧ ಯಶಸ್ವಿಯಾದ ವ್ಯಾಕ್ಸಿನೇಷನ್ ವಿಧಾನವನ್ನು ಜಾರಿಗೆ ತಂದರು. ಶತಮಾನಗಳಿಂದ ವೈದ್ಯ ಸಮೂಹದವರು ಚಿಕಿತ್ಸೆಗೊಳಪಡಿಸಲಾಗದ ಸಾಂಕ್ರಾಮಿಕ ರೋಗಗಳ ಹತೋಟಿಗೆ ಅದು Too good to be true ಆಗಿಯೇಬಿಟ್ಟಿತು. ಕಾಖ್‌ರ ಸಂದೇಹಾತ್ಮಕ ಹಾಗೂ ಅಪಹಾಸ್ಯದ ಮಾತುಗಳು ಪ್ರಪಂಚದಾದ್ಯಂತ ನಗೆಪಾಟಲಿಗೀಡಾದವು. ರಾಬರ್ಟ್‌ಕಾಖ್‌ರು ನೆರಡಿರೋಗ, ಕ್ಷಯರೋಗ ಮತ್ತು ಕಾಲರಾದ ಬ್ಯಾಸಿಲೈಗಳನ್ನು ವಿಜ್ಞಾನ ಲೋಕಕ್ಕೆ ಪ್ರದರ್ಶಿಸಿದ ನಂತರವೂ ಅವುಗಳ ಬಗೆಗೆ ವ್ಯಂಗ್ಯವಾಗಿ ಮಾತಾಡುವವರಿಗೇನೂ ಅಭಾವವಿರಲಿಲ್ಲ. ಪ್ಯಾರಿಸ್‌ನ ಖ್ಯಾತ ವೈದ್ಯರೆನಿಸಿದ್ದ ಡಾ॥ ಪೀಟರ್‌ಎಂಬವರು ಪ್ಯಾರಿಸ್ ಮೆಡಿಕಲ್ ಸೊಸೈಟಿಯ ಸಭೆಯೊಂದರಲ್ಲಿ ಮಾತನಾಡುತ್ತಾ ''ಪ್ರಕೃತಿ ವಿಜ್ಞಾನದಲ್ಲಿ ಸೂಕ್ಷ್ಮ ಜೀವಾಣುಗಳು ಕೌತುಕ ಹುಟ್ಟಿಸುವಂಥ ಚಿತ್ತಾಕರ್ಷಕ ವಸ್ತುಗಳಾಗಿ ಕಾಣಿಸಬಹುದು; ಆದರೆ ವೈದ್ಯಕೀಯ ರಂಗದಲ್ಲಿ ಅವುಗಳಿಗೆ ಯಾವುದೇ ವ್ಯಾವಹಾರಿಕ ಪ್ರಾಮುಖ್ಯತೆ ದೊರೆಯುವುದಿಲ್ಲ'' ಎಂದು ಕಟುವಾಗಿ ಟೀಕಿಸಿದ್ದರಂತೆ.

ಸಹೋದ್ಯೋಗಿ ವೈದ್ಯರನೇಕರು ವೈದ್ಯ ವಿಜ್ಞಾನದ ಸೀಮಾ ರೇಖೆ ವಿಸ್ತರಿಸುವಲ್ಲಿ ಯಶಸ್ವಿಯಾಗುತ್ತಿದ್ದರೂ, ಅನುಮಾನ ಪ್ರವೃತ್ತಿಯ ಕೆಲವು ವೈದ್ಯರು ಅವನ್ನು ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲವೆಂಬುದು ಸಹ ಗಮನಾರ್ಹ. ಪ್ರೊ:ಮೆಕ್ನಿಕೋವ್ ಪ್ರತಿಪಾದಿಸಿದ ಬಿಳಿರಕ್ತ ಕಣಗಳ ''ತಿನೀಕಣತೆ''ಯ ಸಿದ್ಧಾಂತವನ್ನು ವೈದ್ಯ ಸಮುದಾಯ ಒಪ್ಪಿಕೊಳ್ಳಲು ಇಪ್ಪತ್ತು ವರ್ಷಗಳೇಬೇಕಾದವು. ಕಾರ್ಲ್‌ಲ್ಯಾಂಡ್‌ಸ್ಟೀನರ್ ಕೆಂಪು ರಕ್ತಕಣಗಳನ್ನು ಹಲವು ಗುಂಪುಗಳಾಗಿ ವಿಂಗಡಿಸಬಹುದೆಂದು ಪ್ರತಿಪಾದಿಸಿದ ತತ್ವಗಳನ್ನು ಸಮಕಾಲೀನ ವೈದ್ಯರು ಬಹಳ ಸಮಯ ನಂಬಲಾಗದ್ದೆಂದು ಪರಿಗಣಿಸಿದ್ದರು. ಮುಂದಿನ ಕೆಲವೇ ವರ್ಷಗಳಲ್ಲಿ ವೂರ್ಚ್‌ಬರ್ಗ್‌ನಲ್ಲಿ ರಾಂಜೆನ್ ಎಕ್ಸ್‌ರೇಗಳನ್ನು ಪ್ರದರ್ಶಿಸಿದಾಗ ಅವರ ಸಹೋದ್ಯೋಗಿ ವೈದ್ಯ ಪ್ರಾಧ್ಯಾಪಕರೊಬ್ಬರು ತಮ್ಮ ಹಸ್ತದ ಮೂಳೆಗಳನ್ನು ತಾನೇ ಕಣ್ಣಾರೆ ನೋಡಿಕೊಂಡೆನೆಂದು ಹೇಳುವ ಮೊದಲೇ ತಲೆಕೆಟ್ಟಂತಿದ್ದ ಅವನಿಗೀಗ ಪೂರ್ತಿ ಹುಚ್ಚು ಸಿಡಿದಿದೆ ಎಂದು ಗೇಲಿ ಮಾಡಿದರಂಥೆ! ವೈದ್ಯ ವಿಜ್ಞಾನದ ಇತಿಹಾಸದಲ್ಲಿ ಇಂತಹ ನಿದರ್ಶನಗಳು ಯಥೇಚ್ಛವಾಗಿವೆ.

ಯುವ ವಿಜ್ಞಾನಿ ವ್ಲಾದಿಮಿರ್ ಹಾಫ್‌ಕಿನ್ನರು ತಮ್ಮ ಸಂಶೋಧನೆಯ ಮಹತ್ವವನ್ನು ಸಾದರಪಡಿಸಲು ಎಷ್ಟೆಲ್ಲಾ ಅಡೆತಡೆಗಳನ್ನು ಎದುರಿಸಬೇಕಾಯಿತು ಎಂಬುದನ್ನು ಮನದಟ್ಟುಮಾಡಲು ಇಷ್ಟೆಲ್ಲಾ ಪುರಾಣಗಳ ಪ್ರವಚನ ಮಾಡಬೇಕಾಯಿತು. ಬಹುಶಃ ಮುಂದೆ ಬರುವ ವಿವರಣೆಗಳು ಸಹಾ ಈ ಪೀಠಿಕೆಯ ಅನಿವಾರ್ಯತೆಯನ್ನು ಸಾದರ ಪಡಿಸಬಹುದು.

## ಲಂಡನ್

ಅದೊಂದು ತುಂಬಾ ಉತ್ತೇಜನಕರ ಘಟನೆ ಹಾಗೂ ಅಸಾಧಾರಣ ಏಟು-ಎದಿರೇಟುಗಳ ಸಾಧ್ಯತೆಯ ಶರತ್ಕಾಲವಾಗಿತ್ತು. ಲೂಯಿಪ್ಯಾಶ್ಚರ್ 1892ರ ನವೆಂಬರ್ 20ರಂದು ಇಂಗ್ಲೆಂಡಿನ ತಮ್ಮ ಸ್ನೇಹಿತ ಪ್ರೊ:ಗ್ರಾನ್‌ಚರ್‌ಗೆ ಹಾಫ್‌ಕಿನ್ನರನ್ನು ಪರಿಚಯಿಸುವ ಸಲುವಾಗಿ ಪತ್ರವೊಂದನ್ನು ಬರೆದರು. ''ನನ್ನ ಪ್ರಯೋಗಾಲಯದ ಯುವ ವಿಜ್ಞಾನಿ ವ್ಲಾದಿಮಿರ್ ಹಾಫ್‌ಕಿನ್ ಕಳೆದ ಎಂಟು ದಿನಗಳಿಂದ ಲಂಡನ್ನಿನಲ್ಲಿ ಇದ್ದಾರೆ. ಅವರು ಕಲ್ಕತ್ತಾಕ್ಕೆ ಪ್ರಯಾಣ ಮಾಡುವುದಕ್ಕೆ ಬ್ರಿಟಿಷ್ ಅಧಿಕಾರಿಗಳ ಪರವಾನಿಗಿ ಪಡೆಯಲು ಪ್ರಯತ್ನಿಸುತ್ತಿದ್ದಾರೆ; ಕಲ್ಕತ್ತಾದಲ್ಲಿ ಅವರು ಕಾಲರಾ ವಿರುದ್ಧದ ವ್ಯಾಕ್ಸೀನಿನ ಪ್ರಯೋಗ ಮಾಡುವ ಯೋಜನೆ ಇಟ್ಟುಕೊಂಡಿದ್ದಾರೆ; ಆ ಪ್ರಯೋಗವನ್ನು ಅವರು ಮೊದಲು ಸಯಾಮ್ ರಾಜ್ಯದಲ್ಲಿ ಕೈಗೊಳ್ಳುವ ಅಂದಾಜು ಇಟ್ಟುಕೊಂಡಿದ್ದರು. ಕೊಚಿನ್-ಚೀನಾದಲ್ಲಿ ಫ್ರೆಂಚ್ ರಾಯಭಾರಿಯಾಗಿರುವ ಎಂ.ಹರ್ಮಾಂಡ್‌ರು ಅಲ್ಲಿ ಅಂತಹ ವ್ಯಾಕ್ಸಿನೇಷನ್ ಪ್ರಯೋಗ ನಡೆಸಲು ಸ್ಥಳೀಯರಿಂದ ಸಹಿಸಲಾಗದ ಅಡೆತಡೆಗಳನ್ನು ಎದುರಿಸಬೇಕಾಗಬಹುದು ಎಂಬ ಹಿತವಚನ ನೀಡಿದ್ದರು. ಆದರೆ ಭಾರತದಲ್ಲಿ ಅಂತಹ ಕಷ್ಟಗಳು ಎದುರಾಗಲಾರವು. ಅಲ್ಲದೆ ಹರ್ಮಾಂಡರು ಹಾಫ್‌ಕಿನ್ನರ ಪರವಾಗಿ ಲಾರ್ಡ್ ಡಫರಿನ್‌ರಿಗೆ ಪತ್ರವೊಂದನ್ನು ಕೊಟ್ಟಿದ್ದಾರೆ. ಡಫ಼ರಿನ್ನರು ಆ ಪತ್ರವನ್ನು ಲಂಡನ್ನಿನಲ್ಲಿರುವ ತಮ್ಮ ಸ್ನೇಹಿತರಿಗೆ ಶಿಫಾರಸ್ಸು ಮಾಡಿದ್ದಾರೆ''ಎಂದು ಸುಧೀರ್ಘಪತ್ರವನ್ನು ಬರೆದಿದ್ದರು.

ಕಾಲರಾ ವ್ಯಾಕ್ಸೀನಿನ ಲಭ್ಯತೆಯ ಸಮಾಚಾರ ಅದಾಗಲೇ ಲಂಡನ್ನಿಗೆ ತಲುಪಿತ್ತು; ಜೊತೆಗೆ ಪ್ಯಾರಿಸ್ಸಿನ ಹೆಸರಾಂತ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನೊಡನೆ ಅವರಿಗಿದ್ದ ನಿಟಕ ಸಂಬಂಧ ಸಹ ಹಾಫ್‌ಕಿನ್ನರಲ್ಲಿ ಒಳ್ಳೆಯ ಭಾವನೆಯುಂಟುಮಾಡಲು ಕಾರಣವಾಯಿತು. ಹಾಫ್‌ಕಿನ್ನರಿಗೆ ಅಲ್ಲಿ ಆದರದ ಸ್ವಾಗತವೇ ದೊರೆಯಿತು.

ಪ್ಯಾರಿಸ್‌ನಲ್ಲಿ ಬ್ರಿಟಿಷ್ ರಾಯಭಾರಿಯಾಗಿದ್ದ ಲಾರ್ಡ್ ಡಫರಿನ್(ಹಿಂದೆ ಇಂಗ್ಲೆಂಡ್‌ನಲ್ಲಿ ಭಾರತಕ್ಕೆ ಸಂಬಂಧಿಸಿದ ಇಲಾಖೆಯ ಅಧೀನ ಕಾರ್ಯದರ್ಶಿಯಾಗಿದ್ದವರು) ರಿಗೆ ಮಿಣಿಜೀವಶಾಸ್ತ್ರದ ಕ್ಷೇತ್ರದಲ್ಲಾದ ಈ ಮಹತ್ಸಾಧನೆಯನ್ನು ತಮ್ಮ ರಾಷ್ಟ್ರದ ವಸಾಹತಾಗಿದ್ದ ಭಾರತದಲ್ಲಿ ಪ್ರಯೋಗಿಸಿ ಚಕ್ರಾಧಿಪತ್ಯಕ್ಕೆ ಒಳ್ಳೆಯ ಹೆಸರುಂಟು ಮಾಡುವ ಮನಸ್ಸಾಗಿರಬೇಕು. ಅವು ಬ್ರಿಟನಿನ್ನ ವಿದೇಶಾಂಗ ಮಂತ್ರಿಲಾರ್ಡ್ ರೋಸ್‌ಬೆರಿಯವರಿಗೆ ಆ ಬಗೆಗೆ ಶಿಫಾರಸ್ಸು ಮಾಡಿ ಪತ್ರ ಬರೆದರು. ಅಂದಿನಿಂದ ಹಾಫ್‌ಕಿನ್ನರಿಗೆ ಪತ್ರಗಳ ಪ್ರವಾಹವೇ ಹರಿದಂತಾಯಿತು. ಈ ಪ್ರತಿಗಳು ಹಾಫ್‌ಕಿನ್ನರ ಗಂಟುಮೂಟೆಗಳನ್ನು ಸೇರಿ ಲಂಡನನ್ನು ಸೇರಿದವು. ಅವುಗಳನ್ನು ಪರಿಶೀಲಿಸಿದ ಭಾರತ ಸರ್ಕಾರದ ವಿಷಯಗಳ ಮುಖ್ಯ ಕಾರ್ಯದರ್ಶಿಗಳಿಗೆ ಪತ್ರ ಬರೆದರು. ಕಾರ್ಯ ದರ್ಶಿಗಳು ಭಾರತದ ಗೌರ್ವನರ್ ಜನರಲ್ ಮತ್ತು ಭಾರತದಲ್ಲಿನ ಸೇನಾ ಪಡೆಗಳ ಸರ್ಜನ್ ಜನರಲ್‌ಗೆ

ಕಾಗದ ಬರೆದರು. ಈ ಸದ್ಗೃಹಸ್ಥರೆಲ್ಲಾ ತಮ್ಮ ಮೊಲಗಳು ಮತ್ತು ಪ್ರನಾಳಗಳೊಡನೆ ಇನ್ನೇನು ಭಾರತದತ್ತ ಪ್ರಯಾಣ ಮಾಡಲು ಸಹಕರಿಸುವರೆಂಬ ಆಶಾಭಾವನೆ ಹಾಫ್‌ಕಿನ್ನರಲ್ಲಿ ಉಂಟಾಯಿತು.

ಇಷ್ಟೆಲ್ಲಾ ಆಶಯ ಹೊಂದಿದ್ದ ಈ ಮಹಾನುಭಾವರೆಲ್ಲರಿಗೂ ಈ ಯುವ ವಿಜ್ಞಾನಿ ಮುಂದೆ ಎದುರಿಸಬೇಕಾದ ಕಷ್ಟ ಕೋಟಲೆಗಳ ಬಗೆಗೆ ಅರಿವಿದ್ದಂತಿರಲಿಲ್ಲ. ಕಳೆದ ಹದಿಮೂರು ವರ್ಷಗಳ (1877-1890) ಅವಧಿಯಲ್ಲಿ ಭಾರತದ ಬಂಗಾಳ ಪ್ರಾಂತ್ಯದಲ್ಲಿ ಕಾಲರಾ ವ್ಯಾಧಿ ಸುಮಾರು ಹತ್ತು ಲಕ್ಷ ಜನರನ್ನು ಬಲಿ ತೆಗೆದುಕೊಂಡಿದ್ದು ಹಾಫ್‌ಕಿನ್ನರಿಗೆ ತಿಳಿಯದ ವಿಷಯವೇನೂ ಆಗಿರಲಿಲ್ಲ. ಆ ವ್ಯಾಧಿ ತಗುಲಿದ ಇಬ್ಬರಲ್ಲಿ ಒಬ್ಬನು ಸಾಯುವುದು ನಿಶ್ಚಿತವಾಗಿತ್ತು. ಕ್ರೂರ ವ್ಯಾಘ್ರದ ಗುಹೆಯನ್ನು ನಿರಾಯುಧವಾಗಿ ಹಾಫ್‌ಕಿನ್ ನುಗ್ಗುವ ಹುಚ್ಚು ಸಾಹಸ ಮಾಡುವುದರಲ್ಲಿದ್ದರೆಂದೇ ಹೇಳಬಹುದು.

ಇಷ್ಟೆಲ್ಲಾ ಜರುಗುತ್ತಿರುವಾಗ ಇಂಗ್ಲೆಂಡಿನಿಂದ ಭಾರತಕ್ಕೆ ಪ್ರಯಾಣಮಾಡಲು ಅನುಮತಿ ದೊರೆಯಲಾರದೆಂಬ ಅನುಮಾನ ಹಾಫ್‌ಕಿನ್ನರ ಅಂತರ್ಯದಲ್ಲಿ ಇದ್ದಿತು. ಹಿಂದೆ ಎರಡು ಸಾರಿ ಇಂತಹದೇ ಸಂದರ್ಭಗಳಲ್ಲಿ ಅನುಮತಿ ದೊರೆಯದಿದ್ದುದರ ಅನುಭವವೂ ಇತ್ತಷ್ಟೆ. ಲೂಯಿಪ್ಯಾಶ್ಚರ್ ಮತ್ತು ಪ್ರೊ:ರೂ ಅಂತಹ ಮಹಾನ್ ವಿಜ್ಞಾನಿಗಳ ಶಿಫಾರಸ್ಸುಗಳ ಪತ್ರ, ರಷ್ಯಾದಲ್ಲಿ ಅತ್ಯುಗ್ರವಾಗಿ ಹರಡುತ್ತಿರುವ ಕಾಲರಾ ಸಾಂಕ್ರಾಮಿಕದ ದಾರುಣ ಪರಿಸ್ಥಿತಿ ಹಾಗೂ ಪ್ಯಾರಿಸ್ ನಗರದ ಹೊರವಲಯದಲ್ಲೇ ಕಾಲರಾ ಅತ್ಯಂತ ರೇಜಿನಿಂದ ಹರಡುತ್ತಿದ್ದರೂ ಅವರ ವ್ಯಾಕ್ಸೀನಿನ ಪ್ರಯೋಗಕ್ಕೆ ಎಲ್ಲಿಯೂ ಅನುಮತಿ ದೊರೆಯದಿದ್ದುದು ಹಾಫ್‌ಕಿನ್ನರಲ್ಲಿ ಅತೀವ ಖಿನ್ನತೆಯ ಮನೋಭಾವ ಉಂಟಾಗ ತೊಡಗಿತ್ತು; ಪ್ಯಾರಿಸ್ ಪುರಸಭೆಯವರು ವ್ಯಾಕ್ಸೀನ್ ಪ್ರಯೋಗಕ್ಕೆ ಅನುಮತಿ ನಿರಾಕರಿಸಿದ್ದೇ ಅಲ್ಲದೆ, ಅಲ್ಲಿ ಉಂಟಾಗುತ್ತಿದ್ದ ಸಾವು ನೋವಿನ ಬಗೆಗಿನ ಅಂಕಿಸಂಖ್ಯೆಗಳನ್ನು ಬಚ್ಚಿಡುವ ಪ್ರಯತ್ನ ಮಾಡುತ್ತಿದ್ದರು! ನಗರದಲ್ಲಿ ಕಾಲರಾದ ಹಾವಳಿಯಿದೆಯೆಂಬ ಸುದ್ದಿ ಹರಡಿದರೆ ಅಲ್ಲಿಯ ವ್ಯಾಪಾರ ವಹಿವಾಟುಗಳು ಮತ್ತು ಪ್ರವಾಸೋದ್ಯಮಕ್ಕೆ ಧಕ್ಕೆಯುಂಟಾಗ ಬಹುದೆಂಬ ಗಾಬರಿ ಅವರಿಗಿತ್ತಂತೆ. ಎರಡು ಸಾರಿಯ ಇಂತಹ ಪರಿಸ್ಥಿತಿಗಳಲ್ಲಿ ಸ್ಪೆಯಿನ್‌ನ ಫೆರಾನ್‌ನ ವಿಫಲತೆಯನ್ನೇ ಮುಂದೂಡಿದ್ದರು. ಎರಡೂ ಕಡೆಗಳಿಂದ ನಕಾರಾತ್ಮಕ ಪ್ರತಿಕ್ರಿಯೆ ಬಂದಿದ್ದರಿಂದಲೇ ಅವರು ಇಂಡೋಚೀನಾದ ಸಯಾಮ್‌ಗೆ ಹೋಗಲು ಅನುಮತಿಗೆ ಬರೆದುಕೊಂಡಿದ್ದುದು; ಅಲ್ಲಿನ ಫ್ರೆಂಚ್ ರೆಸಿಡೆಂಟ್ ಸಚಿವರಿಂದಲೂ ನಕಾರಾತ್ಮಕ ಉತ್ತರವೇ ಅವರಿಗೆ ದೊರೆತದ್ದು.

ಕಾಲರಾ ಸಾಂಕ್ರಮಿಕವು ಆಗಸ್ಟ್ ತಿಂಗಳ ಅಂತಿಮ ಭಾಗದಲ್ಲಿ ಹ್ಯಾಮ್‌ಬರ್ಗ್ ನಗರದ ನಿವಾಸಿಗಳನ್ನು ಅತ್ಯುಗ್ರತೆಯಿಂದ ಕಾಡತೊಡಗಿತು; ಮೊದಲನೇ ವಾರದಲ್ಲಿ ಐದುನೂರು ಜನ ಪ್ರಾಣಕಳೆದುಕೊಂಡಿದ್ದರು.

ನಂತರದ ದಿನಗಳಲ್ಲಿ ವಾರವಾರವೂ ಸಾವಿರಗಟ್ಟಲೇ ಜನಸಾಯುತ್ತಲೇ ಇದ್ದರು. ಹೊರಗಿನ ಊರುಗಳಿಂದ ಬರುವ ಜನರನ್ನು ತಡೆಯಲು ಹಡಗುಕಟ್ಟೆಯನ್ನೇ ಮುಚ್ಚಿದರು;

ಚರ್ಚು, ಅಂಗಡಿ ಮುಂಗಟ್ಟುಗಳಲ್ಲಿ ಜನರು ಸೇರದಂತೆ ನಿರ್ಬಂಧ ವಿಧಿಸಿದರು. ಕೆಲವೇ ದಿನಗಳ ಹಿಂದೆ ಹಾಫ್‌ಕಿನ್ ಮತ್ತು ಸಂಗಡಿಗರು ಜೀವನದ ಹಂಗು ತೊರೆದ ಕಾಲರಾ ವ್ಯಾಕ್ಸೀನನ್ನು ತಮ್ಮ ಮೇಲೆಯೇ ಪ್ರಯೋಗಿಸಿಕೊಂಡಾಗ ಅವರ ವ್ಯಾಕ್ಸೀನಿನ ವಿರುದ್ಧ ಜನರಲ್ಲಿದ್ದ ದುರಭಿಪ್ರಾಯ ಮಾಯವಾಗುತ್ತದೆಂಬ ಆಶಾಭಾವನೆ ತಳೆದಿದ್ದರು. ಆದರೂ ಯುರೋಪಿನ ಮೂರು ರಾಷ್ಟ್ರಗಳಲ್ಲಿ ಕಾಲರಾದಿಂದ ಸಹಸ್ರ ಸಹಸ್ರ ಸಂಖ್ಯೆಯ ಜನ ಸಾಯುತ್ತಿದ್ದರೂ, ಜನರ ರಕ್ಷಣೆಯ ಹೊಣೆ ಹೊತ್ತವರು ತಮ್ಮ ಹಠಮಾರಿತನವನ್ನು ಬಿಡಲು ತಯಾರಿರಲಿಲ್ಲ; ವೈದ್ಯ ಸಮುದಾಯದವರೂ ಸಹಾ ದುರಾಗ್ರಹದಿಂದ ಹಾಫ್‌ಕಿನ್ನರ ವಿಧಾನವನ್ನು ಅಂಗೀಕರಿಸದಿದ್ದುದು ಅವರ ಮನಸ್ಸಿನಲ್ಲಿ ತೀವ್ರ ಅಸಮಾಧಾನ ಉಂಟು ಮಾಡಿತ್ತು.

ಕಾಲರಾ ವ್ಯಾಧಿ ಉದ್ಭವಿಸುವ ಹಾಗೂ ಹರಡುವ ಬಗೆಗೆ ಸಾಕಷ್ಟು ಪುರಾವೆಗಳು ದೊರೆತ ಮೇಲೂ ಆ ಸಮಯದಲ್ಲಿ ಬಹುಪಾಲು ಮಿಣಜೀವಿ ಶಾಸ್ತ್ರಜ್ಞರಲ್ಲಿ ಕೂಡ ಆ ವ್ಯಾಧಿಗೆ ನಿಶ್ಚಿತವಾದ ಮಿಣಜೀವಿಗಳು ಕಾರಣವೆನ್ನುವ ಹಾಗೂಅದು ಹರಡುವ ಬಗೆಗಿನ ಸಿದ್ಧಾಂತಗಳ ಬಗೆಗೆ ಒಮ್ಮತದ ಅಭಿಪ್ರಾಯವಿರದಿದ್ದುದು ಹಾಫ್‌ಕಿನ್ನರ ಆತಂಕಕ್ಕೆ ಕಾರಣವಾಗಿತ್ತು. ರೋಗಿಗಳು ಬಳಸುತ್ತಿದ್ದ ನೀರಿನಲ್ಲಿರುವ ಕಾಮಾಬ್ಯಾಸಿಲೈಗಳೇ ರೋಗ ತಗುಲಿದವರ ದೇಹದಲ್ಲಿ ಕಂಡುಬರುವುದೇ ಕಾರಣವೆಂಬ ರಾಬರ್ಟ್‌ಕಾಖ್‌ರ ಸರಳ ಸಿದ್ಧಾಂತವೂ ಸಹ ಎಲ್ಲ ಸ್ತರದವರ ದೂಷಣೆಗೊಳಪಟ್ಟಿತ್ತೆಂದರೆ ಆ ಕಾಲರಾದ ಬಗೆಗೆ ಇದ್ದ ಗೊಂದಲಮಯ ವಾತಾವರಣದ ಅರಿವಾಗಬಹುದು. ವಿಯನ್ನಾದ ವಾಸ್‌ಪೆಟ್ಟೆನ್ ಕೋಫರ್ ಕಾಮ ಬ್ಯಾಸಿಲೈಗಳು ನೇರವಾಗಿ ಕಾಲರಾ ವ್ಯಾಧಿಯನ್ನುಂಟು ಮಾಡುವುದು ಸಾಧ್ಯವಿಲ್ಲ; ಅವು ಮೊದಲು ಮಣ್ಣಿನಲ್ಲಿ ಸೇರಿ ''ಪಕ್ವ''ವಾಗಬೇಕು(Mature )ನಂತರ ಅಂತಹ ಮಣ್ಣು ರೋಗವಾಹಕವಾಗುತ್ತದೆ. ಆದುದರಿಂದ ಪರಿಸರವನ್ನು ನಿರ್ಮಲಗೊಳಿ ಸುವುದರಿಂದ ಮಾತ್ರ ಕಾಲರಾ ಸಾಂಕ್ರಾಮಿಕವನ್ನು ತಡೆಗಟ್ಟಲು ಸಾಧ್ಯವೆಂಬ ವಾದವನ್ನು ಮಂಡಿಸಿದ್ದರು.

ಅಚ್ಚರಿಯ ಸಂಗತಿಯೆಂದರೆ ಕಾಖ್‌ರ ಸಿದ್ಧಾಂತಗಳ ಬಗೆಗೆ ಪ್ರೊ:ಮೆಕ್ನಿಕೋವ್‌ರೂ ಸಹ ಅನುಮಾನ ವ್ಯಕ್ತಪಡಿಸಿದ್ದರು. ಅವರು ಹಲವು ಕಡೆಗಳಿಂದ ಕಾಲರಾ ಬ್ಯಾಸಿಲೈಗಳ ''ಬೆಳೆ''ಗಳನ್ನು ತರಿಸಿಕೊಂಡು ಪ್ರಯೋಗ ಪಶುಗಳಲ್ಲಿ ಸೋಂಕನ್ನುಂಟು ಮಾಡಲು ಪ್ರಯತ್ನಿಸಿದ್ದರು. ಆದರೆ ಅವುಗಳಿಗೆ ಸೋಂಕು ತಗುಲಲೇ ಇಲ್ಲ. ಸ್ವತಃ ಮೆಕ್ನಿಕೋವ್ ಮತ್ತು ಅವರ ಸಹೋದ್ಯೋಗಿಗಳೇ ಕಾಲರಾ ರೋಗಾಣುಗಳಿರುವ ಮಿಶ್ರಣಗಳನ್ನು ಹಲವುಸಾರಿ ನುಂಗಿದ್ದರು. ಅವರಾರಲ್ಲೂ ಕಾಲರಾದ ಲಕ್ಷಣಗಳು ಪ್ರಕಟವಾಗಲೇ ಇಲ್ಲ. ಅದರಿಂದ ಪರಿಶುದ್ಧ ಸ್ಥಿತಿಯಲ್ಲಿರಬಹುದಾದ ಕಾಮಾಬ್ಯಾಸಿಲೈಗಳಲ್ಲಿ ಸೋಂಕುಂಟುಮಾಡುವಷ್ಟು ವಿಷಮತೆಯನ್ನು ಹೊಂದಿರುವುದಿಲ್ಲವೆಂಬುದು ಅವರ ಅಭಿಮತವಾಗಿತ್ತು; ಅಲ್ಲದೆ ಅವು ಮನುಷ್ಯ ಅಥವಾ ಪ್ರಾಣಿಗಳಲ್ಲಿ ಕಾಲರಾ ಸೋಂಕನ್ನುಂಟು ಮಾಡಲು ಅವುಗಳ ಜೊತೆ

ಇನ್ನಾವುದೋ ಮಿಣಿ ಜೀವಿಗಳ ಸಹಯೋಗ ಇರಬೇಕಾಗುತ್ತದೆಂಬುದು ಅವರ ಇನ್ನೊಂದು ವಾದವಾಗಿತ್ತು. ಪ್ರೊ: ಮೆಕ್ನಿಕೋವರು ತಮ್ಮ ಮುಂಚಿನ ವಾದಗಳನ್ನು ರುಜುವಾತು ಮಾಡಲು ಹಲವು ಪ್ರಯೋಗಗಳನ್ನು ಬಹಳ ಸಮಯ ಜರುಗಿಸಿದರು. ಪ್ರಯೋಗಾಲಯದ ಕಾಲರಾ ಪೀಡಿತ ಪ್ರಾಣಿಗಳ ಕರುಳಿನಲ್ಲಿ ಕಾಲರಾ ಬ್ಯಾಸಿಲೈಗಳ ಜೊತೆ ಸಹಯೋಗಿಯಾಗಿರಬಹುದಾದ ಮಿಣಿಜೀವಿಗಳನ್ನು ಪ್ರದರ್ಶಿಸುವ ಅವರ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಅಂತಿಮವಾಗಿ ಅವೆಲ್ಲಾ ವಿಫಲವಾದ ಮೇಲೆ ಅವುಗಳಿಂದ ಆ ವ್ಯಾಧಿಯ ಬಗೆಗೆ ಬಹಳಷ್ಟು ತಿಳಿದುಕೊಳ್ಳಲು ಸಾಧ್ಯವಾದುದೊಂದೇ ತಮಗಾದ ಲಾಭವೆಂದು ಉದ್ಗರಿಸಿದರಂತೆ.

ತಮ್ಮ ಶಿಷ್ಯ ತಯಾರಿಸಿದ್ದ ವ್ಯಾಕ್ಸೀನ್ ಬಗೆಗೆ ಶುರುವಿನಲ್ಲಿ ಅದನ್ನು ಒಪ್ಪಿಕೊಂಡು ಸಂತಸ ವ್ಯಕ್ತಪಡಿಸಿದ್ದ ಪ್ರೊ:ಮೆಕ್ನಿಕೋವರೇ ಬರುಬರುತ್ತಾ ಅವರ ಸಿದ್ಧಾಂತಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದಾದರು. ಆ ದಿಸೆಯಲ್ಲಿ 1892-1894ರ ಅವಧಿಯಲ್ಲಿ ಕೆಲವು ಗಮನಾರ್ಹ ಸಂಶೋಧನೆಗಳನ್ನು ಜರುಗಿಸಿದರು. ಪರಿಣಾಮವಾಗಿ ಚರ್ಮದಡಿಯಲ್ಲಿ ನೀಡುವ ವ್ಯಾಕ್ಸೀನು ಕರುಳಿನೊಳಗಡೆ ಸೇರುವ ರೋಗಾಣುಗಳ ವಿರುದ್ಧ ರಕ್ಷಣೆ ನೀಡಲಾರದೆಂಬ ನಿರ್ಧಾರ ಅವರದಾಯಿತು. ವಿಪರ್ಯಾಸದ ಸಂಗತಿಯೆಂದರೆ ಆ ಕಾಲದ ಬಹುಪಾಲು ಶಿಷ್ಯವರ್ಗದವರೇ ಅವರ ಸಿದ್ಧಾಂತಗಳನ್ನು ಬೆಂಬಲಿಸಲು ತಯಾರಿರಲ್ಲಿ. ಅವರ ನೆಚ್ಚಿನ ಶಿಷ್ಯರಲ್ಲೊಬ್ಬರಾದ ಜಾಬೋಲೋಟ್ನಿ ಹಾಫ್‌ಕಿನ್ನರ ವ್ಯಾಕ್ಸೀನ್ ಸಿದ್ಧಾಂತವನ್ನು ಬೆಂಬಲಿಸಿ ಗುರುವಿಗೇ ಸವಾಲೆಸೆದಿದ್ದರು. ಆದಾಗ್ಯೂ ಅವರ ಶಿಷ್ಯ ಸಮೂಹದವರೆಲ್ಲರೂ ಆ ಸಿದ್ಧಾಂತಗಳು ಸರಿಯಾದುದಲ್ಲವೆಂದು ತಳ್ಳಿ ಹಾಕಲು, ಇಪ್ಪತ್ತು ವರ್ಷಗಳೇ ಬೇಕಾದವು. ಈ ದೃಶ್ಯಾವಳಿಗಳ ಕೊನೆಯ ಅಂಕಕ್ಕೆ ಪ್ರೊ:ಮೆಕ್ನಿಕೋವರಿಗೆ ನೋಬೆಲ್ ಪಾರಿತೋಷಕ ದೊರೆತಾಗ ಪರದೆ ಎಳೆದಂತಾಯಿತು. ಅವರಿಗೆ ರೋಗನಿರೋಧಕ ತತ್ವವನ್ನು ಯಶಸ್ವಿಯಾಗಿ ಪ್ರತಿಪಾದಿಸಿದ್ದಕ್ಕಾಗಿ 1908ರಲ್ಲಿ ಪಾರಿತೋಷಕ ಲಭಿಸಿತ್ತು. ಅವರ ಮಾತೃಭೂಮಿಯಾದ ರಷ್ಯಾದ ಸೆಯಿಂಟ್ ಪೀಟರ್ಸ್‌ಬರ್ಗ್‌ಗೆ ಆ ಸಲುವಾಗಿ ಸತ್ಕಾರ ಸಮಾರಂಭಗಳಿಗೆ ಆಗಮಿಸಿದ್ದರು. ರಷ್ಯಾದ ವೈದ್ಯ ಮತ್ತು ವಿಜ್ಞಾನ ಸಮುದಾಯದವರಿಂದ ಅವರಿಗೆ ಅತ್ಯದ್ಭುತ ಸ್ವಾಗತ ದೊರೆಯಿತು. ವಿವಿಧ ಸಂಘ ಸಂಸ್ಥೆಗಳು ಅವರನ್ನು ಸತ್ಕರಿಸಿ ಹಾಡಿಹೊಗಳಿದರು. ಆ ಸಂಭ್ರಮದ ವಾತಾವರಣದಲ್ಲೂ ಜಬೋಲೋಟ್ನಿ ಹಾಗೂ ಇತರ ಕೆಲವು ವಿಜ್ಞಾನಿಗಳು ಕಾಲರಾ ವ್ಯಾಕ್ಸೀನಿನ ಬಗೆಗೆ ಇದ್ದ ಜಿಜ್ಞಾಸೆಗಳನ್ನು ಚರ್ಚಿಸಲು ಸಭೆಯೊಂದನ್ನು ಏರ್ಪಡಿಸಿದ್ದರು. ಆ ದಿಸೆಯಲ್ಲಿ ರಷ್ಯಾದ ವಿಜ್ಞಾನಿಗಳು ವ್ಯಾಕ್ಸೀನಿನ ಉಪಯುಕ್ತತೆಯ ಬಗೆಗೆ ಕಲೆಹಾಕಿದ್ದ ಅಂಕಿಅಂಶಗಳ ಮಹಾಪೂರವೇ ಇತ್ತು; ಕಾಲರಾ ವಿರುದ್ಧ ವ್ಯಾಕ್ಸಿನೇಷನ್ ಮಾಡುವುದರಿಂದ ಆ ಸಾಂಕ್ರಮಿಕವನ್ನು ಹೇಗೆ ತಡೆಗಟ್ಟಬಹುದೆಂಬುದನ್ನು ಯಾವುದೇ ಅನುಮಾನಕ್ಕಾಸ್ಪದ ಕೊಡದೇ ರುಜವಾತು ಮಾಡಿ ತೋರಿಸಿದರು. ಹೀಗಾಗಿ ಪ್ರೊ:ಮೆಕ್ನಿಕೋವ್ ತಮ್ಮ ಸಿದ್ಧಾಂತವನ್ನು ಕೈಬಿಡಬೇಕಾದ ಪ್ರಸಂಗ ಒದಗಿಬಂದಿತು.

ಈ ಹಂತದಲ್ಲಿ ಹಾಫ್‌ಕಿನ್ನರ ಸಿದ್ಧಾಂತದ ಬಗೆಗೆ 1892ರಷ್ಟು ಹಿಂದೆಯೇ ಲೂಯಿಪ್ಯಾಶ್ಚರರು ಸಹಮತಿ ಇದ್ದವರಾಗಿರಲಿಲ್ಲವೆಂಬುದನ್ನು ಸ್ಮರಿಸಬಹುದು. ಪ್ಯಾಶ್ಚರ್ ಮೊದಲು ಹಾಫ್‌ಕಿನ್ನರ ವ್ಯಾಕ್ಸೀನಿನ ಸಿದ್ಧಾಂತವನ್ನು ಒಪ್ಪಿದ್ದಲ್ಲದೆ, ರಷ್ಯಾದಲ್ಲಿ ಪ್ರಯೋಗಿಸಲು ಶಿಫಾರಸ್ಸು ಮಾಡಿದ್ದರಷ್ಟೆ. ಬರುಬರುತ್ತಾ ಅವರೂ ವ್ಯಾಕ್ಸೀನಿನ ಸಫಲತೆಯ ಬಗೆಗೆ ಸ್ವಲ್ಪ ಮಟ್ಟಿನ ಅನುಮಾನ ವ್ಯಕ್ತಪಡಿಸುತ್ತಿದ್ದರಂತೆ. ಆ ಸಮಯದಲ್ಲೇ ಅವರು ಅಸ್ವಸ್ಥರಾಗಿದ್ದು ಸಂಶೋಧನಾಲಯಕ್ಕೆ ಬರಲಾಗುತ್ತಿರಲಿಲ್ಲವಾಗಿ, ಅಲ್ಲಿ ಜರುಗುವ ವಿಷಯಗಳ ಬಗೆಗೆ ಹೆಚ್ಚು ತಿಳಿದುಕೊಳ್ಳಲಾಗುತ್ತಿರಲಿಲ್ಲ. ಹಾಗಾಗಿ ಅವರ ಇಬ್ಬರು ಸಹೋದ್ಯೋಗಿಗಳಾದ ಮೆಕ್ನಿಕೋವ್ ಮತ್ತು ಹಾಫ್‌ಕಿನ್ನರ ಸಿದ್ಧಾಂತಗಳಲ್ಲಿ ಯಾವುದು ಸರಿಯಾದುದೆಂಬುದನ್ನು ಗ್ರಹಿಸಿಕೊಳ್ಳಲು ಆಗುತ್ತಿರಲಿಲ್ಲ. ಆದರೂ ಅವರ ಒಂದು ಪತ್ರದಲ್ಲಿ ಮೆಕ್ನಿಕೋವರ್ ಸಿದ್ಧಾಂತಗಳ ಬಗೆಗೆ ತಮ್ಮ ಒಲವು ತೋರಿಸಿದಿದ್ದರಲ್ಲದೆ, ತಮ್ಮ ಅಂದಿನ ಅಭಿಪ್ರಾಯ ಹಾಫ್‌ಕಿನ್‌ರನ್ನು ಚಕಿತಗೊಳಿಸಿಬಹುದೆಂದೂ ಭಾವಿಸಿದ್ದರಂತೆ. ಈ ವಿಷಯ ಅವರು ಲಂಡನ್ನಿಗೆ ತಲುಪಿದ ನಂತರ ತಿಳಿದುಬಂದಿತ್ತಂತೆ. ಪ್ಯಾಶ್ಚರ್‌ರ ಅಭಿಪ್ರಾಯ ಹಾಫ್‌ಕಿನ್ನರಲ್ಲಿ ಆಶ್ಚರ್ಯ ಮತ್ತು ವ್ಯಥೆಯುಂಟುಮಾಡಿತ್ತು.

ವ್ಲಾದಿಮಿರ್ ಹಾಫ್‌ಕಿನ್ ಪ್ರೊ:ಮೆಕ್ನಿಕೋವರನ್ನು ತಮ್ಮ ಗುರುವೆಂದೇ ಭಾವಿಸಿ ಅವರಲ್ಲಿ ತುಂಬಾ ಆದರ ಮತ್ತು ಗೌರವ ಭಾವನೆಗಳನ್ನಿರಿಸಿಕೊಂಡಿದ್ದವರು. ಆದರೆ ಕಾಲರಾ ವ್ಯಾಕ್ಸೀನಿನ ಬಗೆಗೆ ಅವರಿಬ್ಬರ ನಡುವೆ ಭಿನ್ನಾಭಿಪ್ರಾಯ ಉಂಟಾಗಿದ್ದು ತುಂಬಾ ಮುಜುಗರವನ್ನುಂಟುಮಾಡಿತ್ತು. ಸಾಕ್ರಿಟೇಸ್ ಒಂದು ಸಾರಿ ಹೇಳಿದಂತೆ 'ಪ್ಲೇಟೋ ನನ್ನ ಆತ್ಮೀಯ ಸ್ನೇಹಿತರೇನೋ ಹೌದು; ಆದರೆ ಸತ್ಯ ನನಗೆ ಅತ್ಯಮೂಲ್ಯವಾದುದು'' ಎಂಬ ಉಕ್ತಿ ಇಲ್ಲಿ ಹಾಫ್‌ಕಿನ್ನರ ಭಾವನೆಗಳನ್ನು ಪ್ರತಿಬಿಂಬಿಸುತ್ತಿತ್ತು.ಆ ಕಾಲದಿಂದಲೂ ಬಹಳಷ್ಟು ಶಿಷ್ಯರು ತಮ್ಮ ನೆಚ್ಚಿನ ಗುರುಗಳಿಗೆ ಸವಾಲೆಸೆಯುತ್ತಲೇ ಬಂದಿದ್ದಾರೆ.

ಮೂಲ ಒಡೆಸ್ಸಾ ನಿವಾಸಿಗಳಾದ ಅವರಿಬ್ಬರಲ್ಲಿ ಸರಿಸಮಾನವಾದ ಅನೇಕ ಭಾವನೆಗಳು ಬೆಸೆದುಕೊಂಡಿದ್ದವು;ಆದುದರಿಂದ ವೈಜ್ಞಾನಿಕ ವಿಷಯದ ಬಗೆಗೆ ಇದ್ದ ಭಿನ್ನಾಭಿಪ್ರಾಯ ಅವರ ನಡುವಿನ ಸ್ನೇಹಸಂಬಂಧ ತಣ್ಣಗಾಗಲು ಬಿಡಲಿಲ್ಲ. ಸಂಶೋಧನೆಗಳ ಸಮಯದಲ್ಲಿನ ಹಾಫ್‌ಕಿನ್ನರ ಸಮಸ್ಯೆಗಳಿಗೆ ಮೆಕ್ನಿಕೋವ್ ಮಾರ್ಗದರ್ಶ ಕರಾಗಿ ಸಲಹೆ ನೀಡುತ್ತಿದ್ದರೆ, ಹಾಫ್‌ಕಿನ್ ತಮ್ಮ ಸಂಶೋಧನೆಗಳ ಯಶಸ್ಸಿಗೆ ಮೆಕ್ನಿಕೋವರೇ ಕಾರಣವೆಂದು ಹೊಗಳುತ್ತಿದ್ದರು. ಮೆಕ್ನಿಕೋವರಲ್ಲಡಗಿದ್ದ ತೀವ್ರ ಮಾನವೀಯ ಗುಣಗಳು ಹಾಫ್‌ಕಿನ್ನರ ಮೇಲೆ ಗಾಢವಾದ ಪರಿಣಾಮ ಬೀರಿದ್ದವು. ತಾವು ತಯಾರಿಸಿದ್ದ ವ್ಯಾಕ್ಸೀನನ್ನು ತಮ್ಮ ಮೇಲೆಯೇ ಪ್ರಯೋಗಿಸಿಕೊಂಡಿದ್ದು ಹಾಗೂ ದೂರದೇಶ ವೊಂದರಲ್ಲಿ ಶೀಘ್ರಗತಿಯಿಂದ ಹರಡುತ್ತಿದ್ದ ಕಾಲರಾವನ್ನು ಹತೋಟಿಗೆ ತರಲು ತಾವೇ ಅಲ್ಲಿಗೆ ಧಾವಿಸಿದ್ದು ಹಾಫ್‌ಕಿನ್ನರ ಮಾನವೀಯತೆಗೆ ಸಾಕ್ಷಿಯಾದರೆ, ವೈಜ್ಞಾನಿಕ ಸಿದ್ಧಾಂತವೊಂದನ್ನು ನಿರಾಕರಿಸಲು, ಇಲ್ಲವೆ ಸಾಧಿಸಲು ಕಾಲರಾ ರೋಗಾಣುಗಳ ಮಿಶ್ರಣವನ್ನು ತಾವೇ

ಕುಡಿದಿದ್ದು ಪ್ರೊ:ಮೆಕ್ನಿಕೋವ್‌ರ ಮಹಾನ್ ವ್ಯಕ್ತಿತ್ವದ ಕೈಗನ್ನಡಿಯಾಗುತ್ತದೆ. ಅಂತಹ ಮಾನವೀಯ ಗುಣಗಳ ಒಡೆಯ್ನಾ ಪ್ರಾಧ್ಯಾಪಕರ ಮಾರ್ಗದರ್ಶನದಲ್ಲಿ ಕಲಿತ ಶಿಷ್ಯನಲ್ಲಿ ಕೇವಲ ಒಂದು ಸಿದ್ಧಾಂತವನ್ನು ರುಜುವಾತು ಮಾಡುವುದಕ್ಕಿಂತಲೂ ಸಮಾಜಕ್ಕೆ ಬದ್ಧವಾಗಿರುವ ತನ್ನ ಕರ್ತವ್ಯ ಪಾಲನೆಯೇ ಮುಖ್ಯವೆಂದು ಕಂಡುಬಂದದ್ದು ಸಹಜವೇ. ಇಂತಹ 'ಕರ್ತವ್ಯ ಪಾಲನೆಯ ಉದ್ದೇಶದಿಂದಲೇ ಪ್ಯಾರಿಸ್ಸಿನ ಪ್ರಯೋಗಾಲಯದಲ್ಲಿ ಕಾರ್ಯ ಮಗ್ನನಾಗಿರುವುದರ ಬದಲು ಭಾರತದಂಥ ದೂರದೇಶವೊಂದರಲ್ಲಿ ಕಾಲರಾದಿಂದ ಸಾಯುವವರನ್ನು ಉಳಿಸುವ ಸಲುವಾಗಿ ಹಾಫ್‌ಕಿನ್ ಲಂಡನ್ನಿಗೆ ಬಂದಿದ್ದು.

## ಹೊಸ ಸಂಬಂಧಗಳು

ಹಾಫ್‌ಕಿನ್ನರನ್ನು ಭಾರತಕ್ಕೆ ಕಳುಹಿಸಿಕೊಡುವ ಬಗೆಗೆ ಬ್ರಿಟಿಷ್ ಅಧಿಕಾರಿಗಳ ಅನುಮತಿ ಪತ್ರ ತಯಾರಾಗುವುದಕ್ಕೆ ಸ್ವಲ್ಪ ಕಾಲಾವಕಾಶ ಬೇಕಾಯಿತು. ಭಾರತದಲ್ಲಿ ಅವರಿಗೆ ನೀಡಬಹುದಾದ ಹುದ್ದೆಯ ಸ್ಥಾನಮಾನ-ವೇತನ ಮತ್ತಿತರ ಅನುಕೂಲತೆಗಳ ಬಗೆಗೆ ವಿವಿಧ ಮಟ್ಟದ ಅಧಿಕಾರಿಗಳ ಹಂತಗಳಲ್ಲಿ ಚರ್ಚಿಸಿ ನಿರ್ಧಾರ ಮಾಡಬೇಕಿತ್ತು. ಈ ಅಂತರದ ಸಮಯವನ್ನು ಲಂಡನ್ನಿನಲ್ಲಿ ಕೆಲವು ಗಣ್ಯರ ಪರಿಚಯ ಮಾಡಿಕೊಳ್ಳುವುದಕ್ಕೆ ಬಳಸಿಕೊಂಡರು. ಬ್ರಿಟನ್ನಿನ ಜೀವಶಾಸ್ತ್ರಜ್ಞ ಆಲ್ಮರಾಥ್‌ರೈಟ್ ಅವರಲ್ಲಿ ಮೊದಲಿಗರು. ನೆಟ್ಲೆಯೆಂಬಲ್ಲಿನ ಮಿಲಿಟರಿ ಅಕಾಡೆಮಿಯಲ್ಲಿ ಪ್ರಾಧ್ಯಾಪಕರಾಗಿದ್ದ ರೈಟ್ ಅವರ ಸಮಾನ ವಯಸ್ಕರಾಗಿದ್ದರು.ಅಜಾನುಬಾಹು ಹಾಗೂ ದೃಢಕಾಯರಾಗಿದ್ದ ಆಲ್ಮರಾಥ್‌ರೈಟ್‌ರ ಎದುರಿಗೆ ಬಡಕಲು ಶರೀರದ ಬಿಳಿಚಿಕೊಂಡ ಸುಂದರ ಹಾಫ್‌ಕಿನ್ ಕುಬ್ಜರಾಗಿ ಕಾಣಿಸುತ್ತಿದ್ದರೂ ಸಹ ಅವರಿಬ್ಬರ ಬಾಂಧವ್ಯಕ್ಕೆ ಯಾವುದೇ ಅಡ್ಡಿ ಆತಂಕಗಳುಂಟಾಗಲಿಲ್ಲ. ರೈಟ್‌ರಿಗೆ ಪ್ರೊ:ಮೆಕ್ನಿಕೋವ್‌ರಲ್ಲಿ ಗೌರವಾದರಗಳಿದ್ದು ಅವರ ಶಿಷ್ಯನೊಬ್ಬನ ಸಹಯೋಗ ಹರ್ಷವನ್ನುಂಟುಮಾಡಿತು. ಅವರಿಬ್ಬರೂ ಸಾಮಾನ್ಯವಾಗಿ ಒಟ್ಟಾಗಿಯೇ ತಿರುಗಾಡುತ್ತಿದ್ದರು. ಹಾಫ್‌ಕಿನ್ನರ ಅರಿವಿನ ಆಳ ಮತ್ತು ಹರವಿನ ವಿಸ್ತಾರವನ್ನು ಅರಿತುಕೊಂಡ ರೈಟ್, ಮುಂದೆ ಅವರೊಬ್ಬ ಶ್ರೇಷ್ಠ- ''ಇಮ್ಯುನೋಲಾಜಿಸ್ಟ್'' ರೋಗ ನಿರೋಧಕ ಶಾಸ್ತ್ರಜ್ಞ-ಮರವಣೆ ಶಾಸ್ತ್ರಜ್ಞ- ಆಗುತ್ತಾರೆಂದು ಭವಿಷ್ಯ ನುಡಿದಿದ್ದರು.

ಹೀಗೆ ಪ್ರಾಸಂಗಿಕವಾಗಿ ರೈಟ್-ಹಾಫ್‌ಕಿನ್ನರ ಸ್ನೇಹಸಂಬಂಧ ಮುಂದೆ ಮಹತ್ತರವಾದ ಒಂದು ಸಂಶೋಧನೆಗೆ ನಾಂದಿಯಾಯಿತು. ಹಾಫ್‌ಕಿನ್ನರೇ ಸಾಂಕ್ರಾಮಿಕ ರೋಗಗಳ ನಿಯಂತ್ರಣಕ್ಕೆ ಕಂಡುಹಿಡಿದಿದ್ದ ವ್ಯಾಕ್ಸೀನಿನ ತತ್ವ ರೈಟ್‌ರ ಮೇಲೆ ಒಳ್ಳೆಯ ಪ್ರಭಾವ ಬೀರಿತು. ಅದರಿಂದ ಉತ್ತೇಜಿತರಾದ ಮುಂದಿನ ಕೆಲವೇ ವರ್ಷಗಳಲ್ಲಿ ವಿಷಮ ಶೀತಜ್ವರದ ವಿರುದ್ಧ ವ್ಯಾಕ್ಸೀನನ್ನು ಆವಿಷ್ಕರಿಸುವಲ್ಲಿ ಯಶಸ್ವಿಯಾದರು.

ಲಂಡನ್ನಿನಲ್ಲಿ ಹಾಫ್‌ಕಿನ್ನರಿಗೆ ಸ್ನೇಹಸಂಬಂಧ ಉಂಟಾದ ಮತ್ತೊಬ್ಬರೆಂದರೆ ಡಾ॥ವಿಲಿಯಂ ಸಿಂಪ್ಸನ್. ಅವರು ಕಲ್ಕತ್ತಾದಲ್ಲಿ ಮುಖ್ಯ ನೈರ್ಮಲ್ಯಾಧಿಕಾರಿಯಾಗಿದ್ದರು;

ವಿಶ್ರಾಂತಿಗಾಗಿ 1892ರ ಶರತ್ಕಾಲದಲ್ಲಿ ಲಂಡನ್ನಿಗೆ ಬಂದಿದ್ದರು. ನೆಟ್ಲೆಯ ಮಿಲಿಟರಿ ಅಕಾಡೆಮಿಯಲ್ಲಿ ಕಾಲರಾ ವ್ಯಾಕ್ಸೀನಿನ ಬಗೆಗೆ ಹಾಫ್‌ಕಿನ್ನರ ಭಾಷಣದ ಸಂದರ್ಭದಲ್ಲಿ ಸಿಂಪ್ಸನ್ನರೂ ಹಾಜರಿದ್ದರು. ಹಾಫ್‌ಕಿನ್‌ರ ಭಾಷಣ ಅವರ ಮೇಲೆ ತುಂಬಾ ಪ್ರಭಾವ ಬೀರಿತು. ಪರಸ್ಪರ ವಿಚಾರ ವಿಮರ್ಶೆಯ ಸಂದರ್ಭದಲ್ಲಿ ಅವರು ಭಾರತದಲ್ಲಿ ಕಾಲರಾ ವ್ಯಾಕ್ಸಿನೇಷನ್ ಪರವಾಗಿ ಕಾರ್ಯನಿರ್ವಹಿಸುವ ಭರವಸೆ ಇತ್ತರು. ಸಿಂಪ್ಸನ್ ವಿಜ್ಞಾನಿಯಾಗಿರುವುದಕ್ಕಿಂತಲೂ ಒಳ್ಳೆಯ ಆಡಳಿತಗಾರರಾಗಿದ್ದರು. ಹಾಫ್‌ಕಿನ್ನರು ಕಲ್ಕತ್ತಾಕ್ಕೆ ಬರುವುದಾದರೆ ಅಲ್ಲಿದ್ದ ತಮ್ಮ ಪುಟ್ಟ ಪ್ರಯೋಗಾಲಯವನ್ನೇ ಅವರಿಗೆ ವಹಿಸಿಕೊಡುವ ವಾಗ್ದಾನವಿತ್ತರು. ಪರಕೀಯ ದೇಶವೆಂದುಕೊಂಡಿದ್ದ ಹಾಫ್‌ಕಿನ್ ಇದಕ್ಕಿಂತ ಹೆಚ್ಚು ಆತ್ಮೀಯ ಸ್ವಾಗತವನ್ನು ನಿರೀಕ್ಷಿಸಿರಲಿಲ್ಲ.

ಈ ನಡುವೆ ಹಾಫ್‌ಕಿನ್ನರು ಲಂಡನ್ನಿನಿಂದ ಭಾರತಕ್ಕೆ ಹೊರಡುವ ದಿನ ಪದೇ ಪದೇ ಮುಂದೂಡುತ್ತಲೇ ಹೋಯಿತು. ಮೊದಲು ಡಿಸೆಂಬರ ತಿಂಗಳಲ್ಲಿ ಹದಿನೈದು ದಿವಸ ಮುಂದೆ ಹೋಗಿದ್ದು,ನಂತರ ಒಂದು ತಿಂಗಳು ಆದನಂತರ ಮತ್ತೆ ಎರಡು ವಾರಗಳು ಹೀಗೆ ಮುಂದುಮುಂದು ಹೋಗುತ್ತಲೇ ಇದ್ದವು. ವಿನಾಕಾರಣ ಮುಂದೂಡಲ್ಪಡುತ್ತಿದ್ದ ಗಡುವು ಹಾಫ್‌ಕಿನ್ನರ ಮನಃಸ್ಥೈರ್ಯಗೆಡುವಂತಾಗುತ್ತಿತ್ತು. ಲಂಡನ್ನಿನಲ್ಲಿದ್ದ ರಷ್ಯಾದ ರಾಯಭಾರಿ ಕಛೇರಿಯವರು ಯಾವುದೋ ಉದ್ದೇಶದಿಂದ ವಿಚಾರಣೆಗಳನ್ನು ಶುರುಮಾಡಿದ್ದು ಈ ಮುಂದೂಡಿಕೆಗಳಿಗೆ ಕಾರಣವಾಯಿತೆಂಬುದು ಅಂತಿಮವಾಗಿ ತಿಳಿಯಿತು. ಹಾಫ್‌ಕಿನ್ನರಿಗೆ ಇದಕ್ಕಿಂತ ಹೆಚ್ಚಿನ ದುರಂತ ಇನ್ನಾವುದೂ ಇರಲಿಕ್ಕಿಲ್ಲವೆನಿಸ ತೊಡಗಿತು. ಸೆಯಿಂಟ್ ಪೀಟರ್ಸ್ ಬರ್ಗ್‌ನ ಅಧಿಕಾರಶಾಹಿ ತಮ್ಮ ಯೋಜನೆಗಳನ್ನೆಲ್ಲಾ ತಲೆಕೆಳಗುಮಾಡಬಹುದೆಂಬ ಅನುಮಾನ ಬಲವಾಯಿತು. ರಷ್ಯನ್ ರಾಯಭಾರಿ ಕಛೇರಿಯಿಂದ ಅವರಿಗೆ ಕರೆಬಂದಾಗ ಅವರಿನ್ನೂ ಗಾಬರಿಗೊಂಡರು. ಕಳೆದ ಐದು ವರ್ಷಗಳಿಂದಲೂ ಹೊರದೇಶವೊಂದರಲ್ಲಿ ಜೀವನ ಸಾಗಿಸುತ್ತಿದ್ದರೂ ಅವರು ಝಾರ್ ದೊರೆಗಳ ಸರ್ಕಾರದ ಪ್ರತಿನಿಧಿಗಳೊಡನೆ ಯಾವುದೇ ರೀತಿಯ ಸಂಪರ್ಕ ಇಟ್ಟುಕೊಂಡಿರಲಿಲ್ಲ; ಈಗ ಅಲ್ಲಿ ಮತ್ತೇನು ಅನಿಷ್ಟ ಕಾದಿರಬಹುದೆಂಬ ಕಾತರ ಕಾಡತೊಡಗಿತು. ರಾಯಭಾರ ಕಛೇರಿಯನ್ನು ಪ್ರವೇಶಿಸಿದ ತಕ್ಷಣ ಅತಿಥೇಯ ಅಧಿಕಾರಿಯೊಬ್ಬರು ಅವರನ್ನು ನೇರವಾಗಿ ರಾಯಭಾರಿಗಳ ಸಮ್ಮುಖಕ್ಕೆ ಕರೆದುಕೊಂಡು ಹೋದರು. ರಾಯಭಾರಿ ಬೇರನ್ ಡಿ ಸ್ಟೇಲ್‌ರೊಡನೆ ಮುಂದೆ ಜರುಗಿದ ಸಂಭಾಷಣೆ ಹಾಫ್‌ಕಿನ್ನರಿಗೆ ಸ್ವಪ್ನಲೋಕದಲ್ಲಿ ವಿಹರಿಸುತ್ತಿರುವ ಭಾವನೆಯುಂಟುಮಾಡಿತ್ತಂತೆ. ರಾಯಭಾರಿಗಳು ಹಾಫ್‌ಕಿನ್ನರ ಅವಧಿ ಮುಗಿದಿದ್ದ ಪರವಾನಿಗಿಯ ವಿಷಯವಾಗಲೀ, ಇಲ್ಲವೆ ಅವರಪೂರ್ವಾಪರಗಳ ಬಗೆಗಾಗಲೀ ಪ್ರಾಸ್ತಪಮಾಡಲೇಇಲ್ಲ. ಬದಲಿಗೆ ಮಿಣಿಜೀವಿಶಾಸ್ತ್ರದಲ್ಲಿ ಅವರು ಮಾಡಿದ ಸಾಧನೆ ರಷ್ಯಾದ ವೈಜ್ಞಾನಿಕ ಕ್ಷೇತ್ರದಲ್ಲಿ ಹೆಮ್ಮೆಯುಂಟು ಮಾಡಿದೆ; ರಷ್ಯಾದೇಶದ ಪ್ರಜೆಯಾದ ಅವರನ್ನು ಮಾನವೀಯ

ಕಾರಣಗಳಿಗಾಗಿ ಭಾರತಕ್ಕೆ ಕಳುಹಿಸಲು ಚಕ್ರರ್ತಿಗಳು ಸಮ್ಮತಿಸಿರುವುದಾಗಿಯೂ, ತಾವು ಆ ನಿರ್ಧಾರವನ್ನು ಬ್ರಿಟಿಷ್ ಸರ್ಕಾರಕ್ಕೆ ತಿಳಿಸಿರುವುದಾಗಿ ಹೇಳಿದರು!

ರಷ್ಯಾದ ರಾಯಭಾರಿಯ ಆ ತರಹೆಯ ವರ್ತನೆಗೆ ಕಾರಣವಿಲ್ಲದಿರಲಿಲ್ಲ. ಬ್ರಿಟಿಷ್ ಪತ್ರಿಕೆಗಳಲ್ಲಿ ಹಾಫ್‌ಕಿನ್ನರ ವ್ಯಾಕ್ಸೀನ್ ಬಗೆಗೆ ಮೆಚ್ಚಿಗೆ ವ್ಯಕ್ತಪಡಿಸಿದಾಗ, ತಮ್ಮ ದೇಶದ ಪ್ರಜೆಯಾದ ಹಾಫ್‌ಕಿನ್ನರ ಪೂರ್ವಾಪರಗಳ ಬಗೆಗೆ ತಮ್ಮ ಸರ್ಕಾರದೊಡನೆ ಅವರಾಗಲೇ ಸಮಾಲೋಚನೆ ನಡೆಸಿದ್ದರು. ಆಂಗ್ಲೋ ರಷ್ಯನ್ ಸಂಬಂಧಗಳು ಹಿತಕರವಾಗಿರದಿದ್ದ ಸಮಯದಲ್ಲಿ ರಾಯಭಾರಿಯ ಈ ವರ್ತನೆ ಬ್ರಿಟಿಷ್ ಅಧಿಕಾರಿ ವಲಯದಲ್ಲಿ ಇರುಸು-ಮುರುಸು ಉಂಟುಮಾಡಿತ್ತು. ಲಂಡನಿನ್ನ ಅಧಿಕಾರಿ ವಲಯದಲ್ಲಿ ಹಾಫ್‌ಕಿನ್ನರ ಉದ್ದೇಶಗಳಲ್ಲಿ ರಾಜಕೀಯ ದುರುದ್ದೇಶಗಳೇನಾದರೂ ಇರಬಹುದೇ ಎಂಬ ಸಂದೇಹಗಳೂ ಕೂಡಾ ಉಂಟಾಗಿದ್ದವು. ರಾಯಭಾರಿ ಡಿ ಸ್ಟೇಲ್ ಸಹಾ ಒಂದು ರೀತಿಯ ತಪ್ಪು ಮಾರ್ಗದಲ್ಲಿ ಚಲಿಸುತ್ತಿರುವರೋ ಎಂಬ ಭಾವನೆಯುಂಟಾಯಿತು. ಇವೆಲ್ಲದರ ಜೊತೆಗೆ ಸ್ವದೇಶದಲ್ಲೇ ಕಾಲರಾ ಉಲ್ಬಣಾವಸ್ಥೆಯಲ್ಲಿರುವಾಗ ಅಲ್ಲಿಯ ಪ್ರಜೆಯೊಬ್ಬನನ್ನು, ಅದೇ ರೋಗದ ಹತೋಟಿಗಾಗಿ ಭಾರತಕ್ಕೆ ಹೋಗುತ್ತಿದ್ದಾರೆಂಬ ಸುದ್ದಿಯೂ ಹೊರಬಂದಿತು. ಇಂತಹ ಸಂದರ್ಭದಲ್ಲೇ ರಾಯಭಾರಿ ತಮ್ಮ ಸರ್ಕಾರದ ಮಾರ್ಗದರ್ಶನ ಕೇಳಿದ್ದರು. ತಮ್ಮ ದೇಶಗಳ ಸಂಬಂಧ ಹದಗೆಡುತ್ತಿರುವ ಸಮಯದಲ್ಲಿ ಒಂದು ಬಗೆಯ ಮಂದಸ್ಮಿತ ಬೀರುವ ನಟನೆಯ ಪ್ರದರ್ಶನ ಮಾಡುವ ಸಲುವಾಗಿ ಈ ನಿರ್ಧಾರ ಮಾಡಿತೆನ್ನಲಾಗಿದೆ. ಅದರ ಫಲವಾಗಿಯೇ ಹಾಫ್‌ಕಿನ್ನರನ್ನು ಭಾರತಕ್ಕೆ ಕಳುಹಿಸುವ ಬಗ್ಗೆ ಶಿಫಾರಸ್ಸು ಮಾಡುವಂತೆ ರಷ್ಯಾ ತನ್ನ ರಾಯಭಾರಿಗೆ ತಿಳಿಸಿತು; ಭಾರತಕ್ಕೆ ಪ್ರಯಾಣ ಮಾಡಲು ಕಾದು ಕೂತಿದ್ದ ಹಾಫ್‌ಕಿನ್ನರಿಗೆ ಒಡನೆಯೇ ಅನುಮತಿ ದೊರೆಯಿತು.

೭

# ಕಲ್ಕತ್ತಾ ದರ್ಶನ

ಮುಂದೆ ರಷ್ಯಾದ ರಾಯಭಾರಿಯ ಕಛೇರಿಯವರು ಯಾವುದೇ ಅಡೆತಡೆಯಿಲ್ಲದೆ ವ್ಲಾದಿಮಿರ್ ಹಾಫ್‌ಕಿನ್ಸರಿಗೆ ಅನುಮತಿ ಇತ್ತರು; ಬ್ರಿಟಿಷ್ ಸರ್ಕಾರದವರೂ ಸಹ ತಡಮಾಡದೆ ಅವರು ಪ್ರಯಾಣಮಾಡಲು ಎಲ್ಲಾ ಅವಕಾಶಗಳನ್ನೂ ಮಾಡಿಕೊಟ್ಟರು. ತಮ್ಮ ಯೋಜನೆಯ ಬಗೆಗೆ ನಿರಾಶಾ ಭಾವನೆಯಲ್ಲಿದ್ದ ಅವರಿಗೆ ಇವೆರಡೂ ಬೆಳವಣಿಗೆಗಳು ಮಹದಾನಂದ ಉಂಟುಮಾಡಿದವು. ಈ ಅವಕಾಶಕ್ಕಾಗಿಯೇ ತುದಿಗಾಲಿನಲ್ಲಿ ಕಾಯುತ್ತಿದ್ದ ಹಾಫ್‌ಕಿನ್ 1895ರ ಫೆಬ್ರವರಿಯಲ್ಲಿ ಪ್ರಯಾಣದ ಸಿದ್ಧತೆಗಳನ್ನು ಮಾಡಿಕೊಂಡರು. ಹಡಗಿನಲ್ಲಿ ಭಾರತದತ್ತ ಪ್ರಯಾಣ ಹೊರಟರು. ಏಡೆನ್ ಬಂದರಿನ ಮೂಲಕ ಪ್ರಯಾಣಮಾಡಿ ಬಂಗಾಳಕೊಲ್ಲಿ ತಲುಪಿದರು. ಅಲ್ಲಿಂದ ಕಲ್ಕತ್ತಾ ಬಂದರಿನ ಹೂಗ್ಲಿ ನದಿಯ ಮುಖಜ ಭೂಮಿಗೆ ಹಡಗು ತಲುಪಿತು.

ಭಾರತದಲ್ಲಿನ ಕಾಲರಾ ಪಿಡುಗಿನ ಬಗೆಗೆ ಹಾಫ್‌ಕಿನ್ ಯುರೋಪು, ಇಂಗ್ಲೆಂಡು ಗಳಲ್ಲಿ ಸಾಕಷ್ಟು ಮಾಹಿತಿಗಳನ್ನೆಲ್ಲಾ ತಿಳಿದುಕೊಂಡಿದ್ದರೆಂದು ಭಾವಿಸಿದ್ದರು. ಆದರೆ ಪ್ರತ್ಯಕ್ಷ ಅನುಭವವಾದದ್ದು ಹೂಗ್ಲಿನದಿಯ ಖಾರಿಯನ್ನು ತಲುಪಿದಾಕ್ಷಣವೇ. ಅವರು ಪ್ರಯಾಣ ಮಾಡುತ್ತಿದ್ದ ಹಡಗಿನ ಸನಿಹದಲ್ಲೇ ಇನ್ನೊಂದು ದೋಣಿಸಾಗುತ್ತಿತ್ತು. ಅದಕ್ಕೆ ಸೈನ್ಯದ ಪಹರೆಯೂ ಇತ್ತು. ಆ ದೋಣಿಯ ಮೇಲೆ ಹಳದಿ ಬಾವುಟಗಳು ಹಾರುತ್ತಿದ್ದುದು ಅವರ ವಿಶೇಷ ಗಮನ ಸೆಳೆಯಿತು; ಆ ಬಗೆಗೆ ಸಹ ಪ್ರಯಾಣಿಕರನ್ನು ವಿಚಾರಿಸಿದರು. ಕಾಲರಾದ ಸೋಂಕು ತಗುಲಿದ ರೋಗಿಗಳನ್ನು ಇತರರಿಂದ ಬೇರ್ಪಡಿಸಿ ಸಾಗಿಸುತ್ತಿರುವುದರ ಸಂಕೇತ ಅದೆಂಬುದು ತಿಳಿಯಿತು.

ಹಾಫ್‌ಕಿನ್ ಬಂದರಿನಲ್ಲಿ ಹಡಗಿನಿಂದ ಕೆಳಗೆ ಇಳಿಯುತ್ತಿರುವಾಗ, ಆ ದೋಣಿಯೂ ಹತ್ತಿರದಲ್ಲೇ ಬಂದು ನಿಂತುಬಿಟ್ಟಿತು. ಅವರು ಮತ್ತೊಮ್ಮೆ ಆ ದೋಣಿಯತ್ತ ದೃಷ್ಟಿ ಹಾಯಿಸಿದರು; ಅದರಲ್ಲಿನ ಹೃದಯ ವಿದ್ರಾವಕ ದೃಶ್ಯ ಅವರ ಮನಕಲುಕಿಸಿತು. ಕಾಲರಾ ರೋಗಿಗಳನ್ನು ಅವರು ಪ್ಯಾರಿಸ್ಸಿನ ಬಡಾವಣೆಗಳಲ್ಲಿ ನೋಡಿದ್ದರು; ಅಲ್ಲಿ ಬಿಳೀ ಗೋಡೆಗಳಿಂದ ಆವೃತವಾದ ವಿಶಾಲವಾದ ಕೊಠಡಿಗಳಲ್ಲಿ ಪರಿಶುದ್ಧ ವಾತಾವರಣದಲ್ಲಿ ಅಂತಹವರ ಚಿಕಿತ್ಸೆ ನಡೆಯುತ್ತಿತ್ತು. ಆದರೆ ಪ್ರಪಂಚದಲೆಲ್ಲಾ ಜೀವಿಸುತ್ತಿರುವ ಜನಸಾಮಾನ್ಯರ ಚಿಕಿತ್ಸಾ ವಿಧಾನಗಳಲ್ಲಿ ಒಂದೊಂದು ಕಡೆಗಳಲ್ಲೂ ಅದೆಷ್ಟು ವ್ಯತ್ಯಾಸ! ಇಲ್ಲಿ

ಕಲ್ಕತ್ತಾದಲ್ಲಿ ರೋಗಿಗಳ ಬಗೆಗೆ ಅದೆಷ್ಟು ತಿರಸ್ಕಾರ! ಇಲ್ಲಿಯ ಕಾಲರಾ ರೋಗಿಗೆ ದೋಣಿಯ ಮರದ ತಳವೇ ಹಾಸಿಗೆ; ಆಕಾಶವೇ ಹೊದಿಕೆ; ಬತ್ತಿದ ಕೆನ್ನೆಗಳು; ಗುಳಿಬಿದ್ದ ಕಣ್ಣುಗಳು, ಊರ್ಧ್ವಮುಖವಾಗಿ ತೆರೆದ ಬಾಯಿ; ಒಣಗಿ ಬಡಕಲಾದ ಶರೀರ ದೇಹದಾದ್ಯಂತ ಮಲಮೂತ್ರಗಳ ಮೆತ್ತಿಗೆ; ಪರಿಚಾರಕರೂ ಇಲ್ಲದೆ ದೋಣಿಯೊಳಗಡೆ ಗತಿಯಿಲ್ಲದ ಮಾನವಾಕೃತಿ.ಅವನ ಉಡಿಗೆ ತೊಡಿಗೆಗಳಿಂದ ಅವನೊಬ್ಬ ಬಡನಾವಿಕನೋ ಅಥವಾ ತೀರ್ಥಕ್ಷೇತ್ರಕ್ಕೆ ಹೊರಟಿರುವ ಯಾತ್ರಿಕನೋ ಎನ್ನುವಂತಿತ್ತು. ಜೀವಚ್ಛವದಂತಿದ್ದ ಅವನನ್ನು ಕೈಗಳಿಗೆ ರಬ್ಬರ್ ಗವಸು ಧರಿಸಿದ್ದ ಇಬ್ಬರು ಸೈನಿಕರು, ಕಾಯುತ್ತಿದ್ದ ಆಂಬುಲೆನ್ಸ್ ವಾಹನದೊಳಗಡೆ ಯಾವುದೇ ಮುಲಾಜಿಲ್ಲದೆ ಎಸೆದುಬಿಟ್ಟರು. ಮೊದಲೇ ಚಿಂತಾಕ್ರಾಂತರಾಗಿದ್ದ ಹಾಫ್‌ಕಿನ್ನರನ್ನು ಈ ದೃಶ್ಯ ಇನ್ನೂ ಅಂತರ್ಮುಖಿಯಾಗಿ ಯೋಚನೆಗೀಡುಮಾಡಿತು. (ಭಾರತದಲ್ಲಿ ಮುಂದೆ ಅವರು ಕಳೆದ ಎರಡು ವರ್ಷಗಳಲ್ಲಿ ಇಂತಹ ದೃಶ್ಯಗಳು ಹೋದೆಡೆಗಳಲ್ಲೆಲ್ಲ ಪ್ರತಿನಿತ್ಯ ಅವರಿಗೆದುರಾಗುತ್ತಿದ್ದವು. ಬ್ರಿಟಿಷ್ ವಸಾಹತುಗಳಲ್ಲಿ ಈ ತರಹೆಯ ಸಾಮಾಜಿಕ ಅವ್ಯವಸ್ಥೆ ಅಪರೂಪವೇನಲ್ಲ ಎಂಬುದು ದಿನಕಳೆದಂತೆಲ್ಲಾ ಅರಿವಾಗತೊಡಗಿತು).

ಬಡಜನರೇ ಹೆಚ್ಚಾಗಿ ವಾಸಿಸುತ್ತಿರುವ ಗುಡಿಸಲುಗಳಲ್ಲೇ ಈ ಮೃತ್ಯು ತಾಂಡವ ಪ್ರತಿದಿನದ ದೃಶ್ಯವಾಗಿರುತ್ತಿತ್ತು. ಕಾಲರಾದಂಥ ವ್ಯಾಧಿಯೂ ಸಾಮಾಜಿಕ ಅಂತರ-ಅಂತಸ್ತುಗಳನ್ನು ಗುರುತಿಸಿ ಬಡಬಗ್ಗರನ್ನೇ ಸದೆಬಡಿಯುತ್ತದೇನೋ ಅನ್ನುವಂತಿತ್ತು. ಆಗಿನ ಪರಿಸ್ಥಿತಿ. ಭಾರತದ ಆಗಿನ ರಾಜಧಾನಿಯಾದ ಕಲ್ಕತ್ತಾ ಇದಕ್ಕೇನು ಅಪವಾದವಾಗಿರಲಿಲ್ಲ. ಬ್ರಿಟಿಷ್ ಉನ್ನತ ಅಧಿಕಾರಿಗಳು ಹಾಗೂ ಶ್ರೀಮಂತ ವರ್ಗದವರು ವಾಸಿಸುತ್ತಿದ್ದ ದಕ್ಷಿಣ ಮತ್ತು ಮಧ್ಯವಲಯದಲ್ಲಿ ಕಾಲರಾ ಕಂಡು ಬರುತ್ತಿರಲಿಲ್ಲ. ಒಂದು ಕಡೆ ಫೋರ್ಟ್ ವಿಲಿಯಂದ ಎತ್ತರದ ಗೋಡೆಗಳು, ಇನ್ನುಳಿದ ಕಡೆಗಳಲ್ಲಿ ತಂಪಾದ ಉದ್ಯಾನವನಗಳಿಂದ ಆವೃತವಾಗಿದ್ದಿತು ಆ ವಲಯ; ಅಲ್ಲಿಯ ಬಂಗಲೆಗಳಲ್ಲಿ ವಾಸಿಸುತ್ತಿದ್ದವರಿಗೆ ಕೊಳವೆಗಳ ಮೂಲಕ ಪರಿಶುದ್ಧವಾದ ಕುಡಿಯುವ ನೀರು ಸರಬರಾಜಿನ ವ್ಯವಸ್ಥೆಯಿತ್ತು; ಕಾಲರಾ ಆ ವಲಯದಲ್ಲಿ ಎಂದೆಂದೂ ಕಾಣಿಸಿಕೊಂಡಿರಲಿಲ್ಲ. ಆದರೆ ನಗರದ ಉತ್ತರ ಮತ್ತು ಹೊರವಲಯಗಳ ಪರಿಸ್ಥಿತಿಯೇ ಬೇರೆಯಾಗಿರುತ್ತಿತ್ತು. ಈ ಭಾಗಗಳಲ್ಲಿ ತುಂಬಾ ಇಕ್ಕಟ್ಟಾದ ರಸ್ತೆಗಳು, ಓಣಿಗಳು, ಮಣ್ಣಿನ ತಡಿಕೆ ಗೋಡೆಗಳಿಂದ ನಿರ್ಮಿತವಾದ ಜೋಪಡಿಗಳು, ತಿಪ್ಪೆರಾಶಿಗಳು, ಅಲ್ಲಲ್ಲೇ ಮಡುವುಗಟ್ಟಿಕೊಂಡ ಚರಂಡಿಗಳು, ಕೊಳೆತು ನಾರುವ ನಾರಿನ ಹೊಂಡಗಳು ತುಂಬಿ ತುಳುಕಾಡುತ್ತಿದ್ದವು. ಆ ಹೊಂಡಗಳಲ್ಲೇ ಮನುಷ್ಯರು ಸ್ನಾನ ಮಾಡುವುದು, ಬಟ್ಟೆ ಬರೆಗಳನ್ನು ಒಗೆಯುವುದು ಹಾಗೂ ದನಕರುಗಳನ್ನು ತೊಳೆಯುವ ಮತ್ತು ನಿತ್ಯಕರ್ಮದ ತೊಳೆತಗಳೂ ಸಹಾ ಜರುಗುವುದು ಕೂಡ! ಕೆಲವರು ಕುಡಿಯುವ ನೀರಿನ ಆಸರೆಯೂ ಸಹ ಅವುಗಳೇ. ಇಂತಹ ನೀರಿನ ಹೊಂಡವೊಂದರಿಂದ ತೆಗೆದ ನೀರಿನ ಮಾದರಿಯಿಂದಲೇ ಹತ್ತು ವರ್ಷಗಳ ಹಿಂದೆ ರಾಬರ್ಟ್ ಕಾಖ್ ವಿಬ್ರಿಯೋ

ಕಾಲರಾ ಬ್ಯಾಸಿಲೈಗಳನ್ನು ಮೊಟ್ಟ ಮೊದಲ ಬಾರಿಗೆ ಕಂಡು ಹಿಡಿದಿದ್ದು. ಅಂದಿನಿಂದ ಇಲ್ಲಿಯವರೆಗೆ ಯಾವುದೇ ತರಹೆಯ ಬದಲಾವಣೆಗಳಾಗಿರಲಿಲ್ಲ. ಆಗಿನಂತೆಯೇ ಕಾಲರಾ ರೋಗಿಗಳ ಹಾಗೂ ಅದರಿಂದಲೇ ಸತ್ತವರ ಬಟ್ಟೆಬರೆಗಳನ್ನು ತೊಳೆಯುವುದನ್ನು ಮುಂದುವರಿಸಿದ್ದರು; ಕುಡಿಯಲು ನೀರನ್ನೂ ಸಹಾ ಅಂತಹ ಹೊಂಡಗಳಿಂದಲೇ ಬಳಸುತ್ತಿದ್ದರು.

ಕಾಲರಾದಂಥ ಸೋಂಕು ರೋಗಕ್ಕೆ ಅಂತಹ ನೀರಿನಲ್ಲಿರುವ 'ಕಾಮಾ' ಬ್ಯಾಸಿಲೈಗಳೇ ಕಾರಣವೆಂಬುದು ಹಾಫ್‌ಕಿನ್ ಹಾಗೂ ಕೆಲವು ವಿಜ್ಞಾನಿಗಳಿಗೇನೋ ಖಚಿತವಾಗಿ ತಿಳಿದ ವಿಷಯವಾಗಿತ್ತು. ಕಲ್ಕತ್ತಾದ ಕೊಳಚೆ ಪ್ರದೇಶಗಳಲ್ಲಿ ವಾಸವಾಗಿದ್ದ ಹಾಗೂ ಕಲುಷಿತವಾದ ನೀರನ್ನು ಕುಡಿಯುವ ಅನಿವಾರ್ಯತೆ ಅವಿದ್ಯಾವಂತ ಬಡಜನರಿಗೆ ಅದ್ಹೇಗೆ ತಿಳಿದಿರಲು ಸಾಧ್ಯ. ಕಾಲರಾ ಬಗೆಗೆ ರಾಬರ್ಟ್ ಕಾಖ್‌ರ ಸಿದ್ಧಾಂತವನ್ನು ಸಂಪೂರ್ಣವಾಗಿ ಸ್ವೀಕರಿಸಿದ್ದ ಹಾಫ್‌ಕಿನ್ನರಿಗೆ ಅದನ್ನು ತಡೆಗಟ್ಟುವುದಕ್ಕೆ ಕಲುಷಿತವಾದ ನೀರಿನ ಹೊಂಡಗಳನ್ನು ಮಣ್ಣಿನಿಂದ ಮುಚ್ಚಿ, ಅಲ್ಲಿ ನೀರು ನಿಲ್ಲದಂತೆ ನೋಡಿಕೊಳ್ಳುವುದು; ಹಾಗೂ ಎಲ್ಲಾ ಜನರಿಗೂ ಪರಿಶುದ್ಧವಾದ ನೀರನ್ನು ಕೊಳವೆಗಳ ಮೂಲಕ ಸರಬರಾಜು ಮಾಡುವುದೇ ಏಕೈಕ ಮಾರ್ಗ ಎಂಬುದರ ಅರಿವಾಗಿತ್ತು; ಆದರೆ ಕಲ್ಕತ್ತಾದಂತಹ ಮಹಾನಗರದಲ್ಲಿ ತುಂಬಿ ತುಳುಕುವ ಅಪಾರ ಜನಸ್ತೋಮಕ್ಕೆ ಆರ್ಥಿಕವಾಗಿ ಅದೊಂದು ಅಸಾಧ್ಯದ ಕೆಲಸ. ಅದು ಸಾಧ್ಯವಾಗದಿದ್ದರೆ ನಗರ ಬಡಾವಣೆಗಳ ಒಂದೆರಡು ಜಾಗಗಳಲ್ಲಾದರೂ ಕೊಳವೆಯಿಂದ ನೀರನ್ನು ಒದಗಿಸುವ ಸೌಲಭ್ಯ ಮಾಡಬಾರದೇಕೆಂದೆನಿಸಿತು ಅವರಿಗೆ; ಜೊತೆಗೆ ಮಲಮೂತ್ರ ಮತ್ತು ಇತರ ಮೂಲಗಳ ರೊಚ್ಚೆ ನೀರು ಸರಿಯಾದ ರೀತಿಯಲ್ಲಿ ಹೊರಗೆ ಹರಿದು ಹೋಗುವಂತೆ ಮಾಡುವುದಕ್ಕಾದರೂ ಸಾಧ್ಯವಾಗಬಹುದೆಂಬುದು ಅವರ ಅನಿಸಿಕೆ; ಮಾರುಕಟ್ಟೆಗಳಲ್ಲಿ ತರಕಾರಿ ಮತ್ತು ಹಣ್ಣು ಹಂಪಲುಗಳನ್ನು ನೆಲದ ಮೇಲಿಟ್ಟು ಮಾರಾಟ ಮಾಡದಿರುವಂಥ ಕಟ್ಟು ನಿಟ್ಟಾದ ಕ್ರಮಗಳನ್ನು ಜಾರಿಗೆ ತರುವುದರಿಂದ ಕಾಲರಾದ ಹರಡುವಿಕೆಯನ್ನು ತಡೆಯಲು ಸಾಧ್ಯವಾಗುತ್ತದೆಂಬುದು ಅವರ ಯೋಚನಾ ಲಹರಿ ಇಂಗ್ಲೆಂಡ್‌ನಂತಹ ದೇಶಗಳಲ್ಲಿ ಅಂತಹ ಕ್ರಮಗಳ ಜಾರಿಯಿಂದ ಎಷ್ಟೋ ಸಾರಿ ಅದರ ಹತೋಟಿ ಮಾಡಿದ ನಿದರ್ಶನಗಳಿದ್ದವು. ಅಲ್ಲಿ ಅವರಿಗೆ ಈ ಕ್ರಮಗಳನ್ನು ಜರುಗಿಸಲು ಹಣಕಾಸಿನ ಅಡಚಣೆಗಳೇನೂ ಇರುತ್ತಿರಲಿಲ್ಲ. ಆದರೆ ಭಾರತದಂಥಹ ವಸಾಹತು ಪ್ರದೇಶದಲ್ಲಿ ಈ ಯೋಜನೆಗಳ ಬಗೆಗೆ ಯೋಚಿಸುವವರಾರು? ಇಂತಹ ಇರಸು-ಮುರುಸಿನ ಪರಿಸ್ಥಿತಿಯನ್ನು ಎದುರಿಸಲು ಬ್ರಿಟಿಷರಿಗೆ ಉಳಿದಿದ್ದು ಒಂದೇ ಮಾರ್ಗ; ಅದೆಂದರೆ ಕಾಲರಾ ತಡೆಗಟ್ಟುವ ನೆವದಿಂದ ಭಾರತದಲ್ಲಿ ಮಿಣಜೀವಿ ಶಾಸ್ತ್ರಜ್ಞನನ್ನು ನೇಮಿಸಿಬಿಟ್ಟರೆ ತಮ್ಮ ಜವಾಬ್ದಾರಿ ಮುಗಿದಂತಾಗುತ್ತದೆಂಬುದು. ಅದು ಪ್ರಯೋಜನಕಾರಿಯಾಗುತ್ತದೋ ಇಲ್ಲವೋ ಎಂಬುದರ ಉಸಾಬರಿ ಅವರಿಗೆ ಬೇಕಾಗಿರಲಿಲ್ಲ; ವ್ಲಾದಿಮಿರ್ ಹಾಫ್‌ಕಿನ್ನರನ್ನು ಭಾರತಕ್ಕೆ ರವಾನಿಸುವುದರಿಂದ ಅವರು ತಮ್ಮ 'ಕರ್ತವ್ಯ''ವನ್ನು ಮಾಡಿದ್ದರು.

ಕಾಲರಾ ವ್ಯಾಧಿಯ ನಿಜವಾದ ಕಾರಣ, ಅದರ ವ್ಯಾಪಕತೆ ಹಾಗೂ ಅದರಿಂದುಂಟಾಗುತ್ತಿದ್ದ ಕಷ್ಟ-ನಷ್ಟಗಳ ಅಂದಾಜು ಬ್ರಿಟಿಷ್ ಆಡಳಿತಗಾರರಿಗಾಗಲೀ ಸ್ಥಳೀಯರಿಗಾಗಲೀ ಇಲ್ಲದಿದ್ದುದೇ ಅವರೆಲ್ಲರ ನಿರ್ಲಕ್ಷ್ಯ ಮನೋಭಾವಕ್ಕೆ ಕಾರಣ ವಾಗಿತ್ತೆನ್ನಬಹುದು. ಅಂತಹ ದಾರುಣ ಪರಿಸ್ಥಿತಿಯ ಅರಿವು ಮಹಾ ಮಾನವತಾ ವಾದಿಯಾಗಿದ್ದಂಥ ಹಾಫ್‌ಕಿನ್ನರಂಥವರಿಗೆ ಮಾತ್ರ ಅರಿವಾಗಬಹುದಿತ್ತು. ಕಾಲರಾದ ಬಹುಮುಖ ಸಮಸ್ಯೆಗಳ ಅರಿವಿದ್ದ ಅವರು ಅದರ ಹತೋಟಿಗೆ ಮಾಡಬೇಕಾದ ಕಾರ್ಯ ಯೋಜನೆಗಳ ಬಗೆಗೆ ಈಗ ಯೋಚಿಸತೊಡಗಿದರು. ಕಾಲರಾ ಮಿಣಿಜೀವಿಗಳು ವಿಶಾಲ ಜಗತ್ತಿನಲ್ಲಿ ಹರಡಿಕೊಂಡಿದ್ದು ತಮಗಿಷ್ಟ ಬಂದಲ್ಲಿ ಕದನವನ್ನಾರಂಭಿಸುವ ಸ್ಥಿತಿಯಲ್ಲಿದ್ದವು. ಅವುಗಳ ಸವಾಲನ್ನೆದರಿಸುವಲ್ಲಿ ಮಾನವನ ಸಂಪನ್ಮೂಲಗಳು ಮತ್ತು ಯೋಜನೆಗಳು ಆಗಿನ ಸ್ಥಿತಿಯಲ್ಲಿ ಯಾವ ಲೆಕ್ಕಕ್ಕೂ ಬರುವಂತಿರಲಿಲ್ಲ. ಇಂತಹ ದುರ್ಬರ ಸನ್ನಿವೇಶದಲ್ಲಿ ವಿಬ್ರಿಯೋ ಕಾಲರದ ಮಿಣಿ ಜೀವಿಗಳು ಏಕಾಂಗಿಯಾದ ಮನುಷ್ಯನ ಮೇಲೆ ಹಠಾತ್ತಾಗಿ ಎರುಗಿ ಅವನನ್ನು ವಿನಾಶದತ್ತ ತಳ್ಳುವುದನ್ನು ತಡೆಯುವ ಪ್ರಯತ್ನಗಳನ್ನೇಕೆ ಮಾಡಬಾರದೆಂಬುದು ಹಾಫ್‌ಕಿನ್ನರ ಯೋಚನಾ ಲಹರಿಯಾಯಿತು. ಅವರೀಗ ತಯಾರಿಸುತ್ತಿದ್ದ ವ್ಯಾಕ್ಸಿನಿನ ಬಳಕೆಯನ್ನು ವ್ಯಾಪಕವಾಗಿ ಜಾರಿಗೆ ತಂದು ಅಸಂಖ್ಯಾತ ಜನ ಸಮೂಹ ಕಾಲರಾ ಸೋಂಕು ದೇಹದಲ್ಲಿ ನೆಲೆಯೂರದಂತೆ ನಿರೋಧಕ ಶಕ್ತಿಯನ್ನು ವೃದ್ಧಿ ಮಾಡುವುದೇ ಸರಿಯೆಂಬುದು ಅವರ ಅನಿಸಿಕೆಯಾಗಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕಾಲರಾ ಸಾಂಕ್ರಾಮಿಕ ಹರಡುತ್ತಿರುವ ಪ್ರದೇಶಗಳಲ್ಲಿ ಅದರ ಅಪಾಯಕ್ಕೆ ಒಡ್ಡುವ ಸಾಧ್ಯತೆ ಇರುವ ವ್ಯಕ್ತಿಗಳಿಗೆಲ್ಲಾ ಈ ವ್ಯಾಕ್ಸಿನನ್ನು ನೀಡುವುದೇ ವಾಸ್ತವವಾದ ಮಾರ್ಗವೆಂಬುದು ಅವರ ನಿರ್ಧಾರವಾಯಿತು. ಹಾಗೆ ನೋಡಿದರೆ ಅಂತಹ ಅವಕಾಶ ಹುಡುಕಿಕೊಂಡು ಅವರು ಭಾರತಕ್ಕೆ ಬಂದದ್ದು. ಅಂದರೆ ಕಾಲರಾ ಸಾಂಕ್ರಾಮಿಕತೆ ಇರುವ ಕಡೆಗಳಲೆಲ್ಲಾ ಸಾಮೂಹಿಕ ಇನಾಕ್ಯುಲೇಷನ್ (ವ್ಯಾಕ್ಸೀನ್) ನೀಡುವುದು ಅವರ ಮುಂದಿನ ಗುರಿಯಾಯಿತು. ಆ ಯೋಜನೆಯನ್ನು ಜಾರಿಗೆ ತರುವುದು ಅಷ್ಟೇನೂ ಸುಲಭ ಸಾಧ್ಯವಾದುದಲ್ಲ; ಅಲ್ಲದೆ ಅದಕ್ಕೆ ತಗುಲುವ ಅಪಾರ ವೆಚ್ಚದ ಸಮಸ್ಯೆಯನ್ನು ಸಹ ಎದುರಿಸಬೇಕಾಗಿತ್ತು.

೮

# ವ್ಯಾಕ್ಸೀನಿನ ಉತ್ತರ ಭಾರತ ಅಭಿಯಾನ

ಯಾವುದೇ ಸೋಂಕು ತಗುಲಿ ರೋಗವನ್ನುಂಟು ಮಾಡುವುದನ್ನು ತಡೆಯಲು ಅವರಲ್ಲಿ ಆ ವ್ಯಾಧಿಗೆ ಕಾರಣವಾದ ಮಿಣಜೀವಿಗಳ ವಿರುದ್ಧ ನಿರೋಧಕ ಶಕ್ತಿಯನ್ನು ಪಡೆದುಕೊಂಡಿರಬೇಕೆನ್ನುವುದು ಈಗ ಸರ್ವವಿದಿತ. ಸಂಬಂಧಿಸಿದ ಬ್ಯಾಕ್ಟೀರಿಯಾ ಅಥವಾ ಬ್ಯಾಸಿಲೈಗಳನ್ನು ಶಕ್ತಿಗುಂದಿಸಿ ಅದರಿಂದ ಲಭ್ಯವಾಗುವ ಲಸಿಕೆಯನ್ನು ಮನುಷ್ಯರಿಗೆ ನೀಡುವುದರಿಂದ ಮುಂದೆ ಆ ಮಿಣಿ ಜೀವಿಗಳು ಅವರ ಮೇಲೆ ದಾಳಿ ಮಾಡಿದಾಗ ಅದನ್ನು ಎದುರಿಸುವ ಶಕ್ತಿ ಸಾಮರ್ಥ್ಯ ''ಇಮ್ಯುನಿಟಿ'' ಉಂಟಾಗಿರುತ್ತದೆ; ಅಂದರೆ ಆ ಮಿಣಜೀವಿಗಳ ವಿರುದ್ಧ ಕಾರ್ಯವೆಸಗುವ ''ಆಂಟಿ ಬಾಡಿಗಳು'' ಅಥವಾ ''ರೋಧವಸ್ತು'' ತಯಾರಾಗಿರುತ್ತವೆ; ಅವು ಮಿಣಜೀವಿಗಳನ್ನು ಎದುರಿಸಿ ಆ ರೋಗ ಉಂಟಾಗದಂತೆ ಮಾಡುತ್ತವೆಂಬುದು ಈಗ ಸಾಬೀತಾದ ವಿಷಯ. ಇಡೀ ರಾಷ್ಟ್ರ ಅಥವಾ ಅದರ ಒಂದು ಸೀಮಿತ ಪ್ರದೇಶದಲ್ಲಿ ಕಾಲರಾದಂಥ ಸಾಂಕ್ರಾಮಿಕ ನಿರ್ಮೂಲ ಮಾಡಬೇಕಾದರೆ ಅಲ್ಲಿಯ ಜನಸ್ತೋಮಕ್ಕೆಲ್ಲಾ ಕಾಲರಾ ನಿರೋಧಕ ಇನಾಕ್ಯುಲೇಷನ್ ಮಾಡಬೇಕಾಗುತ್ತದೆ.

ಇಂತಹ ಯೋಜನೆಯೊಂದನ್ನು ಭಾರತದಂತಹ ವಿಪುಲ ಜನ ಸಂಖ್ಯೆ ಇರುವ ಭೂಪ್ರದೇಶದಲ್ಲಿ ಜಾರಿಗೆ ತರುವುದು ಸುಲಭವಲ್ಲವೆಂಬುದು ಹಾಫ್‌ಕಿನ್ನರಿಗೆ ತಿಳಿಯದಿದ್ದುದೇನಲ್ಲ. ಆ ಸಲುವಾಗಿ ವ್ಯಾಕ್ಸೀನನ್ನು ತಯಾರಿಸಲು ಸಾಧನ ಸಲಕರಣೆಗಳಿಂದ ಸುಸಜ್ಜಿತ ಪ್ರಯೋಗಾಲಯ ನಿರ್ಮಾಣವಾಗುವ ಅವಶ್ಯಕತೆ ಇತ್ತು; ಅಪಾರ ಧನ ಸಹಾಯ ಅಲ್ಲದೆ ತರಬೇತಿ ಪಡೆದ ತಾಂತ್ರಿಕ ಕಾರ್ಯಕರ್ತರ ನೆರವೂ ಬೇಕಾಗುತ್ತಿತ್ತು. ಅಂತಹ ಪವಿತ್ರ ಕಾರ್ಯದಲ್ಲಿ ಸ್ವಯಂ ಪ್ರೇರಿತರಾಗಿ ಸೇವೆ ಸಲ್ಲಿಸಲು ಭಾರತೀಯ ವೈದ್ಯರು ಮುಂದೆ ಬರುವರೆಂಬ ಭರವಸೆಯೇನೋ ಇತ್ತು. ಆದರೆ ಅವರು ಕೈಗೊಳ್ಳಲಿರುವ ಈ ಎಲ್ಲಾ ಕಾರ್ಯಗಳಿಗೂ ಭಾರತ ಸರ್ಕಾರದ ಸಹಾಯ, ಸಹಕಾರಗಳ ಅವಶ್ಯಕತೆ ಬಹಳವಾಗಿ ಇತ್ತು.

ಅಂತಹ ಒಂದು ಯೋಜನೆಯನ್ನು ಹಾಫ್‌ಕಿನ್ನರು ಶೀಘ್ರಗತಿಯಿಂದ ತಯಾರಿಸಿ, ಭಾರತ ಸರ್ಕಾರಕ್ಕೆ ಸಲ್ಲಿಸಿ, ಅದನ್ನು ತುರ್ತಾಗಿ ಕಾರ್ಯಗತ ಮಾಡಲು ಸಹಕರಿಸಬೇಕೆಂದು ಮನವಿ ಮಾಡಿಕೊಂಡರು. ಅವರ ಯೋಜನೆ ಕಾರ್ಯಗತವಾದರೆ ಕಾಲರಾದ ಪಿಡುಗನ್ನು

ಭಾರತದಲ್ಲಿ ನಿರ್ಮಾಮ ಮಾಡಬಹುದೆಂದು ನಿವೇದಿಸಿಕೊಂಡಿದ್ದರು. ತಕ್ಷಣ ಸುಲಭ-ಸಾಧ್ಯವಾಗಬಹುದಾದ ಯಾವುದೋ ಒಂದು ರೀತಿಯ ತಾತ್ಕಾಲಿಕ ಕಾರ್ಯಕ್ರಮ ಜರುಗಿಸುವುದು ಅವರ ಉದ್ದೇಶವಾಗಿರಲಿಲ್ಲ; ಅದೆಷ್ಟೇ ಖರ್ಚು ವೆಚ್ಚ ಹಿಡಿಯುವುದಾದರೂ ಕಾಲರಾ ಮಹಾಮಾರಿಯನ್ನು ಈ ದೇಶದಿಂದ ಹೊಡೆದಟ್ಟುವುದೊಂದೇ ಮಹೋದ್ದೇಶವಾಗಿತ್ತು. ದುರದೃಷ್ಟವಶಾತ್ ಆಗ ಭಾರತದಲ್ಲಿ ವೈಸ್‌ರಾಯ್ ಆಗಿದ್ದ ಲಾರ್ಡ್‌ಲಾನ್ಸ್‌ಡೌನ್‌ರಾಗಲೀ, ಅಥವಾ ಲಂಡನಿನ್ನಲ್ಲಿದ್ದ ಭಾರತದ ವಿಷಯಗಳ ಕಾರ್ಯದರ್ಶಿಯವರಾಗಲೀ ಇಂತಹ ದುಬಾರಿ ಯೋಜನೆಯೊಂದನ್ನು ಒಪ್ಪಿಕೊಳ್ಳಲು ತಯಾರಿರಲಿಲ್ಲ. ಬದಲಿಗೆ ಅಂತಹ ಯೋಜನೆಯನ್ನು ಸಲ್ಲಿಸಿದ ಹಾಫ್‌ಕಿನ್, ವಸಾಹತುಶಾಹಿ ಅಧಿಕಾರಾರೂಢರ ವಲಯದಲ್ಲಿ ಅನಪೇಕ್ಷಿತ ವ್ಯಕ್ತಿಯಾಗುವ ಪರಿಸ್ಥಿತಿ ಉಂಟಾಯಿತು.

ಅದಕ್ಕಿಂತಲೂ ಹೆಚ್ಚಿನ ಅಚ್ಚರಿಯ ಸಂಗತಿಯೆಂದರೆ ಅವರು ಯಾರನ್ನು ಸಂರಕ್ಷಿಸುವ ಸಲುವಾಗಿ ಈ ಯೋಜನೆಯನ್ನು ತಯಾರಿಸಿದ್ದರೋ ಅಂತಹ ಭಾರತೀಯರೂ ಅವರ ಉದ್ದೇಶಗಳನ್ನು ಅಪಾರ್ಥ ಮಾಡಿಕೊಂಡು, ಅವರನ್ನು ದೂಷಿಸುವಂತಾದದ್ದು! ಕಾಲರಾದಂಥ ಆಗಾಗ್ಗೆ ತಲೆಯೆತ್ತುತ್ತಿದ್ದ ಕಾಯಿಲೆಯನ್ನು ಸ್ವಲ್ಪ ಮಟ್ಟಿಗಾದರೂ ಉಪಶಮನ ಮಾಡಬಹುದೆಂದು ವಿದೇಶದಿಂದ ಕರೆಸಿದ ವಿಜ್ಞಾನಿ ಹೀಗೆ ದೊಡ್ಡ ದೊಡ್ಡ ಯೋಜನೆಗಳನ್ನು ಮುಂದೊಡ್ಡಿ ಅವರನ್ನು ಪೇಚಿಗೆ ಸಿಗುವಂತೆಮಾಡುವುದು ಸರ್ಕಾರೀ ವಲಯದಲ್ಲೂ ಅಸಮಾಧಾನ ಉಂಟುಮಾಡಿತ್ತು. ನಿಸ್ವಾರ್ಥ ಹಾಗೂ ಮಾನವೀಯ ಅನುಕಂಪದಿಂದ ಕಾರ್ಯನಿರ್ವಹಿಸಲು ದೇಶವಿದೇಶಗಳನ್ನು ಸುತ್ತಿ ಇಲ್ಲಿಗೆ ಬಂದಿದ್ದ ಯುವ ವಿಜ್ಞಾನಿ ಎರಡೂ ಕಡೆಯವರಿಂದ ಅನಾದರಕೊಳ್ಳಗಾದುದು ವಿಪರ್ಯಾಸವೇ ಸರಿ.ಆದರೂ ಹಾಫ್‌ಕಿನ್ ಎದೆಗುಂದಲಿಲ್ಲ. ಅವರದೇ ಆದ ಸಮರ್ಪಣಾ ಭಾವದಿಂದ ಕಾರ್ಯಪ್ರವೃತ್ತರಾದರು.

## ಕತ್ತಲ್‌ಭಾಗ್‌ನ ಕತ್ತಲು ಹಿಂಸರಿಯಿತು!

ಕಲ್ಕತ್ತಾಕ್ಕೆ ಬರುವ ಮೊದಲು ಲಂಡನ್ನಿನಲ್ಲಿ ಸಂಧಿಸಿದ ಕಲ್ಕತ್ತಾದ ಮುಖ್ಯ ನೈರ್ಮಲ್ಯಾಧಿಕಾರಿ ಡಾ॥ ವಿಲಿಯಂ ಸಿಂಪ್ಸನ್ ಕಾಲರಾ ಬಗೆಗೆ ಅವರು ಕೈಗೊಳ್ಳಬಹುದಾದ ಪ್ರಯೋಗಗಳಿಗೆ ತಮ್ಮ ಪುಟ್ಟ ಪ್ರಯೋಗಾಲಯದಲ್ಲೇ ಅವಕಾಶಮಾಡಿಕೊಡುವುದಾಗಿ ಭರವಸೆ ಇತ್ತಿದ್ದರಷ್ಟೆ. ಹಾಫ್‌ಕಿನ್ ಈಗ ಆ ಪ್ರಯೋಗಾಲಯದಲ್ಲೇ ಕಾಲರಾ ವ್ಯಾಕ್ಸಿನ್ ತಯಾರಿಸುವ ಕಾರ್ಯಕ್ರಮವನ್ನು ಆರಂಭಿಸಿಯೇ ಬಿಟ್ಟರು. ಅದನ್ನೀಗ ಅವರು ಹೆಮ್ಮೆಯಿಂದ ''ಆರೋಗ್ಯ ಸೇವಾ ಕೇಂದ್ರ''ವೆಂದು ಕರೆಯತೊಡಗಿದರು. ವ್ಯಾಕ್ಸೀನು ತಯಾರಾಗುವಷ್ಟರಲ್ಲೇ ಕಲ್ಕತ್ತಾ ನಗರದ ಹತ್ತಿರದಲ್ಲಿ ಇದ್ದ ಕತ್ತಲ್ ಭಾಗ್ ಎಂಬ ಗ್ರಾಮದಲ್ಲಿ ಕಾಲರಾ ಪ್ರಕರಣಗಳುಂಟಾಗುತ್ತಿದ್ದ ಸುದ್ದಿ ತಿಳಿದು ಬಂದಿತು. ಕಾಲರಾ ವ್ಯಾಧಿಯು ಯಾವುದೇ ಗೊತ್ತು ಗುರಿಗಳಿಲ್ಲದೆ ಹರಡುವುದಕ್ಕೆ ಬಂಗಾಳ ಪ್ರಾಂತ್ಯವು

ಹೆಸರಾಗಿತ್ತು. ಅಲ್ಲಿಯ ಹೆಸರಾಂತ ಬಂಗಾಳ ಹುಲಿಯಂತೆ ಅದು ಯಾವುದೇ ದಯಾ ದಾಕ್ಷಿಣ್ಯವಿಲ್ಲದೆ ಹಳ್ಳಿಗಳಿಗೆ ನುಗ್ಗುತ್ತಿತ್ತು. ಬಂಗಾಳದ ಹುಲಿ ಕೆಲವು ದಿನಗಳು ಹಳ್ಳಿಯೊಂದರ ಆಜುಬಾಜಿನಲ್ಲಿ ಅವಿತುಕೊಂಡು ದಾಳಿ ಮಾಡಲು ಸೂಕ್ತ ಸಮಯಕ್ಕಾಗಿ ಕಾಯ್ದು ಕೊಂಡಿರುತ್ತದೆಯಂತೆ; ನಂತರ ಹಠಾತ್ತಾಗಿ ಹಳ್ಳಿಗೆ ನುಗ್ಗಿ ಒಂದೆರಡು ಜೀವಗಳನ್ನು ಬಲಿ ತೆಗೆದುಕೊಳ್ಳುತ್ತದೆ; ಮತ್ತೆ ಕೆಲವು ವಾರ ಇಲ್ಲವೆ ತಿಂಗಳುಗಳ ಕಾಲ ಆ ಕಡೆ ತಲೆ ಹಾಕುವುದಿಲ್ಲವೆಂಬ ಪ್ರತೀತಿ ಇದೆ. ಅದೇ ರೀತಿ ಕಾಲರಾ ಸಹಾ ಅಲ್ಲಿ ಆಗಾಗ್ಗೆ ಕಣ್ಣು ಮುಚ್ಚಾಲೆ ಆಡುತ್ತದೆನ್ನುತ್ತಾರೆ. ಈ ವಿಷಯಗಳನ್ನೆಲ್ಲಾ ಅರಿತ ಹಾಫ್‌ಕಿನ್ ಕಾಲ ವ್ಯಯ ಮಾಡಲೇ ಇಲ್ಲ. ಒಡನೆಯೇ ತಮ್ಮ ಸಹೋದ್ಯೋಗಿಗಳೊಡನೆ ಕತ್ತಲ್‌ಭಾಗ್‌ಗೆ ಹೊರಡುವ ನಿರ್ಧಾರ ಮಾಡಿದರು.

ಹಾಫ್‌ಕಿನ್ನರು ಕಲ್ಕತ್ತಾಕ್ಕೆ ಬಂದ ಸಮಯದಲ್ಲೇ ನಾಲ್ಕು ಜನ ಭಾರತೀಯರು ವೈದ್ಯರನ್ನು ತಮ್ಮೆಡೆಗೆ ಸೆಳೆದುಕೊಂಡಿದ್ದರು. ಡಾಕ್ಟರುಗಳಾದ ಚೌಧುರಿ, ಚಟರ್ಜಿ, ದತ್ತ ಮತ್ತು ಗೌಸ್; ಎಲ್ಲರೂ ಒಳ್ಳೆಯ ಪ್ರತಿಭಾವಂತರಲ್ಲದೆ, ವಾತ್ಸಲ್ಯ ಭರಿತರೂ ಆಗಿದ್ದರು. ಹಾಫ್‌ಕಿನ್ನರ ರೀತಿ ನೀತಿಗಳಿಗೆ ಮಾರುಹೋಗಿ ಅವರ ಹಿಂಬಾಲಕರಾದರು. ಹಾಫ್‌ಕಿನ್ ಅವರನ್ನೆಲ್ಲಾ ಕೂಡಿಕೊಂಡು ಕುದುರೆ ಗಾಡಿಯಲ್ಲಿ ಪ್ರಯಾಣ ಮಾಡಲನುವಾದರು. ಇನಾಕ್ಯುಲೇಷನ್‌ಗೆ ಬೇಕಾಗುವ ಔಷಧ, ಇಂಜಕ್ಷನ್ ಸಿರಿಂಜುಗಳು ಮತ್ತಿತರ ಸರಂಜಾಮುಗಳನ್ನು ಗಾಡಿಯಲ್ಲಿ ಪೇರಿಸಿಟ್ಟದ್ದರು. ಒಂದು ರೀತಿಯಲ್ಲಿ ಅದೊಂದು ಶಿಕಾರಿ ತಂಡವೇ ಆಗಿಬಿಟ್ಟತು!ಇನಾಕ್ಯುಲೇಷನ್ ನೀಡಿದಾಗ ಉದ್ಭವಿಸಬಹುದಾದ ಅಡ್ಡ ಪರಿಣಾಮುಗಳನ್ನು ನಿಭಾಯಿಸಲು ಬೇಕಾಗುವ ಔಷಧ ಸಾಮಾಗ್ರಿಗಳನ್ನೂ ಸಹ ಸೇರಿಸಿಕೊಳ್ಳಲು ಅವರು ಮರೆಯಲಿಲ್ಲ.ಅವರು ಕೈಗೊಳ್ಳುತ್ತಿದ್ದ ವೈಜ್ಞಾನಿಕ ರೀತಿಯ ಪ್ರಯೋಗಗಳಲ್ಲಿ ಎದುರಾಗುವ ತೊಂದರೆಗಳನ್ನು ನಿವಾರಿಸುವುದು ಅವರ ಪ್ರಯೋಗಗಳ ಯಶಸ್ವಿಗೆ ಅತ್ಯಾವಶ್ಯಕವಾಗಿತ್ತು.

ಮಾರ್ಚ್ ತಿಂಗಳ (1893) ಒಂದು ದಿನ ಬೆಳಗಿನ ನಸುಕಿನಲ್ಲಿಯೇ ಹಾಫ್‌ಕಿನ್ ತಮ್ಮ ಸಂಗಡಿಗರೊಂದಿಗೆ ಕುದುರೆ ಗಾಡಿಯಲ್ಲಿ ಹೊರಟರು. ಕತ್ತಲಭಾಗ ಕಲ್ಕತ್ತಾ ನಗರಕ್ಕೆ ಕೆಲವೇ ಮೈಲಿಗಳ ದೂರದಲ್ಲಿರುವ ಒಂದು ಪುಟ್ಟ ಗ್ರಾಮ. ಅಲ್ಲಿ ಕೆಲವು ಚಿಕ್ಕಪುಟ್ಟ ಹುಲ್ಲು ಗುಡಿಸಲುಗಳಿದ್ದು ಆ ಊರಿನ ಜನಸಂಖ್ಯೆಯ ಇನ್ನೂರರೊಳಗಿತ್ತು; ಹಳ್ಳಿಯ ಸುತ್ತಲೂ ಭತ್ತದ ಗದ್ದೆಗಳಿದ್ದವು.

ಕತ್ತಲ ಭಾಗ್‌ನ್ನು ತಲುಪಿದ ತಂಡದವರು ನೇರವಾಗಿ ಕೆಲವು ಗುಡಿಸಲುಗಳಿಗೇ ಹೋದರು; ರೋಗಿಗಳನ್ನು ಪತ್ತೆ ಹಚ್ಚುವ ಕಾರ್ಯದಲ್ಲಿ ಮಗ್ನರಾದರು. ಒಂದು ಗುಡಿಸಿಲಿನಲ್ಲಿ ಎರಡು ಜನ ಕಾಲರಾ ರೋಗಿಗಳನ್ನೇನೋ ನೋಡಿದರು; ಅವರ ಪರಸ್ಥಿತಿ ಕೈಮೀರಿ ಹೋಗಿದ್ದು, ಬದುಕುವ ಸ್ಥಿತಿಯಲ್ಲಿರಲಿಲ್ಲ; ಹಾಗೂ ಸ್ವಲ್ಪ ಹೊತ್ತಿನಲ್ಲೇ ಅಸು ನೀಗಿದರು.

ಈ ತರಹೆಯ ನಿರಾಶಾದಯಕ ಪರಿಸ್ಥಿತಿಯಲ್ಲಿ ಅಲ್ಲಿ ಯಾವ ರೀತಿಯ ನಿರೋಧಕ ಕ್ರಮಗಳನ್ನು ಜರುಗಿಸುವುದೆಂದು ಯೋಚನಾಕ್ರಾಂತರಾಗಿ ಗುಡಿಸಲಿನಿಂದ ಹೊರ ಬಂದರು; ಈ ವೈದ್ಯರ ತಂಡ ಕತ್ತಲಭಾಗ್‌ಗೆ ಬರುವ ಸುದ್ದಿ ಕೆಲವರಿಗೆ ಅದ್ಹೇಗೋ ತಿಳಿದುಬಂದಿದ್ದು, ಅವರು ಹಾಫ್‌ಕಿನ್ನರ ತಂಡವನ್ನು ಭೇಟಿಯಾದರು; ಅಲ್ಲಿಯ ದೇವಸ್ಥಾನದ ಹತ್ತಿರದ ಚೌಕದಲ್ಲಿ ಕೆಲವು ಹಳ್ಳಿಗರನ್ನು ಸೇರಿಸಿದ್ದರು; ತಂಡದವರೆಲ್ಲಾ ಅಲ್ಲಿಗೆ ಹೋದರು. ತಂಡದಲ್ಲಿದ್ದ ಭಾರತೀಯ ವೈದ್ಯರು ಅವರೆಲ್ಲಾ ಅಲ್ಲಿಗೆ ಬಂದಿರುವ ಉದ್ದೇಶವನ್ನು ವಿವರಿಸಿದರು. ಕಾಲರಾ ವ್ಯಾಧಿಯ ರೂಪರೇಷೆಗಳನ್ನು ಅವರಿಗೆ ತಿಳಿಸಿ, ಅವರು ನೀಡಲು ಉದ್ದೇಶಿಸಿರುವ ಇಂಜಕ್ಷನ್ (ಇನಾಕ್ಯುಲೇಷನ್)ನ ಪ್ರಭಾವದಿಂದ ಕಾಲರಾದಿಂದ ಹೇಗೆ ರಕ್ಷಿಸಿಕೊಳ್ಳಬಹುದೆಂಬುದನ್ನು ವಿವರಿಸಿದರು. ಆದರೆ ಹಳ್ಳಿಗರು ಅಂತಹ ವಿಚಾರಗಳನ್ನು ಅರ್ಥೈಸಿಕೊಂಡು ಸ್ಪಂದಿಸುವ ಸ್ಥಿತಿಯಲ್ಲಿರಲಿಲ್ಲ. ಅವರೆಲ್ಲಾ ನಂಬಿದ ದೇವರು ಯಾರಲ್ಲಿ ಕಾಯಿಲೆ ಉಂಟು ಮಾಡಬೇಕು; ಯಾರಿಗೆ ಉಂಟು ಮಾಡಬಾರದು ಹಾಗೂ ಯಾರೆಲ್ಲಾ ಸಾಯಬೇಕು ಎಂಬುದನ್ನು ಮೊದಲೇ ನಿರ್ಧರಿಸಿ ಕೊಂಡಿರುತ್ತಾನೆ; ಅದರಿಂದ ಈ ವೈದ್ಯರಿಂದೇನಾದೀತು ಎಂಬ ಒಣ ವೇದಾಂತ ಹೇಳತೊಡಗಿದರು; ಅದಲ್ಲದೆ ಈ ಉಸಾಬರಿ ಅವರಿಗೇಕೆ ಎಂದು ಪ್ರಶ್ನೆಗಳ ಸುರಿಮಳೆಗೈದರು; ಮತ್ತು ಅಲ್ಲಿದ್ದ ಕೆಂಪು ಮೂತಿಯ ಇಂಗ್ಲಿಷ್ ವೈದ್ಯ ತನ್ನ ತಂಡದವರೊಂದಿಗೆ ಆ ಕ್ಷಣದಿಂದಲೇ ಊರಿಂದ ತೊಲಗಬೇಕೆಂದು ಗಲಾಟೆ ಮಾಡ ತೊಡಗಿದರು; ಜೊತೆಗಿದ್ದ ಭಾರತೀಯ ವೈದ್ಯರು ಮತ್ತೊಮ್ಮೆ ಪುಟ್ಟ ಭಾಷಣ ಮಾಡಿ ಹಾಫ್‌ಕಿನ್ನರ ಉದ್ದೇಶವನ್ನು ವಿವರಿಸತೊಡಗಿದರು. ಅವರ ಬುದ್ಧಿ ವಾದವನ್ನು ಅಲ್ಲಿಯ ಜನರು ಕೇಳಲು ತಯಾರಿರಲಿಲ್ಲ. ಮುಂದೆ ತಂಡದವರ ಮೇಲೆ ಕಲ್ಲು ತೂರಾಟ ಆರಂಭವಾಯಿತು. ಕುದುರೆಗಾಡಿಯೊಳಗಿದ್ದ ಕೆಲವು ಔಷಧ ಬಾಟಲಿಗಳಿಗೂ ಕಲ್ಲು ತಗುಲಿ ಒಡೆದ ಚೂರು ಚೂರಾದವು. ಗಾಜು ಒಡೆದ ಶಬ್ದ ಮತ್ತಷ್ಟು ಗಲಾಟೆ ಮಾಡಲು ಜನರಿಗೆ ಉತ್ತೇಜನ ನೀಡಿದಂತಾಯಿತು. ಇನ್ನೇನು ಜನರು ತಂಡದವರ ಮೇಲೆ ಹಿಂಸಾಚಾರಕ್ಕೆ ತೊಡಗಬಹುದಂಥಾ ಪರಿಸ್ಥಿತಿ ಉಂಟಾಗುವಂತ್ತಿತ್ತು. ಹಾಫ್‌ಕಿನ್ ತಂಡದವರು ಅಲ್ಲಿ ಹೆಚ್ಚುಕಾಲ ಕಳೆಯದೆ ಹಿಂದಿರುಗುವುದೇ ಸರಿಯಾದ ಮಾರ್ಗವೆಂಬ ನಿರ್ಧಾರಕ್ಕೆ ಬರುವುದರಲ್ಲಿದ್ದರು. ಅಷ್ಟರಲ್ಲೇ ಬಿಳೀ ವೈದ್ಯ (ಹಾಫ್‌ಕಿನ್) ತನ್ನ ಷರಟನ್ನು ಕಳಚ ತೊಡಗಿದ. ಭಾರತೀಯ ವೈದ್ಯನೊಬ್ಬನಿಗೆ ತನ್ನ ಬಲ ಭುಜವನ್ನು ತೋರಲಾರಂಭಿಸಿದರು. ಅವರ ಇಂಗಿತವನ್ನರಿತ ಭಾರತೀಯ ವೈದ್ಯರೊಬ್ಬರು ಇನಾಕ್ಯುಲೇಷನ್ ಲಸಿಕೆ ಇದ್ದ ಬಾಟಲೊಂದಕ್ಕೆ ಸಿರಿಂಜ್ ಚುಚ್ಚಿ ಸ್ವಲ್ಪ ಔಷಧಿಯನ್ನು ಹೊರತೆಗೆದು ಹಾಫ್‌ಕಿನ್ನರ ಭುಜಕ್ಕೆ ಇಂಜಕ್ಷನ್ ಮಾಡಿಯೇಬಿಟ್ಟರು. ಈ ಚಮತ್ಕಾರ ಅದೆಷ್ಟು ಅನಿರೀಕ್ಷಿತ ಹಾಗೂ ಚುರುಕಾಗಿ ಜರುಗಿತ್ತೆಂದರೆ ಅಲ್ಲಿದ್ದ ಜನರೆಲ್ಲಾ ಸ್ತಂಭೀಭೂತರಾದರು; ಅವರು ಮಾಡುತ್ತಿದ್ದ ಗದ್ದಲದ ಸದ್ದಡಗಿತು. ಹಾಫ್‌ಕಿನ್ ತಮ್ಮ ಜೊತೆಗಿದ್ದ ಇತರ ಭಾರತೀಯ ವೈದ್ಯರೂ ಮತ್ತು ಅವರ ಸಂಗಡಿಗರಿಗೆಲ್ಲಾ ಅದೇ ರೀತಿಯಲ್ಲಿ ಇಂಜಕ್ಷನ್ ಮಾಡಿದರು. ತಮ್ಮ ಎದುರಿಗೇ ನಡೆದ

ಸೋಜಿಗವನ್ನು ಹಳ್ಳಿಗರು ನಂಬಲಾರದಂತಾದರು. ಸಂತೆ, ಪರಿಷೆಗಳಲ್ಲಿ ಕೆಲವು ಮಂತ್ರವಾದಿಗಳು, ಫಕೀರರು ಅವರನ್ನು ಒಲಿಸಿಕೊಳ್ಳಲು ಮಾಡುತ್ತಿದ್ದ ಚಮತ್ಕಾರಿಕ ಪವಾಡಗಳು ಅವರ ನೆನಪಿಗೆ ಬಂದವು. ಅವರಲ್ಲೀಗ ಕೆಂಪು ಮೂತಿಯ ವೈದ್ಯ ಮೋಸದಿಂದ ಕೆಡಕು ಮಾಡಲಾರನೆಂಬ ಭಾವನೆಯುಂಟಾಯಿತು.

ಈ ಹಂತದಲ್ಲಿ ಡಾ।। ದತ್ತ, ಹಾಫ್‌ಕಿನ್ನರು ಇಂಗ್ಲಿಷ್‌ನಲ್ಲಿ ಮಾಡಿದ ವಿವರಣಾತ್ಮಕ ಭಾಷಣವನ್ನು ಬಂಗಾಳಿ ಭಾಷೆಗೆ ಅನುವಾದ ಮಾಡಿ ವಿವರಣೆ ನೀಡಿದರು. ಬಹುಶಃ ಅವರೆಲ್ಲಾತಿಳಿದುಕೊಂಡಿರುವಂತೆ ಕೆಂಪು ಮೂತಿಯ ವೈದ್ಯ ಇಂಗ್ಲಿಷ್ ಜನಾಂಗದ ವನಲ್ಲವೆಂತಲೂ, ಅವರು ಮಿತ್ರರಾಷ್ಟ್ರವಾದ ರಷ್ಯಾ ಸಂಜಾತರೆಂಬ ವಿಷಯವನ್ನು ಹೊರಗೆಡಹಿದರು. ಇಷ್ಟರಲ್ಲೇ ಇಂಜಕ್ಷನ್ ನಿರಪಾಯಕರವೆಂಬ ನಂಬಿಕೆ ಕೆಲವು ಯುವಕರಲ್ಲುಂಟಾಗಿರಬೇಕು. ಅವರು ಸ್ವಪ್ರೇರಿತರಾಗಿ ಒಬ್ಬರಾದ ಮೇಲೆ ಒಬ್ಬರಂತೆ ಇನಾಕ್ಯುಲೇಷನ್ ಮಾಡಿಸಿಕೊಳ್ಳಲು ಮುಂದೆ ಬಂದರು.ಅಂತಿಮವಾಗಿ ಕತ್ತಲಭಾಗ್‌ನಲ್ಲಿದ್ದ ಸುಮಾರು ಎರಡು ನೂರು ಜನರ ಪೈಕಿ 116 ಮಂದಿ ಇನಾಕ್ಯುಲೇಷನ್ ಮಾಡಿಸಿ ಕೊಂಡರು! ಮುಂದಿನ ದಿನಗಳಲ್ಲಿ ಕತ್ತಲಭಾಗ್‌ನಲ್ಲಿ ಕಾಲರಾದಿಂದ ಒಂಭತ್ತು ಜನ ಸಾವಿಗೀಡಾದರು. ಅವರ ಪೈಕಿ ಕಾಲರಾ ನಿರೋಧದ ಇಂಜಕ್ಷನ್ ಮಾಡಿಸಿಕೊಂಡವ ರಾರೂ ಸೇರಿರಲಿಲ್ಲ. ಇಂತಹ ಅದ್ಭುತ ಪ್ರಯೋಗ ಜನರ ಕಣ್ಣೆದುರಿನಲ್ಲೇ ಜರುಗಿದ್ದು ಮುಂದೆ ವ್ಲಾದಿಮಿರ್ ಹಾಫ್‌ಕಿನ್ನರ ಯಶಸ್ವೀ ಭಾರತ ಪರ್ಯಟನಕ್ಕೆ ನಾಂದಿಯಾಯಿತು.

ಈ ಹಂತದಲ್ಲಿಹಾಫ್‌ಕಿನ್ ಆದಿನ ಜರುಗಿಸಿದ ಮಹತ್ಕಾರ್ಯದ ಮಹತ್ವ ಇತಿಹಾಸದಲ್ಲಿ ಕೆಲವೇ ನಿದರ್ಶನಗಳಿಗೆ ಹೋಲಿಕೆಯಾಗಬಹುದು. ಹಾಫ್‌ಕಿನ್ ಗತಿಸಿದಾಗ ಕೆಲವು ವೃತ್ತ ಪತ್ರಿಕೆಗಳಲ್ಲಿ ಶ್ರದ್ಧಾಂಜಲಿಗಳು ಪ್ರಕಟವಾಗಿದ್ದವು. ಅವುಗಳ ಪೈಕಿ ಒಂದನ್ನು ಉದಹರಿಸಬಹುದಾಗಿದೆ ''ಹಿಂದಿನ ಕಾಲದಲ್ಲಿ ಹೊಸ ಮತ ಧರ್ಮ ಪ್ರವರ್ತಕರು ತಮ್ಮ ಮತಗಳ ಬಗೆಗೆ ಪ್ರಚಾರ ಕೈಗೊಳ್ಳುವ ವಾಡಿಕೆ ಇತ್ತು. ಅಂತಹ ಮತ ಧರ್ಮದ ತತ್ವಗಳನ್ನು ಸಹಿಸಲಾರದವರು ಅವರ ಮೇಲೆ ಕಲ್ಲು ತೂರಾಟ ಮಾಡಿ ಹಿಂಸೆಗೀಳಿಯುತ್ತಿದ್ದುದೂ ಅಪರೂಪವಾಗೇನೂ ಇರಲಿಲ್ಲ. ಇದೀಗ ವೈಜ್ಞಾನಿಕವಾಗಿ ಕಾಯಿಲೆಯೊಂದನ್ನು ಎದುರಿಸುವ ಪ್ರಚಾರವನ್ನು ಕೈಗೊಂಡಾಗ ವ್ಲಾದಿಮಿರ್ ಹಾಫ್‌ಕಿನ್ನರ ಪಾಡೂ ಅದೇ ಆಯಿತು. ಹಾಫ್‌ಕಿನ್ನರೂ ಸಹ ವಿಜ್ಞಾನ ಧರ್ಮಪ್ರಚಾರಕ ಪ್ರವೃರ್ತಕರೇ ಆದರು (Apostle)'' ಎಂದು ಹೊಗಳಿತ್ತು.

## ವ್ಯಾಕ್ಸೀನುಗಳ ಬೇಡಿಕೆಯ ಮಹಾಪೂರ

ಕತ್ತಲಭಾಗ್‌ನಲ್ಲಿ ಹಾಫ್‌ಕಿನ್‌ರ ಚಮತ್ಕಾರಿಕ ವಿಜಯದ ಸುದ್ದಿ ಸುತ್ತಮುತ್ತಲ ಹಳ್ಳಿಗಳಿಗೆ ಹರಡಿತು. ಅವುಗಳಿಂದ ಅವರ ಆರೋಗ್ಯ ಸೇವಾಕೇಂದ್ರಕ್ಕೆ ಬೇರೆ ಬೇರೆ ಊರುಗಳಿಂದ ಇನಾಕ್ಯುಲೇಷನ್ ಕಾರ್ಯಕ್ರಮ ಏರ್ಪಡಿಸಲು ಕರೆಗಳು ಬರಲಾರಂಭಿ ಸಿದವು. ಬಹುಪಾಲು ಅನಕ್ಷರಸ್ಥರೇ ಇರುವ ಭಾರತದಲ್ಲಿ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುವ

ಸುದ್ದಿಗಳು ಅವರನ್ನು ತಲುಪುವುದು ಅಪರೂಪವೇ.ಆದರೂ ದೂರದ ಬಿಹಾರ ರಾಜ್ಯದ ಗೊಂಡಾರಣ್ಯದ ನಡುವೆ ಹುದುಗಿದ್ದ ಕೆಲವು ಹಳ್ಳಿಗಳಿಂದಲೇ ಮೊದಲ ಬೇಡಿಕೆಗಳು ಬಂದಿದ್ದವೆಂದರೆ ಅಚ್ಚರಿಯಾಗಬಹುದು; ಅದರ ಹಿಂದೆಯೇ ಕಲ್ಲಿದ್ದಲು ಗಣಿ ಪ್ರದೇಶವಾದ ಛೋಟಾ ನಾಗಪುರದಲ್ಲೂ ಕಾಲರಾ ಹಾಹಾಕಾರ ಉಂಟಾಗಿ ಅಲ್ಲಿಗೂ ಬರುವಂತೆ ತುರ್ತುಕರೆ ಬಂದಿತು.ಅವರಿಗೆಲ್ಲಾ ಸಾಕಾಗುವಷ್ಟು ಲಸಿಕೆಯನ್ನು ತಯಾರು ಮಾಡುವ ಕಾರ್ಯದಲ್ಲಿ ಅವರೆಲ್ಲಾ ತೊಡಗಿಕೊಂಡರು. ಮುಂದೆ ಸುಮಾರು ಎರಡೂವರೆ ವರ್ಷಗಳ ಕಾಲ ಎಡೆಬಿಡದೆ ಹಾಫ್‌ಕಿನ್ ಮತ್ತು ಸಂಗಡಿಗರು ಸತತವಾಗಿ ಈ ಸಲುವಾಗಿ ಭಾರತ ಪರ್ಯಟನ ಮಾಡಬೇಕಾಯಿತು.

ಇಂಗ್ಲಿಷ್ ಜನಾಂಗದವರ ಮೇಲೆ ಭಾರತೀಯರಿಗೆ ಮೊದಲಿನಿಂದಲೂ ಇದ್ದ ದ್ವೇಷ, ಹಾಫ್‌ಕಿನ್ನರು ರಷ್ಯಾದವರೆಂದು ತಿಳಿದು ಬಂದಾಗ ಜನಸಾಮಾನ್ಯರಲ್ಲಿ ಅವರಲ್ಲಿ ಈಗ ಹೆಚ್ಚಿನ ನಂಬಿಕೆ ಮೂಡಲು ಸಹಕಾರಿಯಾಯಿತು. ಅವರಲ್ಲಿದ್ದ ಮಾನವಪ್ರೇಮ ಜನರಲ್ಲಿ ಪ್ರೀತಿ, ವಿಶ್ವಾಸ ಮತ್ತು ನಂಬಿಕೆಯುಂಟುಮಾಡಿತ್ತು.

ಬಿಹಾರದಲ್ಲಿ ಇನಾಕ್ಯುಲೇಷನ್ ಕಾರ್ಯಕ್ರಮ ಮುಗಿಯುತ್ತಲೇ ಹಾಫ್‌ಕಿನ್ ಆಗ್ರಾಕ್ಕೆ ಧಾವಿಸಬೇಕಾಯಿತು. ಅಲ್ಲಿ ಎರಡು ಜನ ಮಹಿಳೆಯರೂ ಸೇರಿದಂತೆ 42 ಜನ ಸಾರ್ವಜನಿಕರ ಎದುರಲ್ಲೇ ಸ್ವಪ್ರೇರಿತರಾಗಿ ಇನಾಕ್ಯುಲೇಅನ್ ಮಾಡಿಸಿಕೊಂಡರು. ನಂತರದ ದಿನಗಳಲ್ಲಿ 900 ಜನರು ಇದೇ ರೀತಿ ಚಿಕಿತ್ಸೆಗೊಳಗಾದರು. ಈ ರೀತಿಯ ಇನಾಕ್ಯುಲೇಷನ್‌ಗಳ ಸಾರ್ವಜನಿಕ ಪ್ರಯೋಗಗಳು ಸುದ್ದಿ ಹರಡಿದಂತೆಲ್ಲಾ ಮುಂದೆ ಕಾಲರಾ ಇನಾಕ್ಯುಲೇಷನ್ ಮಾಡಿಸಿಕೊಳ್ಳುವವರ ಜನ ಪ್ರವಾಹವೇ ಹರಿಯಲಾರಂಭಿಸಿತು.

ಊರಿಂದೂರಿಗೆ ಸಂಚಾರ ಸೌಲಭ್ಯಗಳು ಆಗ ಅಷ್ಟೇನು ಸುಲಭವಾಗಿ ದೊರೆಯುತ್ತಿರಲಿಲ್ಲ. ಎತ್ತಿನಗಾಡಿ, ಕುದುರೆ ಗಾಡಿ ಹಾಗೂ ರೈಲುಗಳಲ್ಲಿ ಅವರ ಪ್ರಯಾಣ ಸಾಗುತ್ತಿತ್ತು. ಕೆಲಸಾರಿ ಅವರ ಪ್ರಯಾಣದ ಗತಿ ನಿಧಾನವೆನ್ನಿಸುವಂತಿದ್ದರೂ, ಅದು ಎಡೆಬಿಡದೆ ಸತತವಾಗಿ ಸಾಗುತ್ತಲೇ ಇತ್ತು. ಸಾಮಾನ್ಯವಾಗಿ ಉತ್ತರ ಭಾರತದ ಜೀವನಾಡಿಯಾದ ಗಂಗಾನದಿ ಮತ್ತು ಅದರ ಉಪನದಿಗಳ ಜಾಡನ್ನು ಹಿಡಿದು ಅವರ ಪ್ರಯಾಣ ಮುಂದುವರಿಯುತ್ತಿತ್ತು. ಉತ್ತರ ಭಾರತದ ಪೂರ್ವ ವಲಯದಲ್ಲಿ ಆರಂಭವಾದ ಅವರ ಪಯಣ ಹಿಮಾಲಯದ ತಪ್ಪಲಿನ ಪ್ರಾಂತ್ಯಗಳ ಮೂಲಕ ವಾಯುವ್ಯ ಪ್ರಾಂತ್ಯದ ಗಡಿನಾಡು ಪ್ರದೇಶಗಳವರೆಗೂ ಮುಂದುವರಿಯಿತು. ಮುಂದೆ ಸಿಂಧೂ ನದಿಯ ಜಾಡನ್ನು ಹಿಡಿದು ಪಂಜಾಬ್ ಮತ್ತು ಕಾಶ್ಮೀರದವರೆಗೂ ಅವರ ಪ್ರಯಾಣ ಮುಂದುವರಿದಿತ್ತು. ಜೊತೆಗೆ ಎಲ್ಲೆಲ್ಲಿ ಕಾಲರಾದ ಪಿಡುಗು ಉಲ್ಬಣಾವಸ್ಥೆಯಲ್ಲಿದೆ ಎಂದ ಕಡೆಗಳಿಗೆಲ್ಲಾ ಅವರು ನಡುವೆ ಧಾವಿಸುತ್ತಿದ್ದರು; ಅದಕ್ಕಾಗಿ ಪಶ್ಚಿಮದ ಬೆಲೂಚಿಸ್ಥಾನ ಮತ್ತು ಸಿಂಧ್ ಪ್ರಾಂತ್ಯಗಳಿಗೂ ಹೋಗಬೇಕಾಯಿತು.

ಹಾಫ್‌ಕಿನ್ನರು ಆರು ತಿಂಗಳ ಕಾಲ ಸತತವಾಗಿ ಜರುಗಿಸಿದ ಕಾಲರಾ ನಿರೋಧಕ ವ್ಯಾಕ್ಸೀನಿನ ಯಶಸ್ಸನ್ನು **ಬ್ರಿಟಿಷ್ ಮೆಡಿಕಲ್ ಜರ್ನಲ್** ವೈದ್ಯಲೋಕಕ್ಕೆ ಅದೇ ಮೊದಲ ಸಾರಿಗೆ ಬಹಿರಂಗಗೊಳಿಸಿತು. ಅದರ ನವೆಂಬರ್ 1893ರ ಸಂಚಿಕೆಯಲ್ಲಿ ''ಭಾರತದ ಈಶಾನ್ಯ ಪ್ರದೇಶಗಳಿಂದ ಹೊರಟ ಹಾಫ್‌ಕಿನ್ನರು ಸಾಮಾನ್ಯವಾಗಿ ಪುಣ್ಯಕ್ಷೇತ್ರಗಳಿಗೆ ಪಯಣಿಸುವ ಯಾತ್ರಾರ್ಥಿಗಳ ಜಾಡನ್ನೇ ಅನುಸರಿಸಿ ಬಹುದೂರದ ಕಾಶ್ಮೀರದವರೆಗೂ ಹೋಗಿದ್ದಾರೆ. ಹೋದೆಡೆಗಳಲೆಲ್ಲಾ ಕಾಲರಾ ವಿರುದ್ಧ ಇನಾಕ್ಯುಲೇಷನ್ ಮಾಡುತ್ತಿದ್ದಾರೆ...ಹಗಲು ರಾತ್ರಿಗಳ ಪರಿವೆಯೇ ಇಲ್ಲದೆ ಸದಾ ಅವರು ಈ ಕಾರ್ಯದಲ್ಲಿ ಮಗ್ನರಾಗಿರುವುದನ್ನು ನೋಡಬಹುದು. ಅವರಿಗೆ ವಿಶ್ರಾಂತಿ ದೊರೆಯುವ ಸಮಯವೆಂದರೆ ಊರಿಂದೂರಿಗೆ ಪ್ರಯಾಣ ಮಾಡುತ್ತಿರುವಾಗಲೇ'' ಪತ್ರಿಕೆಯು ಮುಂದುವರಿದು ಅವರು ಇನಾಕ್ಯುಲೇಷನ್ ಮಾಡಿದ ಬಗೆಗೆ ಕೆಲವು ವಿವರಗಳನ್ನು ಒದಗಿಸಿತ್ತು.''ಆಲ್ಮೋರಾದಲ್ಲಿ 235, ರಾಣೀ ಖೇಟ್‌ನಲ್ಲಿ 375 ದ್ವಾರಾನಗರದಲ್ಲಿ 252, ಕಾನ್‌ಪುರದಲ್ಲಿ 155. ಈ ತನಕ ಹಲವು ಸಾವಿರ ಜನಗಳಿಗೆ ಇನಾಕ್ಯುಲೇಷನ್ ಮಾಡಿದ್ದಾರೆ. ಅವರಲೆಲ್ಲಾ ಕಾಲರಾ ವಿರುದ್ಧ ಇಮ್ಯುನಿಟಿ ಉಂಟಾಗಿದೆಯೇ ಎಂಬುದನ್ನು ಭವಿಷ್ಯವೇ ನಿರ್ಧರಿಸಬೇಕು. ಆದರೂ ಹಾಫ್‌ಕಿನ್ನರು ಯಾವುದೇ ಹಳ್ಳಿಗೆ ಆಗಮಿಸಿದ್ದಾರೆಂದರೆ ಕಾಲರಾದ ಭಯ ಅಲ್ಲಿಂದ ಮಾಯವಾಗಿ ಬಿಡುತ್ತಿತ್ತು'' ಎಂದು ವರದಿ ಮಾಡಿತ್ತು.

ಈ ತನಕ ಇನಾಕ್ಯುಲೇಷನ್ ಮಾಡಿಸಿಕೊಂಡ ಎಷ್ಟು ಜನರಲ್ಲಿ ಕಾಲರಾ ವಿರುದ್ಧ ರೋಗ ನಿರೋಧಕ ಶಕ್ತಿ (ಇಮ್ಯುನಿಟಿ) ಉಂಟಾಗಿದೆಯೆಂಬುದನ್ನು ನಿರ್ಧರಿಸುವುದು ಮುಂದಿನ ಅತ್ಯಂತ ಪ್ರಮುಖ ಕೆಲಸವಾಗಿತ್ತು. ಅದನ್ನು ನಿರ್ಧರಿಸುವುದು ಆ ಮಹಾನ್ ಯಾತ್ರೆಯ ಮುಂದಾಳತ್ವವಹಿಸಿದ್ದ ಹಾಫ್‌ಕಿನ್ನರ ಜವಾಬ್ದಾರಿಯಾಗಿತ್ತು. ಆ ಉದ್ದೇಶ ಸಾಧನೆಗಾಗಿಯೇ ಹಾಫ್‌ಕಿನ್ ಮತ್ತು ಅವರ ಸಂಗಡಿಗರು ಸಾವಿರಾರು ಮೈಲಿಗಳ ಪ್ರಯಾಣ ಕೈಕೊಂಡಿದ್ದು. ಬ್ರಿಟಿಷ್ ಸರ್ಕಾರದವರು ಹಾಫ್‌ಕಿನ್ನರಂಥ ಗೌರವಾನ್ವಿತ ವ್ಯಕ್ತಿ ಹೋದೆಡೆಗಳಲೆಲ್ಲಾ ಸರ್ಕಾರೀ ವಸತಿ ಗೃಹಗಳಲ್ಲಿ ತಂಗುವ ಅವಕಾಶ ಕಲ್ಪಿಸಿಕೊಟ್ಟಿರುತ್ತಿದ್ದರು. ಆದರೆ ಹಾಫ್‌ಕಿನ್ನರು ಅವುಗಳನ್ನೆಲ್ಲಾ ಗಣನೆಗೆ ತೆಗೆದುಕೊಳ್ಳದೆ ಪ್ರತಿರಾತ್ರಿಯೂ ಹಳ್ಳಿಗಳ ಗುಡಿಸಿಲುಗಳಲ್ಲೇ ಇತರರ ಜತೆ ತಂಗುತ್ತಿದ್ದರು.

ಹಾಫ್‌ಕಿನ್ ತಯಾರಿಸಿ, ಬಳಸುತ್ತಿದ್ದ ವ್ಯಾಕ್ಸೀನು ಮನುಷ್ಯರಲ್ಲಿ ಕಾಲರಾ ವಿರುದ್ಧ ರಕ್ಷಣೆ ನೀಡಬಲ್ಲುದೇ? ವ್ಯಕ್ತಿಯೊಬ್ಬನಿಗೆ ನೀಡಬಹುದಾದ ವ್ಯಾಕ್ಸೀನಿನ ಪ್ರಮಾಣ (ಡೋಸ್)ಎಷ್ಟಿರಬೇಕು? ಅದರ ಶಕ್ತಿ ಎಷ್ಟಿರಬೇಕು? ಅದರಿಂದುಂಟಾಗಬಹುದಾದ ಪ್ರತಿರೋಧಕ ಶಕ್ತಿ ಮನುಷ್ಯನಲ್ಲಿ ಎಷ್ಟು ದಿನ ಉಳಿದುಕೊಂಡಿರುತ್ತದೆ? ಎಂಬೆಲ್ಲಾ ವಿಷಯಗಳ ಬಗೆಗೆ ಅವರು ಕಗ್ಗತ್ತಲಲ್ಲಿ ತಡಕಾಡುವವರ ಸ್ಥಿತಿಯಲ್ಲೇ ಇದ್ದರೆನ್ನಬಹುದು. ಈ ವಿಷಯಗಳ ಬಗೆಗೆ ಅವರಿಗೆ ಹಲವು ಅನುಮಾನಗಳಿದ್ದರೂ, ಅದರಿಂದ ಹಾನಿಯಂತೂ ಆಗುತ್ತಿರಲಿಲ್ಲವೆಂಬುದು ಮನವರಿಕೆಯಾಗಿತ್ತು;ಇಂಜಕ್ಷನ್ ನೀಡಿದಾಗ ವ್ಯಕ್ತಿಗೆ

ತಾತ್ಕಾಲಿಕವಾಗಿಯಾದರೂ ಸ್ವಲ್ಪ ಶಾರೀರಿಕ ಬೇನೆಯಾಗುತ್ತಿತ್ತು; ಅವರಲ್ಲಿ ಕೆಲವರಾದರೂ ಒಂದೆರಡು ದಿನಗಳಾದರೂ ದೈನಂದಿನ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳ ಲಾಗುತ್ತಿರಲಿಲ್ಲ. ಬಹುಶ. ಈ ಪರಿಣಾಮಗಳು ಸಾಮಾನ್ಯವಾಗಿ ಇತರ ವ್ಯಾಕ್ಸಿನೇಷನ್ ಮಾಡಿದಾಗಲೂ ಆಗುವಂತಹವೇ. ಮೇಲಿನ ಪ್ರಶ್ನೆಗಳಿಗೆ ತತ್‌ಕ್ಷಣ ಉತ್ತರ ದೊರೆಯಲಾರದು; ಸೂಕ್ತ ಉತ್ತರ ದೊರೆಯಲು ಹಲವು ವರ್ಷಗಳೇ ಹಿಡಿಯಬಹುದಿತ್ತು. ಬಹುಶಃ ಅವರು ಕಾಲರಾ ನಿರೋಧಕ ವ್ಯಾಕ್ಸೀನೇಷನ್ ಮಾಡಿದ ಪ್ರದೇಶಗಳಲ್ಲಿ ಕಾಲರಾ ವ್ಯಾಧಿ ಮತ್ತೆ ಆಕ್ರಮಣ ಮಾಡಿದಾಗ ಆ ವ್ಯಾಕ್ಸಿನ್ ತೆಗೆದಕೊಂಡವರಲ್ಲಿ ಎಷ್ಟು ಜನ ವ್ಯಾಧಿ ಪೀಡಿತರಾಗಿ ಸಾವಿಗೀಡಾಗುತ್ತರೆಂಬುದರ ಪ್ರಮಾಣದಿಂದ ಅದರ ಪ್ರಭಾವವನ್ನು ನಿರ್ಧರಿಸಲು ಸಾಧ್ಯ. ಹಾಫ್‌ಕಿನ್ ಕಾಲರಾ ವ್ಯಾಕ್ಸೀನೇಷನ್ ಆರಂಭಿಸಿದ ಒಂದು ವರ್ಷದ ಅವಧಿಯಲ್ಲಿ ಸುಮಾರು 25,000 ಜನರಿಗೆ ನೀಡಲಾಗಿತ್ತು; ಅವರಲ್ಲಿ ಮೂರನೇ ಎರಡರಷ್ಟು ಜನರಿಗೆ ಎರೆಡೆರಡು ಸಾರಿ ಇಂಜಕ್ಷನ್ ನೀಡಿದ್ದರು. ಇಂಜಕ್ಷನ್ ಮಾಡಿಸಿ ಕೊಂಡವರಲ್ಲಿ ಕಾಲರಾ ತಗುಲಿದ್ದಾಗಲೀ, ಅದರಿಂದ ಸತ್ತವರಾಗಲೀ ತೀರಾ ಕಡಿಮೆ ಪ್ರಮಾಣದಲ್ಲಿತ್ತೆಂಬುದು ಗಮನಕ್ಕೆ ಬಂದಿತು. ಈ ತರ್ಕದಿಂದ ಅವರು ಬಳಸುತ್ತಿದ್ದ ವ್ಯಾಕ್ಸೀನು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತೆಂಬುದರಲ್ಲಿ ಸಂದೇಹವಿರಲಿಲ್ಲ.

ಅದೇ ಸಮಯದಲ್ಲಿ ಲಕ್ನೋ ನಗರದಲ್ಲಿದ್ದ ಬ್ರಿಟಿಷ್ ಮತ್ತು ಭಾರತೀಯ ಸೇನಾ ಪಡೆಗಳಲ್ಲಿ ಕಾಲರಾದ ಸೋಂಕು ಅತ್ಯುಗ್ರವಾಗಿ ಹರಡಿತು. ಆ ಎರಡೂ ರೆಜಿಮೆಂಟಿನ ಸೈನಿಕರಿಗೆ ಹಾಫ್‌ಕಿನ್ನರಿಂದ ವ್ಯಾಕ್ಸಿನೇಷನ್ ಮಾಡಿಸಲಾಯಿತು. ಮುಂದೆ ಒಂದೇ ವರ್ಷದಲ್ಲಿ ಕಾಲರಾ ಆ ವಲಯದಲ್ಲಿ ಕಾಣಸಿಕೊಂಡಿತು. ಹಿಂದಿನ ವರ್ಷ ಇನಾಕ್ಯು ಲೇಷನ್ ಜರುಗಿಸಿದ್ದ ಈ ಎರಡೂ ರೆಜಿಮೆಂಟುಗಳಲ್ಲಿ ಕಾಲರಾದಿಂದ ಸಂಭವಿಸಿದ ಸಾವು ನೋವುಗಳು ಆ ರೀತಿ ವ್ಯಾಕ್ಸೀನು ಮಾಡಿಸಿಕೊಳ್ಳದಿದ್ದ ಇತರ ರೆಜಿಮೆಂಟುಗಳಿಗಿಂತ ಬಹಳಷ್ಟು ಕಡಿಮೆಯಾಗಿತ್ತು. ಇದಲ್ಲದೆ ಪ್ರತ್ಯಕ್ಷ ಹಾಗೂ ಪರೋಕ್ಷ ಸಾಕ್ಷ್ಯಾಧಾರ ಗಳಿಂದಲೂ ಈ ಪದ್ಧತಿಯ ಉಪಯುಕ್ತತೆಯನ್ನು ಸಾರುವ ಇತರ ಅಂಶಗಳೂ ವ್ಯಕ್ತವಾಗುತ್ತಿದ್ದವು. ಈ ಬಗೆಗೆ ಅಧಿಕಾರಿ ಮೂಲಗಳಿಂದ ಅಂಕಿಸಂಖ್ಯೆಗಳು ಪ್ರಕಟವಾಗುವ ಮೊದಲೇ ವ್ಯಾಕ್ಸೀನ್ ನೀಡಿದ್ದ ಹಲವು ಹಳ್ಳಿಗಳು ಮತ್ತು ಪಟ್ಟಣಗಳ ಸಾವಿರಾರು ಜನರು ಹಾಫ್‌ಕಿನ್ನರು ಹೋದೆಡೆಗಳಲೆಲ್ಲಾ ಅವರನ್ನು ಭೇಟಿ ಮಾಡಿ ತಮಗಾಗಿದ್ದ ಉಪಕಾರದ ಬಗೆಗೆ ಕೃತಜ್ಞತೆ ಸಲ್ಲಿಸುತ್ತಿರುವ ಸುದ್ದಿ ಸಮಾಚಾರಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ತಮ್ಮ ಕೃತಜ್ಞತೆಯ ದ್ಯೋತಕವಾಗಿ ಲಕ್ನೋ ಮತ್ತು ಅಲಿಘರ್ ನಗರ ವಾಸಿಗಳು ಹಾಫ್‌ಕಿನ್ನರಿಗೆ 15000 ರೂಪಾಯಿಗಳು ಮತ್ತು ಸ್ಥಳೀಯವಾಗಿ ತಯಾರಿಸಿದ ಬೆಳ್ಳಿಯ ಕಪ್ ಬಹುಮಾನವಾಗಿ ನೀಡಿದರೆಂದು **ಬೊಂಬಾಯಿ ಗೆಜೆಟ್** ತನ್ನ ಜುಲೈ (1893)ರ ಸಂಚಿಕೆಯಲ್ಲಿ ಪ್ರಕಟಿಸಿತ್ತು. ಹಿಂದೆ ಅವರನ್ನು ಅನುಮಾನದಿಂದ ಕಂಡ ಜನರೇ ಈಗ ಅವರನ್ನು ಆರಾಧಿಸುವ ಸ್ಥಿತಿಗೆ ಬಂದಿದ್ದರು.

## ಮತ್ತೆ ಅಪಸ್ವರ

ಹಾಫ್‌ಕಿನ್ನರು ಹೀಗೆ ಗಳಿಸುತ್ತಿದ್ದ ಜನಪ್ರಿಯತೆಯನ್ನೂ ಉತ್ತರ ಭಾರತದಲ್ಲಿ ಎಲ್ಲರೂ ಸಹಿಸುತ್ತಿದ್ದರೆಂದು ಹೇಳಲಾಗದು. ಅವರ ಪ್ರಖ್ಯಾತಿಯನ್ನು ಅಲ್ಲಗೆಳೆಯುವ ಉದ್ದೇಶದಿಂದ ಕಲ್ಕತ್ತಾದ ಕೆಲವು ಪತ್ರಿಕೆಗಳು ಅಪಪ್ರಚಾರ ಮಾಡತೊಡಗಿದವು; ಅವರೊಬ್ಬ ರಷ್ಯಾದಿಂದ ಬಂದಿರುವ ಗೂಢಚಾರನೆಂದು ಅಪವಾದ ಹೊರಿಸಿ ಲೇಖನಗಳನ್ನು ಪ್ರಕಟಿಸಿದವು. ಸರ್ಕಾರೀ ಅಧಿಕಾರಿಗಳು ಕೂಡಲೇ ಈ ಬಗೆಗೆ ತನಿಖೆಗಾರಂಭಿಸಿದರು. ಇಂಗ್ಲೆಂಡಿನಲ್ಲಿದ್ದ ರಷ್ಯಾದ ರಾಯಭಾರಿ ಹಿಂದೆ ಹಾಫ್‌ಕಿನ್ನರು ಭಾರತಕ್ಕೆ ತೆರಳುವ ಬಗೆಗೆ ಅನುಮತಿ ನೀಡಿದಾಗ ಅದರಲ್ಲೇನೋ ಒಳ ಹುನ್ನಾರು ಇದ್ದಿತೇನೋ ಎಂಬ ಸಂಶಯ ಬ್ರಿಟಿಷರ ವಲಯದಲ್ಲಿ ಉಂಟಾಗಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ತನಿಖೆ ಮಾಡಿದವರು ಹಾಫ್‌ಕಿನ್ನರ ಉದ್ದೇಶ ಕೇವಲ ವೈಜ್ಞಾನಿಕವಾದುದು; ಹಾಗೂ ಮಾನವೀಯತೆಯ ದೃಷ್ಟಿಯಿಂದ ಅವರು ಕಾರ್ಯನಿರ್ವಹಿಸುತ್ತಿದ್ದಾರೆಂದು ವರದಿ ಮಾಡಿದರು.

ಹಾಫ್‌ಕಿನ್ನರ ಕಷ್ಟಕೋಟಲೆಗಳು ಅಷ್ಟಕ್ಕೇ ಮುಗಿಯಲಿಲ್ಲ. ಈ ಸಾರಿ ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟ್ ಸದಸ್ಯ ಹೋಪ್‌ವುಡ್ ಎಂಬುವವರು ಭಾರತದಲ್ಲಿ ಬ್ರಿಟಿಷ್ ಸೈನಿಕರಿಗೆ ನೀಡುತ್ತಿದ್ದ ಕಾಲರಾ ವ್ಯಾಕ್ಸೀನಿನ ಬಗೆಗೆ ಅಪಸ್ವರ ಎತ್ತಿದರು. ಬ್ರಿಟಿಷ್ ಸರ್ಕಾರದವರು ಹಾಫ್‌ಕಿನ್ನರಿಗೆ ಯಾವ ಆಧಾರದ ಮೇಲೆ ಸೈನಿಕರಿಗೆ ಇಂಜಕ್ಷನ್ ನೀಡಲು ಅನುಮತಿ ಇತ್ತಿದ್ದಾರೆ. ಸೈನಿಕರಿಗೆ ಉತ್ತಮ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸುವ ಜವಾಬ್ದಾರಿ ಇರುವ ಬದಲಿಗೆ ವಿಷಪ್ರಾಶನ ಮಾಡುತ್ತಿರುವುದೇಕೆ? ಎಂದು ಪ್ರಶ್ನಿಸಿದರು. ಇದೇ ಪಾರ್ಲಿಮೆಂಟ್ ಸದಸ್ಯರೇ ಹಿಂದೆ ಮೈಲಿಬೇನೆಯ ನಿವಾರಣೆಗಾಗಿ ನೀಡುತ್ತಿದ್ದ ಜೆನ್ನರರ ವ್ಯಾಕ್ಸೀನ್ ಬಗೆಗೂ ತಮ್ಮ ಆಕ್ಷೇಪಣೆ ಎತ್ತಿದ್ದರು. ಬ್ರಿಟಿಷ್ ಸರ್ಕಾರದವರು ಅವರಿಗೆ ಯಾವರೀತಿಯ ಸಮಜಾಯಿಷಿ ನೀಡಿದರೋ ತಿಳಿಯದು. ಆದರೆ ಭಾರತದಲ್ಲಿ ಅವರಿಂದ ಪ್ರಯೋಜನ ಪಡೆದ ಜನತೆಯೇ ಅವರಿಗೆ ಉತ್ತರ ನೀಡಿದರು. ಹಾಫ್‌ಕಿನ್ನರು ಇಂಗ್ಲೆಂಡಿನಲ್ಲಿ ಈ ಅಪಸ್ವರ ಎದ್ದಾಗ ಕಾಶ್ಮೀರದಲ್ಲಿದ್ದರು;ಅಲ್ಲಿಂದ ಅವರು ಲಕ್ನೋಗೆ ಹಿಂತಿರುಗಿದಾಗ ಇಂಗ್ಲೆಂಡಿನಲ್ಲಿ ಹರಡುತ್ತಿದ್ದ ಅಪಪ್ರಚಾರದ ವಿಷಯ ತಿಳಿಯಿತು. ಅವರು ಲಕ್ನೋಗೆ ಬಂದಾಗ ಜನ ಸಾಮಾನ್ಯರೇ ಅಲ್ಲದೆ ಮಿಲಿಟರಿ ಗ್ಯಾರಿಸನ್‌ನವರೆಲ್ಲಾ ಅವರಿಗೆ ನೀಡಿದ ಅಭೂತಪೂರ್ವ ಸ್ವಾಗತ ಹಾಗೂ ಸನ್ಮಾನ ಸಮಾರಂಭಗಳೇ ಅವರ ವಿರೋಧಿಗಳಿಗೆ ಸಮಂಜಸ ಉತ್ತರ ನೀಡಿದಂತಾಯಿತು. ಆ ನಗರದ ಸಾವಿರಾರು ಜನ ನಾಗರಿಕರು ಹಾಗೂ ಮಿಲಿಟರಿ ಸಿಬ್ಬಂದಿಯವರನ್ನು ಕಾಲರಾದಿಂದ ರಕ್ಷಿಸಲು ಸ್ವತಃ ತಮ್ಮ ಆರೋಗ್ಯದ ಕಡೆಗೆ ಗಮನವಿಡದೇ, ಹಗಲು ರಾತ್ರಿಗಳ ಪರಿವೆ ಇಲ್ಲದೆ ನಿಸ್ವಾರ್ಥತೆಯಿಂದ ಸೇವೆಗೈದ ಕರ್ಮಯೋಗಿ ಹಾಫ್‌ಕಿನ್ನರಿಗೆ ಹಲವಾರು ದಿನಗಳು ಸಾನ್ಮಾನ ಸಮಾರಂಭಗಳು ಅಲ್ಲಿ ಜರುಗಿದವಂತೆ.

ಇಷ್ಟಾದ ಮೇಲೂ ಇನ್ನೂ ಕೆಲವು ಮೂಲಗಳಿಂದ ಕಿರುಕುಳಗಳುಂಟಾಗುತ್ತಲೇ ಇದ್ದವು. ಕೆಲವು ಮೇಲ್ತರದ ಅಧಿಕಾರಿಗಳೇ ಅಲ್ಲದೆ ತೀರಾ ಕೆಳಮಟ್ಟದವರೂ ಸಹಾ ಅಂತಹವುಗಳಲ್ಲಿ ಭಾಗವಹಿಸುತ್ತಿದ್ದರೆನ್ನಲಾಗಿದೆ; ಹಾಫ್‌ಕಿನ್ನರು ನೀಡುತ್ತಿರುವ ವ್ಯಾಕ್ಸೀನು ಬಹಳಷ್ಟು ಸತ್ವ ಹೀನವಾಗಿದ್ದು, ಅದರಿಂದ ದೊರೆಯಬಹುದಾದ ರೋಗ ನಿರೋಧಕ ಶಕ್ತಿಯ ಶೇಕಡಾವಾರು ಪ್ರಮಾಣ ತೀರಾ ಕಡಿಮೆಯೆಂದು ಪತ್ರಿಕೆಗಳಲ್ಲಿ ಬರೆಯುತ್ತಲೇ ಇದ್ದರು. ಹಾಫ್‌ಕಿನ್ನರು 1895ರ ಬೇಸಿಗೆಯ ಸಮಯದಲ್ಲಿ ಅವರ ವ್ಯಾಕ್ಸೀನಿನ ಸಾಮರ್ಥ್ಯ ಮತ್ತು ಉಪಯುಕ್ತತೆಯ ಬಗೆಗೆ ಭಾರತ ಮತ್ತು ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಬರೆದಿದ್ದ ಲೇಖನಗಳಲ್ಲಿ ಸತ್ಯಾಂಶಗಳನ್ನು ತೆರೆದಿಟ್ಟಿದ್ದರು. ವಿರೋಧಿಗಳಿಗೆ ಅವುಗಳನ್ನು ಅಲ್ಲಗಳೆಯುವ ಧೈರ್ಯವೇ ಇರಲಿಲ್ಲ.

ಭಾರತದ ಉತ್ತರ ಭಾಗದ ಯಾತ್ರೆಯಿಂದ 1894ರಲ್ಲಿ ಕಲ್ಕತ್ತಾಕ್ಕೆ ಹಿಂದಿರುಗಿದರು. ಅದೊಂದು ಅತ್ಯಂತ ಪ್ರಯಾಸದ ದೀರ್ಘಸಮಯದ ಯಾತ್ರೆಯಾಗಿತ್ತು. ಆದರೂ ಅವರು ವಿಶ್ರಮಿಸುವುದಕ್ಕೆ ಸಮಯವಿರಲಿಲ್ಲ. ಡಾ।ಸಿಂಪ್ಸನ್ ಮತ್ತು ಕೆಲವು ಭಾರತೀಯ ವೈದ್ಯರ ಜೊತೆ ಬ್ರಹ್ಮಪುತ್ರಾ ನದಿಯ ಜಾಡನ್ನು ಹಿಡಿದು ತಮ್ಮ ಯಾತ್ರೆಯನ್ನು ಆರಂಭಿಸಿದರು. ಅಸ್ಸಾಂ ಮತ್ತು ದಕ್ಷಿಣ ಬಂಗಾಳದ ಪ್ರದೇಶಗಳ ಮೂಲಕ ಪ್ರವಾಸ ಮಾಡುತ್ತಾ ಬ್ರಹ್ಮದೇಶದ (ಇಂದಿನ ಮಯನ್ಮಾರ್)ಗಡಿಯವರೆಗೆ ಚಲಿಸಿದರು. ಈ ಯಾತ್ರೆಗೆ ಒಂದು ವರ್ಷಕ್ಕೂ ಹೆಚ್ಚು ಕಾಲ ಹಿಡಿಯಿತು.ಆ ಸಮಯದಲ್ಲಿ 98 ಹಳ್ಳಿಗಳ ಜನ ಸಮೂಹಗಳಿಗೆ ಭೇಟಿ ನೀಡಿದ್ದರು. ಸುಮಾರು ಇಪ್ಪತ್ತು ಸಾವಿರ ಇನಾಕ್ಯು ಲೇಷನ್‌ಗಳನ್ನು ಮಾಡಿದ್ದರು. ಕೆಲವು ಪ್ರದೇಶಗಳಿಗಂತೂ 2-3 ಸಾರಿ ಭೇಟಿ ನೀಡುವ ಪ್ರಸಂಗ ಒದಗಿ ಬರುತ್ತಿದ್ದವು. ಅವರು ಅತಿ ದೂರ ಒಂದೇ ಸಮನೆ ಪ್ರಯಾಣ ಮಾಡಬೇಕಾಗಿಬಂದಿದ್ದ ಊರೆಂದರೆ ಕಲ್ಕತ್ತಾದಿಂದ ಹದಿಮೂರು ದಿನಗಳು ಪ್ರಯಾಣ ಮಾಡಿದ್ದು; ಸುಡುವ ಬೇಸಿಗೆ ಮತ್ತು ಮುಂಗಾರು ಮಳೆಗಾಲದಲ್ಲಿ ಆ ಭಾಗದ ಭಾರತದಲ್ಲಿ ಪ್ರಯಾಣ ಅತ್ಯಂತ ಪ್ರಯಾಸಕರವೆಂದು ಹಾಫ್‌ಕಿನ್ನರೇ ಒಂದುಸಾರಿ ವರದಿ ಮಾಡಿದ್ದರು.

ಭಾರತದ ಈಶಾನ್ಯ ಪ್ರದೇಶದ ದಟ್ಟವಾದ ಕಾಡಿನ ಪ್ರದೇಶಗಳಲ್ಲಿ ಅವರೆಸಗಿದ ಕಾರ್ಯಗಳ ವಿವರವನ್ನು ವಿಸ್ತಾರವಾಗಿ ವರ್ಣಿಸುವುದಸಾಧ್ಯ. ಹಾಫ್‌ಕಿನ್ನರಾಗಲೀ ಅವರ ಸಹೋದ್ಯೋಗಳಾಗಲಿ ದೈನಂದಿನ ಕೆಲಸ ಕಾರ್ಯಗಳ ಬಗೆಗೆ ದಿನಚರಿ ಬರೆಯುವ ಅಭ್ಯಾಸ ಇಟ್ಟುಕೊಂಡವರಲ್ಲ. ಹಸಿವು, ತೃಷೆಗಳನ್ನು ಲೆಕ್ಕಿಸದೆ ಅವರು ಮಾಡುತ್ತಿದ್ದ ಸೇವಾ ಕಾರ್ಯದ ಬಗೆಗೆ ಕೆಲವು ಅಧಿಕೃತ ಪ್ರಕಟಣೆಗಳು, ಇಲ್ಲವೇ ಆಗಾಗ್ಗೆ ಪ್ರಕಟವಾಗುತ್ತಿದ್ದ ಪತ್ರಿಕಾ ವರದಿಗಳಿಂದ ಮಾತ್ರ ತಿಳಿಯಬಹುದಾಗಿತ್ತು.

ಕಷ್ಟಪಟ್ಟುಕೊಂಡು ಹಳ್ಳಿಗಳಿಗೆ ಹೋದಾಗ ಕೆಲವು ವರ್ಗದ ರೈತಾಪಿ ಜನರು ಕೆಲ ಸಾರಿ ಒಂದಲ್ಲ ಒಂದು ನೆಪ ಹೂಡಿ ಸಹಕರಿಸುತ್ತಿರಲಿಲ್ಲ. ಕೆಲವರು ಮತೀಯ ಕಾರಣಗಳಿಂದ ಇಂಜಕ್ಷನ್ ನಿರಾಕರಿಸುತ್ತಿದ್ದರು; ಮತ್ತೆ ಕೆಲವರು ಇಂಜಕ್ಷನ್ ತೆಗೆದುಕೊಂಡ

ಮುಂದಿನ ಒಂದೆರಡು ದಿನ ಹೊಟ್ಟೆಪಾಡಿನ ಕೆಲಸಕ್ಕೆ ಹೋಗುವುದಕ್ಕೆ ತೊಂದರೆಯಾಗುತ್ತದೆಯೆಂದು ನಿರಾಕರಿಸುತ್ತಿದ್ದರಂತೆ. ತೀರಾ ಬಡವರಿಗೆ ಹಾಫ್‌ಕಿನ್ ತಂಡದವರು ಒಂದೆರಡು ದಿನಗಳಿಗಾಗುವಷ್ಟು ಕೂಲಿ ಹಣ ಕೊಟ್ಟು ಮನವೊಲಿಸಿ ಕೇಂದ್ರಕ್ಕೆ ಕರೆತಂದು ವ್ಯಾಕ್ಸಿನೇಷನ್ ಮಾಡುತ್ತಿದ್ದರು.

ಬಂಗಾಳದ ಪೂರ್ವ ವಲಯದಲ್ಲಿ ಮುಸ್ಲಿಂ ಜನಾಂಗದವರೇ ಹೆಚ್ಚಿನ ಪಾಲು, ಅಲ್ಲಿಯ ಒಂದು ಹಳ್ಳಿಯವರು ಹಾಫ್‌ಕಿನ್ನರನ್ನು ಮುಗಿಸಿಬಿಡುವ ಕಾರ್ಯವನ್ನು ಎಸಗಿದ್ದರೆಂಬ ವರದಿಗಳಿವೆ. ಅವರಲ್ಲಿ ಪುರಾತನ ಕಾಲದಿಂದಲೂ ಪ್ರಚಲಿತವಿದ್ದ ವಿಚಿತ್ರ ರೀತಿಯಲ್ಲಿ ಹಾವಿನ ವಿಷ ಹಾಕಿ ಹಾಫ್‌ಕಿನ್ನರ ಮೇಲೆ ಕಾರ್ಯವೆಸಗುವಂತೆ ಮಾಡಲು ಪ್ರಯತ್ನಿಸಿದ್ದರಂತೆ. ಹಾವಿನ ವಿಷವನ್ನು ಸಂಗ್ರಹಿಸಿಕೊಂಡು ಅದನ್ನು ಹೊದಿಕೆಗೆ ಬಳಸುವ ಬಟ್ಟೆಯೊಂದರ ಮೇಲೆ ಚೆಲ್ಲಿ ಉದ್ದೇಶಿತ ವ್ಯಕ್ತಿ ನಿದ್ರಿಸುತ್ತಿರುವಾಗ ಅವನಿಗೆ ಹೊದಿಸುವುದು. ಸೊಳ್ಳೆ ಮುಂತಾದ ಕೀಟಗಳಿಂದ ಅವನ ಮೇಲೇನಾದರೂ ಸಣ್ಣಪುಟ್ಟ ಗಾಯಗಳಾದರೆ ಅವುಗಳ ಮೂಲಕ ಹಾವಿನವಿಷ ರಕ್ತಕ್ಕೆ ಸೇರಬಹುದಾದುದರಿಂದ ಅವನು ಸಾಯುತ್ತಾನೆಂಬ ಕಲ್ಪನೆ ಇದರ ಹಿಂದಿನ ಉದ್ದೇಶವಂತೆ! ಸ್ಥಳಿಯ ಪತ್ರಿಕೆಗಳು ಅಂತಹ ಪ್ರಕರಣವನ್ನು ವರದಿ ಮಾಡಿದ್ದರೂ ಸ್ವತಃ ಹಾಫ್‌ಕಿನ್ನರೇ ಆ ಬಗೆಗೆ ಚಕಾರವೆತ್ತಿರಲ್ಲಿವಂತೆ. ಆ ತರಹದ ಯಾವ ಘಟನೆಗಳು ಜರುಗುತ್ತಿದ್ದರೂ ಹಾಫ್‌ಕಿನ್ ವಿಚಲಿತರಾಗದೇ ತಮ್ಮ ಸೇವಾ ಯಾತ್ರೆಯನ್ನು ಮುಂದುವರಿಸುವುದನ್ನು ಬಿಡಲಿಲ್ಲ. ಅವರು ಮತ್ತು ಅವರ ಸಣ್ಣ ಗುಂಪಿನವರು ದೀಕ್ಷಾ ಬದ್ಧರಾಗಿದ್ದ ತಮ್ಮ ಹೊಸ ''ಧರ್ಮ ಪ್ರಚಾರ'' ಕಾರ್ಯವನ್ನು ಯಾರಿಂದಲೂ ತಡೆಯಲು ಸಾಧ್ಯವಿರಲಿಲ್ಲ.

# ೯

# ವ್ಯಾಕ್ಸೀನಿನ ವಿಜಯಪತಾಕೆ

ಒಡೆಸ್ಸಾದಲ್ಲಿನ ವ್ಲಾದಿಮಿರ್ ಹಾಫ್‌ಕಿನ್ನರ ಸಹಚರರನ್ನು ಸೈಬೀರಿಯಾಕ್ಕೆ ಗಡಿಪಾರು ಮಾಡಿ ಹತ್ತು ವರ್ಷಗಳೇ ಸಂದು ಹೋಗಿದ್ದವು. ಅವರೆಲ್ಲರ ಪೈಕಿ ಹಾಫ್‌ಕಿನ್ ಒಬ್ಬರೇ ಆ ತರಹದ ಶಿಕ್ಷೆಯಿಂದ ಹೊರಗುಳಿದವರು; ಒಂದು ಕಾಲದಲ್ಲಿ ಅವರೊಬ್ಬ ಪುರೋಗಾಮಿ ಕ್ರಾಂತಿಕಾರಿಯಾಗಿದ್ದರೆಂಬುದನ್ನು ಲವಲೇಶವೂ ಗುರುತಿಸಲು ಸಾಧ್ಯವಾಗ ದಷ್ಟು ಪರಿವರ್ತನೆ ಅವರಲ್ಲುಂಟಾಗಿತ್ತು; ಸಾಮಾಜಿಕ ಅನ್ಯಾಯಗಳನ್ನು ತೊಡೆದು ಹಾಕುವ ಅಥವಾ ಪ್ರಪಂಚದ ರೀತಿ ನೀತಿಗಳನ್ನೇ ಬದಲಾಯಿಸಬೇಕೆಂಬ ಅವರಲ್ಲಿದ್ದ ಛಲ ಈಗ ಮಾಯವಾಗಿತ್ತು. ಮೂವತ್ನಾಲ್ಕು ವಸಂತಗಳನ್ನು ಕಳೆದಿದ್ದ ಮಿಣಜೀವಿ ಶಾಸ್ತ್ರಜ್ಞನ ಮನಸ್ಸು ಮತ್ತೊಂದು ''ನಂಬಿಕೆ''ಯತ್ತ ಸಂಪೂರ್ಣವಾಗಿ ಈಗ ವಾಲಿತ್ತು: ಅದೆಂದರೆ ವಿಜ್ಞಾನದ ಬಗೆಗೆ ಉಂಟಾಗಿದ್ದ ಅತ್ಯಾಶೆ. ಬಡವ ಬಲ್ಲಿದ ಎಂಬ ತಾರತಮ್ಯವಿಲ್ಲದೆ ಅಜ್ಞಾನಗಳನ್ನು ತೊಡೆದು ಹಾಕಲು ವೈಜ್ಞಾನಿಕ ಮಾರ್ಗಗಳಿಂದ ಮಾತ್ರ ಸಾಧ್ಯ; ಆ ಉದ್ದೇಶಕ್ಕಾಗಿ ಮನುಕುಲವನ್ನು ಹೊಸದಾಗಿ ಸಂಘಟಿಸಬೇಕಾಗುತ್ತದೆಂಬುದು ಅವರ ಅನಿಸಿಕೆಯಾಗಿತ್ತು. ಅವರು ಇನಾಕ್ಯುಲೇಷನ್ ಮಾಡುತ್ತಿದ್ದವರ ಪಟ್ಟಿಯಲ್ಲಿ ರಾಜಮಹಾರಾಜರಿದ್ದರು; ಅವರ ದಾಸಾನುದಾಸರ ಹೆಸರುಗಳು ಇರುತ್ತಿದ್ದವು; ಬ್ರಿಟಿಷ್ ಸೈನಿಕ ದಳದವರಿದ್ದರು; ಅವರು ಜೈಲುಗಳಲ್ಲಿ ಬಂಧಿಸಿಟ್ಟ ಕೈದಿಗಳ ಹೆಸರೂ ಇದ್ದವು; ಪುಣ್ಯಕ್ಷೇತ್ರಗಳಿಗೆ ಯಾತ್ರಾರ್ಥಿಗಳಾಗಿ ಹೋಗುತ್ತಿದ್ದವರೂ ಇರುತ್ತಿದ್ದರು. ಅವರ ಪ್ರಕಾರ ವಿಜ್ಞಾನದ ಎದುರಿಗೆ ಅವರೆಲ್ಲರೂ ಸರಿಸಮಾನರೇ. ಈ ಸರಿಸಮಾನತೆಯ ಅರಿವು ಭಾರತದ ಮೂಲೆ ಮೂಲೆಗಳಲ್ಲಿರುವ ಜನಸಮುದಾಯದಲ್ಲಿ ಮೂಡಿದರೆ ಮಾತ್ರ ಇಲ್ಲಿನ ಹಸಿವು. ಬಡತನಗಳನ್ನು ಹೊರದೂಡಲು ಸಾಧ್ಯವೆಂಬುದು ಅವರ ದೃಢ ನಂಬಿಕೆಯಾಗಿತ್ತು. ಎಂಬತ್ತರ ದಶಕದಲ್ಲಿ ರಷ್ಯಾ ಸರ್ಕಾರದ ಎದುರು ಹೋರಾಟದಲ್ಲಿ ತೊಡಗಿ ಅಲ್ಲಿಯ ಉನ್ನತ ಅಧಿಕಾರಿಗಳ ಮೇಲೆ ಬಾಂಬು ಸಿಡಿಸುತ್ತಿದ್ದ ಯುವಕ ತೊಂಬತ್ತರ ದಶಕದಲ್ಲಿ ಹೊಸ ಅರಿವಿನ ಧರ್ಮಪ್ರವರ್ತಕನಾಗಿ ಪರಿವರ್ತನೆಯಾಗಿದ್ದನೆಂಬುದನ್ನು ನಂಬಲಸಾಧ್ಯ.

ಹಾಫ್‌ಕಿನ್ನರು ಭಾರತದಲ್ಲಿ ಜರುಗಿಸುತ್ತಿದ್ದ ತಮ್ಮ ಮೆಡಿಕಲ್ ಮಿಶನರಿಯ ಕಾರ್ಯಕಲಾಪಗಳನ್ನು ತುಂಬಾ ಗಂಭೀರವಾಗಿಯೇ ಪರಿಗಣಿಸುತ್ತಿದ್ದರು. ಮಾನವನ ಕಷ್ಟಕೋಟಲೆಗಳ ಎದುರಿಗೆ ವಿಜ್ಞಾನ ಏನೂ ಮಾಡದೆ ಜಡವಾಗಿ ಕುಳಿತುಕೊಳ್ಳುವುದು

ಯುಕ್ತವಲ್ಲವೆಂಬುದು ಅವರ ಅಭಿಮತವಾಗಿತ್ತು. ವ್ಯಾಪಕವಾಗಿ ಇನಾಕ್ಯುಲೇಷನ್ ಮಾಡುವುದರಿಂದಾಗುವ ಪರಿಣಾಮವನ್ನರಿತುಕೊಂಡಾಗ ಅಂತಹ ಅರಿವುನ್ನುಂಟು ಮಾಡಲು ಸಾಧ್ಯ; ಹಾಗೂ ಮುಂದೆ ಅಂತಹದೇ ಒಂದು ಸಂಸ್ಕೃತಿಯನ್ನೇ ಹುಟ್ಟು ಹಾಕಬಹುದು. ಅಂತಹ ಉದ್ದೇಶದಿಂದಲೇ ಕಾಲರಾ ರೋಗ ಹರಡುತ್ತಿದ್ದ ಹಳ್ಳಿಗಳಲ್ಲಿ ಬಹಳಷ್ಟು ಜನರಿಗೆ ಇನಾಕ್ಯುಲೇಷನ್ ಮಾಡಲು ತಮ್ಮ ಶಕ್ತಿ ಮೀರಿ ಶ್ರಮಿಸುತ್ತಿದ್ದರು; ಬಡಜನರು ಸುಲಭವಾಗಿ ಇನಾಕ್ಯುಲೇಷನ್ ಮಣಿಯುವಂತೆ ಮಾಡಲು ತಮ್ಮ ಸ್ವಂತಗಳಿಕೆಯ ಹಣವನ್ನು ಅವರಿಗೆ ನೀಡುತ್ತಿದ್ದರಂತೆ.

## ಅಸ್ಸಾಮಿಗೊಂದು ಅಭಿಯಾನ

ಸಾವಿರದೊಂಬೈನೂರ ತೊಂಬತ್ತೈದರ ಫೆಬ್ರವರಿ-ಮಾರ್ಚ್ ಸಮಯವನ್ನು ಹಾಫ್‌ಕಿನ್‌ರು ಅಸ್ಸಾಂನಲ್ಲೇ ಕಳೆದರು. ಅಸ್ಸಾಂ, ಭಾರತದಲ್ಲೇ ಹೆಸರಾದ ಪ್ರಕೃತಿ ಸೌಂದರ್ಯದ ಬೀಡು; ಹಸಿರು ತುಂಬಿದ ಕಣಿವೆಗಳು, ಗಿರಿ-ಗಹ್ವರಗಳ ನಡುವೆ ಹರಿಯುವ ತೊರೆ, ನದಿ, ಜಲಪಾತಗಳ ಸಾಲು ಸಾಲು; ದೇಶದ ಈಶಾನ್ಯ ಭಾಗದ ಈ ಪ್ರದೇಶದಲ್ಲಿ ಮೈಲುಗಟ್ಟಲೆ ಟೀ ಪ್ಲಾಂಟೇಶನ್‌ಗಳು. ಪ್ರಪಂಚದಲ್ಲಿ ಉತ್ಪಾದನೆಯಾಗುವ ಶೇ.40ರಷ್ಟು ಟೀ ಉತ್ಪಾದನೆಯಾಗುವುದು. ಈ ಪ್ರದೇಶದಲ್ಲೇ; ಲಕ್ಷಾಂತರ ಜನ ಅದರ ಉತ್ಪಾದನೆಯಲ್ಲಿ ಆ ಪ್ರದೇಶದಲ್ಲಿ ತೊಡಗಿಸಿಕೊಂಡಿದ್ದಾರೆ.

ಪ್ರಪಂಚದಲ್ಲೇ ಅತಿ ಹೆಚ್ಚೆನ್ನಬಹುದಾದ 400-500 ಅಂಗುಲಗಳಷ್ಟು ಮಳೆ ಮುಂಗಾರಿನ ಸಮಯದಲ್ಲಿ ಅಲ್ಲಿ ಬೀಳುತ್ತದೆ. ಪ್ರತಿವರ್ಷ ಜುಲೈಯಿಂದ ಸೆಪ್ಟಂಬರ್ ತಿಂಗಳುಗಳಲ್ಲಿ ಈ ಪ್ರದೇಶದ ಕಾಡುಮೇಡುಗಳೇ ಅಲ್ಲದೆ ಬೆಟ್ಟ, ಬಯಲು, ರಸ್ತೆ, ಹಾದಿಗಳೆಲ್ಲಾ ಜೌಗು ಮತ್ತು ಕೆಸರುಮಯವಾಗಿರುತ್ತದೆ. ಆ ಪ್ರದೇಶದಲ್ಲಿ ಮನೆ ಮಾಡಿದ್ದ ಮತ್ತೊಂದು ಭೀಕರ ಕಾಯಿಲೆಯೆಂದರೆ ಮಲೇರಿಯಾ; ಅದರಿಂದ ಸಾಯುವವರ ಸಂಖ್ಯೆ ಕಾಲರಾಕ್ಕೆ ಎರಡನೆಯ ಸ್ಥಾನದಲ್ಲಿದೆ; ಅದು ಬಹುಪಾಲು ಕಷ್ಟ ಕಾರ್ಪಣ್ಯಗಳಿಂದ ತೊಳಲಾಡುತ್ತಿದ್ದ ಪ್ಲಾಂಟೇಷನ್ ಕೂಲಿಯಾಗಳುಗಳನ್ನೇ ಬಲಿ ತೆಗೆದುಕೊಳ್ಳುತ್ತಿದ್ದುದು. ''ಅಸ್ಸಾಂನಲ್ಲಿ ಕೂಲಿಗಳು ಸಾಯುವಂತೆ'' ಎಂಬ ನಾಣ್ನುಡಿಯೊಂದು ಆಗ ಭಾರತದೆಲ್ಲೆಡೆ ಪ್ರಚಲಿತವಿತ್ತೆಂದರೆ ಸಮಸ್ಯೆಯ ಅಗಾಧತೆ ಅರ್ಥವಾಗಬಹುದು. ಈ ಎರಡು ಮಾರಕ ವ್ಯಾಧಿಗಳಿಂದುಂಟಾಗುತ್ತಿದ್ದ ಸಾವುನೋವುಗಳ ಸಂಖ್ಯೆಯ ಹೆಚ್ಚಳ ಸಾಮಾನ್ಯವಾಗಿ ನಿರ್ದಯಿಗಳೆನಿಸಿದ ಪ್ಲಾಂಟೇಶನ್ ಮಾಲೀಕರ ಮನಃಕ್ಲೇಷಕ್ಕೂ ಕಾರಣವಾಗಿತ್ತು. ಪ್ಲಾಂಟರುಗಳ ಸಂಘದವರೇ ಹಾಫ್‌ಕಿನ್ನರನ್ನು ಸಂಪರ್ಕಿಸಿ, ಆ ಪ್ರದೇಶಗಳಿಗೆ ಭೇಟಿ ನೀಡಿ ಕಾಲರಾ ವ್ಯಾಕ್ಸಿನೇಷನ್ ಮಾಡುವಂತೆ ಕೇಳಿಕೊಂಡರು. ಹಾಫ್‌ಕಿನ್ ಮತ್ತು ಅವರ ಸಂಗಡಿಗರು ಕಾಲರಾ ಪಿಡುಗು ಹೆಚ್ಚಾಗಿದ್ದ ಕೂಲಿಗಳ ವಸಾಹತುಗಳಿದ್ದ ಕಲೈನ್, ದುಗುಬಾರ್ ಹಳ್ಳಿಗಳಿಗೆ ಫೆಬ್ರವರಿ ತಿಂಗಳ ಆದಿ ಭಾಗದಲ್ಲಿ ಪ್ರಯಾಣ ಬೆಳೆಸಿದರು. ಅಲ್ಲಿಯ ಸುಮಾರು 3000 ನಿವಾಸಿಗಳು ಅಂದರೆ ಅರ್ಧದಷ್ಟು ಜನ ಎರಡು ಸಾರಿ

ಇನಾಕ್ಯುಲೇಷನ್ ಮಾಡಿಸಿಕೊಂಡರು; ಇನ್ನುಳಿದವರು ಇನಾಕ್ಯುಲೇಷನ್ ಮಾಡಿಸಿಕೊಳ್ಳುವುದಕ್ಕೆ ನಿರಾಕರಿಸಿದರು. ಇದರಿಂದ ಮೇ ತಿಂಗಳ ಹೊತ್ತಿಗೆ ಕಾಲರಾ ಸಾಂಕ್ರಾಮಿಕವನ್ನು ಹತೋಟಿಗೆ ತರಲು ಸಾಧ್ಯವಾಯಿತು. **ಇಂಡಿಯನ್ ಮೆಡಿಕಲ್ ಗೆಜೆಟ್** ಪತ್ರಿಕೆ ತನ್ನ ಜುಲೈ ಸಂಚಿಕೆಯಲ್ಲಿ ಮಾಡಿದ ವರದಿಯಲ್ಲಿ, ''ಇನಾಕ್ಯುಲೇಷನ್ ಮಾಡಿಸಿಕೊಳ್ಳದಿದ್ದವರಲ್ಲಿ 47 ಜನರಿಗೆ ಕಾಲರಾ ತಗುಲಿದ್ದು ಅವರಲ್ಲಿ 20 ಜನ ಸತ್ತರು; ಇನಾಕ್ಯುಲೇಷನ್ ಮಾಡಿಸಿಕೊಂಡವರಲ್ಲಿ ಕೇವಲ ಮೂರು ಜನರಿಗೆ ಕಾಲರಾ ತಗುಲಿದ್ದು ಅವರಲ್ಲಿ ಒಬ್ಬ ರೋಗಿ ಮಾತ್ರ ಸಾವಿಗೀಡಾಗಿದ್ದ; ಹಾಗೆ ಸತ್ತವನು ಭೇದಿಯ ಜೊತೆ ರಕ್ತಸ್ರಾವವೂ ಉಂಟಾಗಿದ್ದರಿಂದ ಸತ್ತನೆನ್ನಲಾಗಿದೆ''. ಪ್ಲಾಂಟರುಗಳು ತೃಪ್ತರಾಗಿ ಅವರ ಎಲ್ಲಾ ಕೆಲಸಗಾರರಿಗೂ ಸಾಮೂಹಿಕವಾಗಿ ಇನಾಕ್ಯುಲೇಷನ್ ಮಾಡಿಸುವ ಏರ್ಪಾಡು ಮಾಡಿದರು.

ಹಾಫ್‌ಕಿನ್ ಮತ್ತು ಸಂಗಡಿಗರು ಕಾಲರಾ ನಿರೋಧಕ ಇನಾಕ್ಯುಲೇಷನ್ ಕಾರ್ಯದಲ್ಲಿ ತೊಡಗಿಸಿಕೊಂಡು 1895ರ ಬೇಸಿಗೆ-ಎರಡುವರೆ ವರ್ಷಗಳು ಸಂದಿದ್ದವು. ಅಷ್ಟರ ಅವಧಿಯಲ್ಲಿ ಕಾಲರಾ ವ್ಯಾಕ್ಸಿನೇಷನ್‌ನ ಪ್ರಭಾವದ ಬಗೆಗೆ ಸಾಕಷ್ಟು ಫಲಪ್ರದ ಅನುಭವದ ಮಾಹಿತಿಗಳು ಶೇಖರವಾಗಿದ್ದವು. ಅವನ್ನೆಲ್ಲಾ ವಿಶ್ಲೇಷಿಸಿ ಒಂದು ಬೃಹತ್ ಪುಸ್ತಕವನ್ನು ಕಲ್ಕತ್ತಾದಲ್ಲಿ ಪ್ರಕಟಿಸಿದರು: Report of Dr.W.M.Haffkine, State Bacteriologist on the results of two and half years of work in India. ಅದರಲ್ಲಿ ಕಾಲರಾ ವ್ಯಾಕ್ಸೀನಿನ ಮೇಲೆ ಇರಿಸಿದ್ದ ನಂಬಿಕೆ ಸರಿಯಾದುದೆಂಬುದನ್ನು ದೃಢಪಡಿಸಿತ್ತು. ಅದನ್ನು ನೀಡಿದ ಪ್ರತಿಯೊಬ್ಬರಲ್ಲಿಯೂ ನಿರೋಧಕಶಕ್ತಿ ವೃದ್ಧಿಯಾಗಿರುತ್ತಿರಲ್ಲಿವೆಂಬುದು ನಿಜ ಸಂಗತಿಯಾಗಿತ್ತೆನ್ನಬಹುದಾದರೂ, ಅದರಿಂದ ಸಾಯುವುದನ್ನು ತಪ್ಪಿಸಬಹುದಾಗಿತ್ತು. ಆ ತನಕ ನಲವತ್ತೆರಡು ಸಾವಿರ ಜನರಿಗೆ- ಅವರಲ್ಲಿ ಮೂರನೆ ಎರಡರಷ್ಟು ಮಂದಿಗೆ ಎರಡು ಸಾರಿ-ಇನಾಕ್ಯುಲೇಷನ್ ಮಾಡಲಾಗಿತ್ತು. ಹಾಗೆ ಇನಾಕ್ಯುಲೇಷನ್ ಮಾಡಿಸಿಕೊಂಡವರಲ್ಲಿ ನಾಲ್ಕು ದಿನಗಳಲ್ಲೇ ರೋಗ ನಿರೋಧಕ ಶಕ್ತಿ ವೃದ್ಧಿಯಾಗಿರುತ್ತಿತ್ತು. ಮರಣದ ಸಂಖ್ಯೆ ಶೇ.72 ಕ್ಕಿಂತಲೂ ಕಡಿಮೆಯಾಗಿತ್ತು; ಅಂದರೆ ಇನಾಕ್ಯುಲೇಷನ್ ಮಾಡಿಸಿಕೊಂಡವರಲ್ಲಿ ಸಾವಿರಕ್ಕೆ ಮೂರು ಮಂದಿಗಿಂತ ಕಡಿಮೆಯಾಗಿದ್ದರೆ ಮಾಡಿಸಿಕೊಳ್ಳದಿದ್ದವರಲ್ಲಿ ಹನ್ನೊಂದರಷ್ಟಿರುತ್ತಿತ್ತು.

ಈ ಮಹಾನ್ ಪ್ರಯೋಗದ ಫಲಶ್ರುತಿಯೆಂದರೆ ಹತ್ತೊಂಬತ್ತನೆ ಶತಮಾನದಲ್ಲಿ ಮಿಣಿಜೀವಿಗಳ ವಿರುದ್ಧ ಕಾರ್ಯವೆಸಗುವ ''ಏಜೆಂಟ್'' (Agent)ನ್ನು ಹುಡುಕುವ ಪ್ರಯತ್ನ ಹೆಚ್ಚು ಕಡಿಮೆ ಅಂತ್ಯಗೊಳ್ಳುವಂತಾದುದು. ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಕಾರ್ಯನಿರತರಾಗಿದ್ದ ಪ್ರೊ.: ಮೆಕ್ನಿಕೋವ್‌ರ ಶಿಷ್ಯ ಪ್ರೊ.:ಬೆಸ್ರೆಡ್ಕ ಹಾಫ್‌ಕಿನ್ನರ ಕಾರ್ಯದ ಬಗೆಗೆ ''ಹಾಫ್‌ಕಿನ್ನರು ತಮ್ಮ ನಿರಂತರ ಕಾರ್ಯಕ್ಷಮತೆಯಿಂದ, ಮೊದಲ ಬಾರಿಗೆ ಮಿಣಿಜೀವಿಗಳ ವಿರುದ್ಧ ಯಶಸ್ವಿಯಾಗಿ ಕಾರ್ಯವೆಸಗಬಹುದಾದ ವಿಧಾನವೊಂದನ್ನು

ಆವಿಷ್ಕರಿಸಿದ್ದಾರೆ; ಅದರಿಂದ ಸೋಂಕು ವ್ಯಾಧಿಗಳು ಹರಡದಂತೆ ತಡೆಗಟ್ಟುವುದು ಈಗ ಸಾಧ್ಯವಾಗಿದೆ ಎಂಬುದನ್ನು ಮನುಕುಲಕ್ಕೆ ತೋರಿಸಿಕೊಟ್ಟಿದ್ದಾರೆ'' ಎಂಬ ಹೊಗಳಿಕೆಯ ಮಾತುಗಳನ್ನಾಡಿದ್ದರು. ಜರ್ಮನಿಯಲ್ಲೂ ಹಾಫ್‌ಕಿನ್ನರ ಪ್ರಯೋಗಗಳ ಮೇಲೆ ತುಂಬಾ ಮೆಚ್ಚಿನ ಅಭಿಪ್ರಾಯ ಮೂಡಿ ಬಂದಿತ್ತು. ಹಾಫ್‌ಕಿನ್ನರ ಪ್ರಯೋಗಗಳನ್ನು ಮೊದಲಿನಿಂದಲೂ ಸಂದೇಹಾತ್ಮಕವಾಗಿ ಪರಿಗಣಿಸುತ್ತಿದ್ದ ಕಾಖ್ ಮತ್ತು ಫೈಫರ್‌ರವರು ಹಾಫ್‌ಕಿನ್ನರ ದತ್ತಾಂಶಗಳನ್ನು ಎರಡೆರಡು ಸಾರಿ ಪ್ರಯೋಗ ಪರೀಕ್ಷೆಗೊಳಪಡಿಸಿದ್ದರು. ಈ ಪ್ರಯೋಗಗಳಿಗೆ ಭಾರತದಿಂದ ಹಾಫ್‌ಕಿನ್‌ರು ತಯಾರಿಸಿದ ವ್ಯಾಕ್ಸಿನಿನ ಲಸಿಕೆಗಳನ್ನು ತರಿಸಿಕೊಂಡು ಹಲವಾರು ಬರ್ಲಿನ್ನಿನ ವೈದ್ಯರು ಮತ್ತು ವೈದ್ಯಕೀಯ ವಿದ್ಯಾರ್ಥಿಗಳಿಗೆ ನೀಡಿದರು; ಹಾಗೂ ಅಂತಹವರ ಮೇಲೆ ಕಾಲರಾ ಬ್ಯಾಸಿಲೈಗಳು ಯಾವ ತರಹೆಯ ಪರಿಣಾಮ ಬೀರುತ್ತವೆಂಬುದರ ಶೋಧನೆ ಮಾಡಿದರು. ಆ ಪ್ರಯೋಗದಿಂದ ಕಾಲರಾ ವ್ಯಾಕ್ಸೀನ್ ತೆಗೆದುಕೊಂಡವರ ರಕ್ತರಸ, ಅದನ್ನು ತೆಗೆದುಕೊಳ್ಳದವರಿಗಿಂತ ಎರಡುನೂರು ಪಟ್ಟು ಹೆಚ್ಚು ಪ್ರಬಲ ಹಾಗೂ ಪರಿಣಾಮಕಾರಿಯಾಗಿ ವರ್ತಿಸುತ್ತದೆಂಬುದು ಕಂಡು ಬಂದಿತ್ತಂತೆ.

ಹಾಫ್‌ಕಿನ್ನರ ಪ್ರಯೋಗ ಫಲಿತಾಂಶಗಳಿಗೆ ಪ್ರಪಂಚದಾದ್ಯಂತ ಪ್ರಸಿದ್ಧ ಮಿಣಿಜೀವಿ ಶಾಸ್ತ್ರಜ್ಞರು ತಮ್ಮ ಮೆಚ್ಚುಗೆಯನ್ನೇನೊ ವ್ಯಕ್ತಪಡಿಸಿದ್ದರು. ಅಂದರೆ ಅದರರ್ಥ ಕಾಲರಾವನ್ನು ಭಾರತದಿಂದ ಹೊರಹಾಕಲಾಗಿದೆಯೆಂದೇನು ಅಲ್ಲ. ಆ ಪಿಡುಗು ಇನ್ನೂ ಸಾವಿರಾರು ಯುರೋಪಿಯನ್ನರ ಮತ್ತು ಭಾರತೀಯರನ್ನು ಬಲಿ ತೆಗೆದುಕೊಳ್ಳುತ್ತಲೇ ಇತ್ತು. ಕಲ್ಕತ್ತಾ ಬಂದರಿನ ಹೊರವಲಯಕ್ಕೆ ಹಳದಿ ಬಾವುಟ ಹಾರಿಸಿಕೊಂಡು ದೋಣಿಗಳು ಬರುತ್ತಲೇ ಇದ್ದವು. ಆದರೂ ಒಂದು ಪ್ರಮುಖ ಸಂಗತಿಯೊಂದು ಜರುಗಿತ್ತೆಂಬುದನ್ನು ಮರೆಯುವಂತಿಲ್ಲ; ಈ ಕ್ರೂರ ವ್ಯಾಧಿಯನ್ನು ನಿಭಾಯಿಸುವಲ್ಲಿ ಮಾನವನೀಗ ತನ್ನನ್ನು ರಕ್ಷಿಸಿಕೊಳ್ಳಲಾಗದ ಅಸಹಾಯಕ ಸ್ಥಿತಿಯಲ್ಲಿರಲಿಲ್ಲ; ವಿಜ್ಞಾನ ಈ ದಿಸೆಯಲ್ಲಿ ತನ್ನ ಕೊಡುಗೆ-ಕಿಂಚಿತ್ತಾದರೂ ನೀಡಿತ್ತು. ಮಿಣಿಜೀವಿಶಾಸ್ತ್ರಜ್ಞ ತಾನು ಈತನಕ ರೂಪಿಸಿದ ಅಸ್ತ್ರವನ್ನು (ಇನಾಕ್ಯುಲೇಷನ್) ಜನ ಸಮುದಾಯದವರಿಗೆ ವ್ಯಾಪಕವಾಗಿ ಬಳಸುವ ಸಲುವಾಗಿ ಅಧಿಕಾರಾರೂಢರಿಗೆ ವರ್ಗಾಯಿಸುವ ಹಂತ ಒದಗಿ ಬಂದಿತ್ತು.

## ಮೈಗೂಡಿದ ಮಲೇರಿಯಾ

ಲಂಡನ್ನಿನ **ಟೈಮ್ಸ್** ಪತ್ರಿಕೆ ಈ ದಿಸೆಯಲ್ಲಿ ಭಾರತದಲ್ಲಿ ಲಕ್ಷಾಂತರ ಜನರನ್ನು ರಕ್ಷಿಸಲು ಕಾರಣ ಕರ್ತರಾಗಿದ್ದ ಹಾಫ್‌ಕಿನ್ನರ ಸಾಹಸವನ್ನು ಹಾಡಿ ಹೊಗಳಿತು. ಅದರಿಂದ ಸ್ಫೂರ್ತಿ ಪಡೆದ ಇನ್ನೂ ಹಲವಾರು ಭಾರತೀಯ ಮತ್ತು ಬ್ರಿಟಿಷ್ ಪತ್ರಿಕೆಗಳು ತಮ್ಮ ದನಿಗೂಡಿಸಿದವು. ಆದರೆ ಈ ಹೊಗಳಿಕೆಗೆ ಪಾತ್ರನಾಗುವ ವ್ಯಕ್ತಿ ಅವುಗಳನ್ನು ಸ್ವೀಕರಿಸಿ ಆನಂದ ಪಡುವಸ್ಥಿತಿಯಲ್ಲಿರಲಿಲ್ಲ; ಅವರು ಕಲ್ಕತ್ತಾ ಹೋಟೆಲಿನ ಕೊಠಡಿಯೊಂದರಲ್ಲಿ ಮಲೇರಿಯಾದಿಂದ ನಡುಗುತ್ತಾ ಮಲಗಿದ್ದರು. ಬ್ರಹ್ಮಪುತ್ರ ನದಿಯ ಜಾಡಿನಲ್ಲಿ ಕಾಲರಾ

ವಿರುದ್ಧದ ಪಯಣದಲ್ಲಿ ತೊಡಗಿದ್ದಾಗ, ಅಸ್ಸಾಂನ ಜವುಳು ಪ್ರದೇಶದಲ್ಲಿ ಮಲೇರಿಯಾ ಅವರ ಮೇಲೆ ಆಕ್ರಮಣ ಮಾಡಿತ್ತು. ಅವರನ್ನು ಚಿಕಿತ್ಸೆ ಮಾಡುತ್ತಿದ್ದ ವೈದ್ಯರು ಅವರು ಕೂಡಲೇ ಇಂಗ್ಲೆಂಡಿಗೆ ಹಿಂತಿರುಗುವುದೇ ಸರಿಯಾದ ಮಾರ್ಗವೆಂದು ಸಲಹೆ ನೀಡಿದರು;ಆದರೆಹಾಫ್‌ಕಿನ್ನರು ಜ್ವರ ಇಂದಲ್ಲ ನಾಳೆ ಬಿಡುತ್ತದೆಂದು, ಅವರೀಗ ಹಿಡಿದಿರುವ ಕಾರ್ಯಪೂರ್ಣವಾಗುವವರೆಗೂ ಭಾರತವನ್ನು ಬಿಡುವುದಿಲ್ಲವೆಂದು ಹಟ ಹಿಡಿದಿದ್ದರು. ತಾವು ತಯಾರಿಸುತ್ತಿದ್ದ ವ್ಯಾಕ್ಸೀನು ಇನ್ನೂ ಅದರ ಸಾಮರ್ಥ್ಯವನ್ನು ಪರಿಪೂರ್ಣವಾಗಿ ಸಾಧಿಸಿ ತೋರಿಸಿಲ್ಲ; ಅದಕ್ಕೆ ತಕ್ಕುದಾದ ಪುರಾವೆಗಳು ದೊರೆತಿಲ್ಲ; ಆದುದರಿಂದ ಅವರ ಕರ್ತವ್ಯ ಮುಗಿದಿಲ್ಲವೆಂಬುದು ಅವರ ಭಾವನೆಯಾಗಿತ್ತು.

ವಾರಗಳ ಮೇಲೆ ವಾರ ಉರುಳುತ್ತಿದ್ದವು; ಯುರೋಪಿಯನ್ನರು ಸಾಮಾನ್ಯವಾಗಿ ಸಹಿಸಲಸಾಧ್ಯವಾದ ಸೆಪ್ಟೆಂಬರ್‌ನ ಬಿಸಿ ಹವೆಯೂ ಆರಂಭವಾಯಿತು. ಆ ಜ್ವರದ ಪರಿಣಾಮದಿಂದ ಅಸಂಖ್ಯಾತ ಜನರು ಸಾಯುತ್ತಲೇ ಇದ್ದರು. ಹಾಫ್‌ಕಿನ್ನರಿಗೀಗ ಭಾರತವನ್ನು ಬಿಟ್ಟು ಹೋಗುವ ಕಾಲ ಸನ್ನಿಹಿತವಾಗಿದೆಯೆನ್ನುವಂತಾಯಿತು. ಬ್ರಿಟಿಷ್ ಸರ್ಕಾರದವರಿಗೆ ತಂತಿ ಸಂದೇಶ ಕಳುಹಿಸಿ ಮಲೇರಿಯಾದಿಂದ ಅಸ್ವಸ್ಥರಾಗಿ ಭಾರತವನ್ನು ಬಿಡಬೇಕಾಗಿ ಬಂದಿದೆಯೆಂತಲೂ, ಚೇತರಿಸಿಕೊಂಡ ಮೇಲೆ ಮತ್ತೆ ಹಿಂದಿರುಗುವುದಾಗಿ ಹೇಳಿ, ಆ ಸಮಯದಲ್ಲಿ ಮತ್ತೆ ಪರವಾನಿಗಿ ನೀಡಬೇಕೆಂದು ಟೆಲಿಗ್ರಾಮ್ ಕಳುಹಿಸಿದ್ದರು.

ಇಂಗ್ಲೆಂಡಿನಲ್ಲಿ ಆರು ತಿಂಗಳು ಚಿಕಿತ್ಸೆ ಮತ್ತು ವಿಶ್ರಾಂತಿಯಿಂದ ಚೇತರಿಸಿಕೊಂಡ ಹಾಫ್‌ಕಿನ್ನರು ಭಾರತಕ್ಕೆ ಹಿಂದಿರುಗಿದರು; ಮುಂದಿನ ಕೆಲವೇ ದಿನಗಳಲ್ಲಿ ಮೂವತ್ತು ಸಾವಿರಕ್ಕೂ ಹೆಚ್ಚು ಇನಾಕ್ಯುಲೇಷನ್‌ಗಳನ್ನು ಮಾಡಿದರು. ಆದರೆ ಅಸ್ವಸ್ಥತೆ ಮರುಕಳಿಸಿದ್ದರಿಂದ ಮತ್ತೆ ಇಂಗ್ಲೆಂಡಿಗೆ ವಾಪಸಾಗಬೇಕಾಯಿತು.

ಈ ನಡುವೆ 1895ರ ಸೆಪ್ಟೆಂಬರ್ 8ರಂದು ಮಹಾನ್ ವಿಜ್ಞಾನಿ ಲು ಯಿ ಪ್ಯಾಶ್ಚರ್‌ರ ಅವಸಾನವಾಯಿತು. ಆ ತುಂಬಲಾರದ ನಷ್ಟದಿಂದ ಹಾಫ್‌ಕಿನ್ನರು ಚಿಂತಾಕ್ರಾಂತರಾದರು. ಹಾಫ್‌ಕಿನ್ನರಿಗೆ, ಪ್ಯಾಶ್ಚರ್ ಕೇವಲ ಒಬ್ಬ ರಸಾಯನ ಶಾಸ್ತ್ರಜ್ಞರಾಗಿರಲಿಲ್ಲ; ವೈದ್ಯ ಶಾಸ್ತ್ರಜ್ಞ ಮತ್ತು ಜೀವಶಾಸ್ತ್ರಗಳಿಗೆ ಹೊಸದೊಂದು ಮಾರ್ಗ ತೋರಿಸಿದ ದಾರಿ ದೀಪವಾಗಿದ್ದರು; ವಿಶಾಲ ಅರ್ಥದಲ್ಲಿ ಅವರಿಗೆ ಮಹಾನ್ ಗುರುವಾಗಿದ್ದರು. ಕಾಲರಾ ನಿರೋಧಕ ಲಸಿಕೆಯ ತತ್ವ ಅವರಲ್ಲಿ ಮೊಟ್ಟ ಮೊದಲಿಗೆ ರೂಪುಗೊಂಡಿದ್ದು ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿಯೇ. ಅಲ್ಲಿಯೇ ಹಾಫ್‌ಕಿನ್ನರ ವೈಜ್ಞಾನಿಕ ಸಿದ್ಧಾಂತಗಳು ಒಂದು ಆಕಾರ ತಳೆದದ್ದು. **ಬ್ರಿಟಿಷ್ ಮೆಡಿಕಲ್ ಜರ್ನಲ್**‌ನಲ್ಲಿ ಅವರು ಪ್ರಕಟಿಸಿದ ಶ್ರದ್ಧಾಂಜಲಿಯಲ್ಲಿ ತಮ್ಮಭಾವನೆಗಳನ್ನು ವ್ಯಕ್ತಪಡಿಸಿದ್ದರು. ''ಭಾರತದಲ್ಲಿ ಪ್ರಯೋಗಗಳನ್ನು ಕೈಗೊಂಡು ಯುರೋಪಿಗೆ ನಾನು ಹಿಂತಿರುಗಿದಾಗ ಪ್ಯಾಶ್ಚರ್ ಮಹಾಶಯರೇ ಮರಣ ಶಯ್ಯೆಯಲ್ಲಿದ್ದರು. ಭಾರತದಲ್ಲಿ ನಾನು ಕೈಗೊಂಡ ಪ್ರಯೋಗಗಳ ಯಶಸ್ಸುಗಳಿಗೆಲ್ಲಾ ಅವರೇ ಕಾರಣೀಭೂತರು; ಮತ್ತು ಮಾರ್ಗದರ್ಶಕರು. ಈಗ ನನಗುಳಿದಿರುವುದು ಅವರ ಪೂಜ್ಯ ಸ್ಮೃತಿ ಮಾತ್ರ'' ಎಂದು ತಮ್ಮ ದುಃಖವನ್ನು ತೋಡಿಕೊಂಡಿದ್ದರು.

ಮಹಾನುಭಾವನಾದ ವಿದ್ವಾಂಸನೊಬ್ಬನ ಅವಸಾನವಾದಾಗ ಇಡೀ ಪ್ರಪಂಚವೇ ಗತಿಸಿದಂತಾಗುತ್ತದೆಂಬ ನಾಣ್ಣುಡಿಯೊಂದು ಭಾರತದಲ್ಲಿ ಪ್ರಚಲಿವಿದೆಯಷ್ಟೆ. ಪ್ಯಾಶ್ಚರ್‌ರ ಮರಣದಿಂದ ಹಾಫ್‌ಕಿನ್ನರಿಗೆ ಅವರಲ್ಲಿದ್ದ ಬೆಲೆ ಕಟ್ಟಲಾರದಂಥ ಆದರ್ಶಗಳು, ಭಾವನೆ ಮತ್ತು ಆನಂದಗಳ ಘಟನೆಗಳೇ ಗತಿಸಿಹೋದಂತಾಯಿತು. ಅವರ ಜೀವನದ ಒಂದು ಭಾಗವನ್ನೇ ಕಳೆದುಕೊಂಡಂತಾಯಿತಂತೆ.

ಲೂಯಿಪ್ಯಾಶ್ಚರ್ ಅಸ್ವಸ್ಥತೆಯಿಂದ ನರಳುತ್ತಿದ್ದಾಗಲೇ 1895ರ ಏಪ್ರಿಲ್‌ನಲ್ಲಿ ಪ್ರಯೋಗಾಲಯಕ್ಕೆ ಬಂದಿದ್ದರಂತೆ; ಅದೇ ಅವರ ಕೊನೆಯ ಭೇಟಿಯಾಯಿತು. ಅವರ ಮುಂದೆ ಪ್ರೊ:ರೂ ಒಂದು ಸೂಕ್ಷ್ಮದರ್ಶಕವನ್ನಿರಿಸಿ ಅದರಲ್ಲಿದ್ದ ಒಂದು ಪ್ಲೇಗ್ ಬ್ಯಾಸಿಲೈಯ ದರ್ಶನ ಮಾಡಿಸಿದರಂತೆ (ಕೆಲವು ವರ್ಷಗಳ ಹಿಂದೆ ಯೆರ್ಸಿನ್ ಮತ್ತು ಜಪಾನೀ ರೋಗಾಣು ಶಾಸ್ತ್ರಜ್ಞ ಕಿಟಾಸಾಟೋ ಅದನ್ನು ಕಂಡು ಹಿಡಿದಿದ್ದು) ಅದರ ಕಡೆ ದೃಷ್ಟಿ ಹಾಯಿಸಿದ ಪೂಜನೀಯ ವಿಜ್ಞಾನಿಯ ಮುಖ ಮಂದಸ್ಮಿತವಾಯಿತಂತೆ. ಮಾನವ ಕುಲದ ಮಹಾನ್ ಶತ್ರುವೆಂದು ಪರಿಗಣಿಸಲಾಗಿದ್ದ ಪ್ಲೇಗ್ ರೋಗಾಣುವನ್ನು ಅವರ ಶಿಷ್ಯರೇ ಸೆರೆಹಿಡಿಯುವಂತಾದುದು ಅವರಿಗೆ ಮಹದಾನಂದವನ್ನುಂಟು ಮಾಡಿತ್ತಂತೆ. ಮುಂದೊಂದು ದಿನ ಅವರ ಶಿಷ್ಯರಲ್ಲೇ ಕೆಲವರು ಪ್ಲೇಗ್ ಮತ್ತು ಹಳದಿ ಜ್ವರಗಳ ವಿರುದ್ಧ ನಿರೋಧಕ ಕ್ರಮಗಳನ್ನು ರೂಪಿಸುತ್ತಾರೆಂಬುದರಲ್ಲಿ ತಮಗೆ ಅನುಮಾನಗಳಿಲ್ಲವೆಂದು ಉದ್ಗರಿಸಿದರಂತೆ.

ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನಲ್ಲಿ ಅವರು ನುಡಿದಿದ್ದ ಭವಿಷ್ಯ ನಿಜವಾಯಿತು. ಮುಂದಿನ ಹದಿನೆಂಟು ತಿಂಗಳುಗಳಲ್ಲಿ ಪ್ಯಾಶ್ಚರ್‌ರ ಪ್ರತಿಭಾವಂತ ಶಿಷ್ಯರೊಬ್ಬರಾಗಿದ್ದ ವ್ಲಾದಿಮಿರ್ ಹಾಫ್‌ಕಿನ್ ಪ್ಲೇಗ್ ವಿರುದ್ಧ ಕಾರ್ಯವೆಸಗುವ ಯಶಸ್ವೀ ವ್ಯಾಕ್ಸೀನನ್ನು ಭಾರತದಲ್ಲೇ ಆವಿಷ್ಕರಿಸಿದರು.

# ೧೦

# ಪ್ಲೇಗ್ ವ್ಯಾಧಿಯ ಇತಿಹಾಸ

ಮೈಲಿ, ಕಾಲರಾಗಳಂತಹ ಸಾಂಕ್ರಾಮಿಕ ಪಿಡುಗುಗಳ ಹಾಗೆ, ಪ್ಲೇಗ್ ವ್ಯಾಧಿ ಮಾನವನ ಇತಿಹಾಸದುದ್ದಕ್ಕೂ ಅಸಂಖ್ಯಾತ ಸಾವು ನೋವುಗಳಿಗೆ ಕಾರಣವಾಗಿದೆ. ಅದೊಂದು ಅತ್ಯಂತ ಪ್ರಾಚೀನ ಕಾಯಿಲೆಯೆನ್ನಲಾಗಿದೆ. ಭಾಗವತ ಪುರಾಣದಲ್ಲೂ ಪ್ಲೇಗನ್ನು ಹೋಲುವ ರೋಗವೊಂದರ ವಿವರಣೆ ಇದೆಯಂತೆ. ಅದಕ್ಕೊಂದು ರೋಚಕ ಇತಿಹಾಸವೂ ಇದೆ.

ಪ್ಲೇಗಿನ ಮೊದಲ ದಾಖಲೆಗಳು ಕ್ರಿ.ಪೂ431-404ರ ಸಮಯದಿಂದಲೂ ಲಭ್ಯವಿದೆ. ಗ್ರೀಸ್ ಪ್ರದೇಶದಲ್ಲಿ ಜರುಗಿದ ಪೆಲೋಪೊನ್ನೀಶಿಯನ್ ಯುದ್ಧದಲ್ಲಿ ಅದರಿಂದ ಸಹಸ್ರಾರು ಜನರು ಸತ್ತರಂತೆ ಅಲ್ಲಿಂದ ಅಥೆನ್ಸ್‌ಗೂ ಹರಡಿ ಅದರಿಂದಾದ ಸಾವು ನೋವುಗಳ ಬಗೆಗೆ ಇತಿಹಾಸಕಾರ ಥೂಸಿಡೈಡೆಸ್ ಆ ರೋಗದ ವಿವರಗಳನ್ನು ಒದಗಿಸಿದ್ದಾನೆ; ವಿಪರ್ಯಾಸದ ಸಂಗತಿಯೆಂದರೆ ಅಂತಿಮವಾಗಿ ಅವನೂ ಆ ರೋಗಕ್ಕೆ ಬಲಿಯಾದುದು. ಕ್ರಿಸ್ತಪೂರ್ವ ಮೂರು ನೂರು ವರ್ಷಗಳ ಹಿಂದೆ ಈ ಭೀಕರ ರೋಗ ಈಜಿಪ್ಟ್‌ನಲ್ಲಿ ಅಪಾರ ಹಾನಿಯುಂಟು ಮಾಡಿತ್ತೆಂಬ ವರದಿಗಳಿವೆ. ಕ್ರಿಸ್ತಶಕ ಆರನೆ ಶತಮಾನದಲ್ಲಿ ಈ ವ್ಯಾಧಿ ಆಫ್ರಿಕಾದಿಂದ ಯುರೋಪಿನ ಬೈಜೆಂಟೈನ್ ಚಕ್ರಾಧಿಕಪತ್ಯಕ್ಕೆ ಜಿಗಿಯಿತು. ಮುಂದಿನ ಐವತ್ತು ವರ್ಷಗಳು ಈ ಪಿಡುಗು ಅಲ್ಲೇ ಸತತವಾಗಿ ಉಳಿದುಕೊಂಡು ''ಜಸ್ಟೀನಿಯನ್ ಪ್ಲೇಗ್ ಎಂದು ಹೆಸರುವಾಸಿಯಾಗಿತ್ತು; ಎಲ್ಲೆಲ್ಲಿ ನೋಡಿದರೂ ಕಣ್ಣೀರು ಕೋಡಿ ಹರಿಯುತ್ತಿತ್ತು. ಸಾಮೂಹಿಕ ಮೌನಾಚರಣೆಗಳನ್ನು ಎಲ್ಲೆಂದರಲ್ಲಿ ನೋಡಬಹುದಾಗಿತ್ತು. ಮಹಾ ನಗರಗಳ ಜನರು ಅವನ್ನು ತ್ಯಜಿಸಿ ಬೇರೆ ಕಡೆಗಳಿಗೆ ವಲಸೆ ಹೋಗುತ್ತಿದ್ದರು. ಪ್ರಕೃತಿಯ ಹಲವು ಪವಿತ್ರ ಪ್ರದೇಶಗಳಲ್ಲೆಲ್ಲಾ ಹಾಳುಸುರಿಯುತ್ತಿತ್ತು; ಅವೆಲ್ಲಾ ಮರುಳು ಗಾಡುಗಳಾಗಿ ಪರಿವರ್ತನೆಯಾದವು; ಹಿಂದೆ ಮನುಷ್ಯನ ವಾಸಸ್ಥಾನವಾಗಿದ್ದ ಪ್ರದೇಶಗಳೆಲ್ಲಾ ವನ್ಯ ಪ್ರಾಣಿಧಾಮಗಳಾಗಿದ್ದವು.

ಕ್ರಿಸ್ತಶಕ 1090ರಲ್ಲಿ ರಷ್ಯಾದೇಶಕ್ಕೆ ಪ್ಲೇಗಿನ ಮೊದಲ ದಾಳಿ ಆರಂಭವಾಯಿತು; ಕೇವಲ ನಲವತ್ತು ದಿನಗಳಲ್ಲಿ ಏಳು ಸಾವಿರ ಜನಗಳನ್ನು ಬಲಿ ತೆಗೆದುಕೊಂಡಿತು ಎಂದು ಇತಿಹಾಸಕಾರ ನೆಸ್ಟರ್ ವರದಿ ಮಾಡಿದ್ದಾನೆ. ಝಾರ್ ಚಕ್ರವರ್ತಿಯ ಇತಿಹಾಸಕಾರ 1230ನೇ ಇಸವಿಯ ತನ್ನ ದಿನಚರಿಯಲ್ಲಿ ಸ್ಮೊಲೆನ್ಸ್ಕ್ ಪಟ್ಟಣಕ್ಕೆ ಆ ರೋಗ ಹರಡಿದ ಕೆಲವೇ ದಿನಗಳಲ್ಲಿ 22,000 ಜನ ಸಾವಿಗೀಡಾಗಿದ್ದರೆಂದು ದಾಖಲಿಸಿದ್ದಾನೆ.

ಹದಿನಾಲ್ಕನೇ ಶತಮಾನವಂತೂ ಪ್ಲೇಗಿನ ತೀವ್ರ ದಾಳಿಗೆ ಸಿಲುಕಿ ತತ್ತರಿಸಿ ಹೋಯಿತು. ಆ ಸಮಯದಲ್ಲಿ ಜಗತ್ತಿನ ಕಾಲು ಭಾಗ ಜನರು ಬಲಿಯಾಗಿದ್ದರೆಂಬ ಅಂದಾಜಿದೆ. ಇಟಲಿಯ ಮೂಲಕ ಯುರೋಪನ್ನು ಪ್ರವೇಶಿಸಿದ ಪ್ಲೇಗ್ ಆ ಖಂಡದ ಇಡೀ ಜನಸಮುದಾಯವನ್ನೇ ನಿರ್ನಾಮ ಮಾಡುತ್ತದೋ ಎಂಬ ಶಂಕೆಯುಂಟಾಗಿತ್ತಂತೆ. ರೋಮ್ ನಗರದ ಮನೆಮನೆಗಳಲ್ಲಿ ಹೆಣಗಳು ಕೊಳತು ನಾರುತ್ತಿದ್ದವು; ಆಗ ಯುರೋಪಿನ ಕಾಲು ಭಾಗದಷ್ಟು ಜನರನ್ನು ಬಲಿ ತೆಗೆದುಕೊಂಡಿತ್ತೆನ್ನಲಾಗಿದೆ. ಕಪ್ಪು ಸಮುದ್ರ ತೀರದ ವಿಶಾಲವಾದ ಬಯಲು ಪ್ರದೇಶದ ಇಡೀ ಜನ ಸಮುದಾಯವೇ ನಾಶವಾಗಿತ್ತಂತೆ. ಕಪ್ಪ ಎಂಬ ಬಂದರಿನಿಂದ ಹೊರಟು ಇಟಲಿಯ ತೀರ ಪ್ರದೇಶವನ್ನು ತಲುಪಿದ ಹಡಗಿನಲ್ಲಿದ್ದ ಒಂದು ಸಾವಿರ ಜನರಲ್ಲಿ ಕೇವಲ ಹನ್ನೆರಡು ಜನ ಬದುಕಿ ಉಳಿದುಕೊಂಡಿದ್ದರಂತೆ!

ಈ ಸಾರಿ ಇಟಲಿಯ ಮೇಲೆ ಬರಸಿಡಿಲಿನಂತೆ ಎರಗಿದ ಪ್ಲೇಗು ನೇಪಲ್ಸ್‌ನಲ್ಲಿ ಅರವತ್ತು ಸಾವಿರ, ಜಿನೋವಾದಲ್ಲಿ ಒಂದು ಲಕ್ಷ ಮತ್ತು ವೆನಿಸ್‌ನಲ್ಲಿ ಒಂದು ಲಕ್ಷ ಜನರನ್ನು ಬಲಿ ತೆಗೆದುಕೊಂಡಿತು. ವೆನಿಸಿನ ಗ್ರಾಂಡ್ ಕೌನ್ಸಿಲ್‌ನ 1350 ಸದಸ್ಯರಲ್ಲಿ ಅದರ ಮೂರನೇ ಒಂದರಷ್ಟು ಸದಸ್ಯರು ಮಾತ್ರ ಉಳಿದುಕೊಂಡಿದ್ದರಂತೆ; ಅಲ್ಲಿದ್ದ ಇಪ್ಪತ್ನಾಲ್ಕು ಜನ ವೈದ್ಯರಲ್ಲಿ ನಾಲ್ಕು ಜನ ಮಾತ್ರ ಬದುಕಿದ್ದರು. ಇತಿಹಾಸದಲ್ಲಿ ಕ್ವಾರೆಂಟೀನ್ ಎಂಬ ನಲವತ್ತು ದಿನಗಳು ರೋಗ ಪೀಡಿತ ಪ್ರದೇಶದಿಂದ ಬಂದವರನ್ನು ಇತರರಿಂದ ಪ್ರತ್ಯೇಕಿಸಿಡುವ ಪದ್ಧತಿ ಜಾರಿಗೆ ಬಂದುದೇ ಈ ಸಮಯದಲ್ಲಿ. ಫ್ಲೊರೆನ್ಸ್ ನಗರದಲ್ಲಿ ತೊಂಬತ್ತಾರು ಸಾವಿರ ಜನ ಪ್ಲೇಗಿನಿಂದ ಸತ್ತಿದ್ದರೆಂದು ಬೊಕ್ಕಾಸಿಯೋ ಎಂಬವರು ವರದಿಮಾಡಿದ್ದರು. ಮುಂದಿನ ಕೆಲವೇ ದಿನಗಳಲ್ಲಿ ಪ್ಲೇಗು ಫ್ರಾನ್ಸಿಗೆ ದಾಳಿ ಮಾಡಿತು. ಅಲ್ಲಿ ಪ್ರಾಣತೆತ್ತ ಎಂಬತ್ತು ಸಾವಿರ ಜನರಲ್ಲಿ ಇಬ್ಬರು ಮಹಾರಾಣಿಯರೂ ಸೇರಿದ್ದರು. ಪ್ಯಾರಿಸ್‌ನ ಮೆಡಿಕಲ್ ಫ್ಯಾಕಲ್ಟಿಯವರು ಆ ಸಮಯದಲ್ಲಿ ಪ್ಲೇಗಿನ ಸ್ವಭಾವ, ಉದ್ಭವಗಳ ಬಗೆಗೆ ಕಲ್ಪನಾಮಯ ಊಹಾಪೋಹಗಳನ್ನು ಮಾಡಿದ್ದರು. ಚಂದ್ರ ಮತ್ತು ತಾರೆಗಳ ಚಲನವಲನದ ಪ್ರಭಾವಗಳು ಹಾಗೂ ಕ್ರಿಶ್ಚಿಯನ್ ಮತದವರನ್ನು ದ್ವೇಷಿಸುತ್ತಿದ್ದ ಯೆಹೂದ್ಯರು ಭಾವಿಗಳಿಗೆ ವಿಷ ಹಾಕಿರುವುದರಿಂದ ಪ್ಲೇಗ್ ಉಂಟಾಗುತ್ತದೆಂದು ಆರೋಪಿಸುತ್ತಿದ್ದರಂತೆ. ಐಬೀರಿಯಾ ಪರ್ಯಾಯ ದ್ವೀಪದಲ್ಲಿ ಪ್ಲೇಗ್ ತಲೆದೋರಿದಾಗ ಅಲ್ಲಿನ ಜನಸಂಖ್ಯೆಯ ನಾಲ್ಕನೇ ಐದು ಭಾಗವನ್ನು ಸಾವಿಗೀಡುಮಾಡಿತ್ತು. ಅದು ಜಿಬ್ರಾಲ್ಟರ್‌ಗೆ ಮುತ್ತಿಗೆ ಹಾಕಿದಾಗ ಅಲ್ಲಿಯ ದೊರೆ ಹನ್ನೊಂದನೇ ಆಲ್‌ಫಾನ್ಸೋ ಸತ್ತವರ ಪೈಕಿ ಒಬ್ಬರಾಗಿದ್ದರು.

ಲಂಡನ್ನಿಗೆ ಪ್ಲೇಗ್ 1348ರ ಆಗಸ್ಟ್‌ನಲ್ಲಿ ಪಾದಾರ್ಪಣೆ ಮಾಡಿತು. ಆ ಸಮಯದಲ್ಲಿ ಒಂದು ಲಕ್ಷಜನರನ್ನು ಬಲಿ ತೆಗೆದುಕೊಂಡಿತು. ಲಂಡನ್ನಿನ ಬೀದಿಗಳಲ್ಲಿ ಕೊಳೆತು ನಾರುವ ಹೆಣಗಳು ಬಿದ್ದಿರುತ್ತಿದ್ದವಂತೆ. ಆ ಸಮಯದಲ್ಲಿ ಅದು ಪೋಲೆಂಡಿಗೆ ನುಗ್ಗಿದ ಏಳು ತಿಂಗಳಲ್ಲಿ ಅರ್ಧ ಭಾಗದಷ್ಟು ಜನರು ನಾಶವಾದರಂತೆ.

ಹದಿನಾಲ್ಕನೇ ಶತಮಾನದ ಮಧ್ಯ ಭಾಗದಲ್ಲಿ ಪ್ಲೇಗ್ ರಷ್ಯಾಕ್ಕೆ ಮತ್ತೊಂದು ಸಾರಿ ಹಿಂತಿರುಗಿತು. ಮೊದಲಿಗೆ ರೈಯಜಾನ್, ಮಾಸ್ಕೋ ಮತ್ತು ಕೊಲೋಮ್ನ ಪ್ರದೇಶಗಳನ್ನು ಸುತ್ತುವರಿಯಿತು. ಅಲ್ಲಿಂದ ಮುಂದೆ ವೋಲ್ಗಾ ಮತ್ತು ಡಾನ್ ನದಿಗಳ ಸರಹದ್ದಿನಲ್ಲೇ ಕೆಳಗಿಳಿದು ಹಿಂದೆ ಆರಂಭವಾಗಿದ್ದ ಎಡೆಯಲ್ಲೇ ತನ್ನ ಅಂತ್ಯವನ್ನೂ ಕಂಡಿತು.

ಹದಿನಾಲ್ಕನೇ ಶತಮಾನದಲ್ಲಿ ಪ್ರಪಂಚದಾದ್ಯಂತ ಸುಮಾರು ನಲವತ್ತು ಮಿಲಿಯನ್ (ನಾಲ್ಕುಕೋಟಿ) ಜನರು ಪ್ಲೇಗಿಗೆ ಆಹುತಿಯಾದರೆಂದು ಪೋಪ್ ಕ್ಲೆಮಿಂಟ್‌ರಿಗೆ ವರದಿಯಾಗಿತ್ತು; ಅದರಲ್ಲಿ ಯುರೋಪಿನವರೇ ಇಪ್ಪತ್ತೈದು ಮಿಲಿಯನ್ (ಎರಡುವರೆ ಕೋಟಿ) ಜನರಿದ್ದರಂತೆ.

ಆದರೂ ಈ ಭೀಕರ ವ್ಯಾಧಿ ಯುರೋಪ್ ಖಂಡದಿಂದ ಹಿಂಜರಿಯಲೇ ಇಲ್ಲ. ಹದಿನಾಲ್ಕು, ಹದಿನೈದು, ಮತ್ತು ಹದಿನಾರನೇ ಶತಮಾನಗಳುದ್ದಕ್ಕೂ ಯುರೋಪಿಗೆ ಭೇಟಿ ನೀಡುತ್ತಲೇ ಇತ್ತು. ಈ ಸಮಯದಲ್ಲೇ ಈ ಪಿಡುಗು ''ಕರಾಳ ಮೃತ್ಯು'' (Black Death) ಎಂಬ ಕುಖ್ಯಾತಿ ಪಡೆಯಿತು.

ಹದಿನೇಳನೇ ಶತಮಾನದ ಆದಿಭಾಗಲ್ಲಿ ಅದರ ''ಬೆಳೆ''ಯಿಂದ ಸಮೃದ್ಧ ''ಸುಗ್ಗಿ''ಯೇ ಆಯಿತು. ಮಾಸ್ಕೋ ಒಂದರಲ್ಲೇ 1602ರಲ್ಲಿ ಸುಮಾರು ಒಂದು ಲಕ್ಷದ ಏಳು ಸಾವಿರ ರೋಗಿಗಳ ಶವಗಳನ್ನು ಸರ್ಕಾರೀ ವೆಚ್ಚದಿಂದ ಸಮಾಧಿಮಾಡಿದವರಂತೆ. ಭಯಭೀತರಾದ ಜನ ಸಮೂಹ ಮಾಸ್ಕೋ ಬಿಟ್ಟು ಓಡಿಹೋಗದಂತೆ ಸರ್ಕಾರದವರು ಏರ್ಪಡಿಸಿದ್ದ ಕಟ್ಟುನಿಟ್ಟಾದ 'ಆರೋಗ್ಯ ರಕ್ಷಣಾವರಣ''ಗಳನ್ನು ಮುರಿದು ಹೊರಬಂದು ರಷ್ಯಾದ ಇತರ ಭಾಗಗಳಿಗೂ ಕಾಯಿಲೆಯನ್ನು ಪ್ರಸರಿಸುತ್ತಾ ಓಡಿ ಹೋದರು. ಮುಂದಿನ ಐವತ್ತು ವರುಷಗಳು ಪ್ಲೇಗಿನ ಕರಾಳ ರೆಕ್ಕೆಗಳು ರಷ್ಯಾದ್ಯಂತ ಹಾರಾಡುತ್ತಲೇ ಇದ್ದವು.

ಹತ್ತನೇ ಶತಮಾನದಲ್ಲಿ ಪ್ಲೇಗ್ ಆಫ್ರಿಕಾಕ್ಕೆ ಹರಡಿ, ಅಲ್ಲಿಂದ ಸಿರಿಯಾ ಮತ್ತು ಕಾನ್ಸ್ಟಾಂಟಿನೋಪಲ್‌ಗಳಿಗೆ ಭೇಟಿ ನೀಡಿತು. ಹತ್ತೊಂಬತ್ತನೆ ಈಶತಮಾನದಲ್ಲಿ ಆರಂಭವಾದ ''ಹಬೆಯ ಯುಗ''ದಲ್ಲಿ ಪ್ಲೇಗಿನ ಹಾವಳಿ ಸ್ವಲ್ಪ ಮಟ್ಟಿಗೆ ಕಡಿಮೆಯಾಯಿಯ ತೆನ್ನಬಹುದಾದರೂ, ಅದರ ''ಮಹಾಸಾಂಕ್ರಾಮಿಕ'' ಪ್ರಪಂಚದೆಲ್ಲೆಡೆಆವರಿಸಿಕೊಂಡಿತ್ತು.

ಪ್ಲೇಗಿನ ಮೂಲ ಮಧ್ಯ ಏಷ್ಯಾದ ಪ್ರದೇಶವೆಂಬ ಪ್ರತೀತಿ ಇದೆ. ಚೀನಾದಲ್ಲಿ 1334 ಮತ್ತು 1570ರ ದಿನಗಳಲ್ಲಿ ಪ್ಲೇಗ್‌ನ ಹಾವಳಿ ವ್ಯಾಪಕವಾಗಿಯೇ ಇತ್ತು. ಸಾವಿರದೆಂಟನೂರ ಎಪ್ಪತ್ತರ ಸಮಯದಲ್ಲಿ ಸತ್ತವರ ಸಂಖ್ಯೆಯನ್ನು ತಿಳಿಯಲು ಶವಗಳನ್ನು ಹೂಳಲು ತಯಾರುಮಾಡುತ್ತಿದ್ದ ಪೆಟ್ಟಿಗೆಗಳ ಲೆಕ್ಕವನ್ನು ಅಲ್ಲಿನ ಚಕ್ರವರ್ತಿ ತರಿಸಿಕೊಳ್ಳುತ್ತಿದ್ದರಂತೆ; ಅವರಿಂದ ಅರವತ್ತು ಸಾವಿರ ಪೆಟ್ಟಿಗೆಗಳ ಲೆಕ್ಕ ಸಿಕ್ಕಿತ್ತಂತೆ. ಪ್ಲೇಗಿನಿಂದ ಹಾಂಕಾಂಗ್‌ನಲ್ಲಿ ಜರುಗಿದ ಮಾರಣ ಹೋಮವನ್ನು ಕುರಿತು ಫ್ರೆಂಚ್ ಲೇಖಕ ವಿನ್ಸೆಂಟ್ ಬ್ರುನೇಟರೇ ''ವಿಜ್ಞಾನವು ತನ್ನ ಗೌರವವನ್ನು ಶಾಶ್ವತವಾಗಿ ಕಳೆದುಕೊಂಡು ಸೋಲನ್ನೊಪ್ಪಿ ಕೊಳ್ಳಬೇಕಾಗಿದೆ'' ಎಂದು 1895ರಲ್ಲಿ ಬರೆದಿದ್ದರು. ಆ ಸಮಯದಲ್ಲಿ ಮಿಣಜೀವಿ

ಶಾಸ್ತ್ರಜ್ಞರು ಒಳ್ಳೆಯ ಪ್ರಗತಿಯ ಹಾದಿಯಲ್ಲಿದಾಗ ಅಂತಹ ಭವಿಷ್ಯವಾಣಿಗಳು ಅಸಂಗತ ವೆನ್ನಬಹುದು. ವಿಪರ್ಯಾಸವೋಯೆಂಬಂತೆ ಆಗ ಹಾಂಕಾಂಗ್ ಪ್ಲೇಗಿನ ವಿರುದ್ಧ ಅಸಹಾಯಕ ಸ್ಥಿತಿಯಲ್ಲಿದ್ದರೂ ಮುಂದೆ ಅದರ ಮಾರಣ ಹೋಮಕ್ಕೆ ನಾಂದಿಯಾಗುವ ಘಟನೆ ಅಲ್ಲೇ ಜರುಗಿದುದು. ಪ್ಲೇಗಿಗೆ ಕಾರಣವಾದ ಮಿಣಜೀವಿಗಳನ್ನು ಹಾಂಗ್‌ಕಾಂಗ್ ನಲ್ಲೇ ಪ್ಯಾಶ್ಚರ್ ಇನ್ಸಿಟಿಟ್ಯೂಟ್‌ನ ಯೆರ್ಸಿನಾ ಮತ್ತು ಜಪಾನಿನ ಕಿಟಸಾಟೋ 1894ರಲ್ಲಿ ಕಂಡು ಹಿಡಿದರು. ಅದೊಂದು ಗಿಡ್ಡನೆಯ ಹಾಗೂ ಅಗಲವಾದ ''ಕಾಯ್ಜೀವಿತೆರ'' (coccoid) ಬ್ಯಾಸಿಲ್ಲೈ ಆಗಿತ್ತು. ಈ ಬ್ಯಾಸಿಲ್ಲೈಗಳು ವ್ಯಾಧಿ ಪೀಡಿತರ ಊದಿಕೊಂಡ ದುಗ್ಧಗ್ರಂಥಿಗಳ ಬ್ಯೂಬೋಗಳಲ್ಲಿ ಯಥೇಚ್ಛವಾಗಿರುತ್ತಿದ್ದವು. ಹಾಂಕಾಂಗ್‌ನಲ್ಲಿ ಪ್ಲೇಗ್ ಹರಡುತ್ತಿದ್ದ 2-3 ವಾರಗಳಿಗೆ ಮೊದಲೇ ಇಲಿಗಳು. ''ಪ್ರಾಣಿ ಸಾಂಕ್ರಾಮಿಕತೆ''ಯಿಂದ ಸಾಯುತ್ತಿದ್ದುದನ್ನು ಅಲ್ಲಿಯ ಜನ ಗಮನಿಸಿದ್ದರು. ಪ್ಲೇಗ್ ಬ್ಯಾಸಿಲ್ಲೈ ಅಂದಿನಿಂದ ಯೆರ್ಸಿನಿಯಾ ಪೆಸ್ಟಿಸ್ ಎಂಬ ಹೆಸರಿನಿಂದಲೇ ಕರೆಯಲ್ಪಡುತ್ತದೆ. ಗ್ಲೆನ್‌ಲಿಸ್ಟನ್ ಎಂಬ ವಿಜ್ಞಾನಿ ಮುಂಬಯಿಯಲ್ಲೇ ಈ ಪ್ಲೇಗ್ ರೋಗಾಣುಗಳು ಒಂದು ಬಗೆಯ ಚಿಗಟ (FLEAS)ಗಳಿಂದ ಹರಡುತ್ತದೆಂದು ಸಾದರಪಡಿಸಿದರು. (1905)

ಭಾರತದಲ್ಲಿ ಪ್ಲೇಗಿನ ಇತಿಹಾಸದ ಬಗೆಗೆ ಸ್ವಲ್ಪ ವಿವರಣೆ ಆವಶ್ಯಕವೆನಿಸುತ್ತದೆ. ಭಾಗವತ ಪುರಾಣದಷ್ಟು ಹಿಂದೆಯೇ ಪ್ಲೇಗನ್ನು ಹೋಲಬಹುದಾದ ರೋಗವೊಂದರ ಪ್ರಸ್ತಾಪವಿರುವುದನ್ನು ಈ ಮೊದಲೇ ಸೂಚಿಸಲಾಗಿದೆ. ನಂತರ ಪ್ಲೇಗ್ ಭಾರತದಲ್ಲಿ ಕಾಣಿಸಿಕೊಂಡಿದ್ದರ ದಾಖಲೆ ಪೋರ್ಚುಗೀಸರು ಮುಂಬಯಿಯನ್ನು ಆಕ್ರಮಿಸಿಕೊಂಡ ಸಮಯದಲ್ಲಿ ಎಂದು ತಿಳಿದು ಬರುತ್ತದೆ. ಮುಂಬಯಿಯಲ್ಲಿ ಆಗ ಬೀಡು ಬಿಟ್ಟಿದ್ದ ಸುಮಾರು 1800 ಪೋರ್ಚುಗೀಸರಲ್ಲಿ ಪ್ಲೇಗಿನ ಹಾವಳಿಯಿಂದ ಕೇವಲ 50 ಜನ ಬದುಕಿ ಉಳಿದಿದ್ದರಂತೆ! ಮುಂದೆ 1896ರಲ್ಲಿ ಮುಂಬಯಿಯಲ್ಲೇ ಮತ್ತೆ ಪ್ಲೇಗ್ ಹಠಾತ್ತನೆ ಕಾಣಿಸಿಕೊಂಡಿತು. ಹಾಗೂ ಅಲ್ಲಿಂದ ದೇಶಾದ್ಯಂತ ಹರಡಿತು. ಮೊಟ್ಟ ಮೊದಲಿಗೆ ಜುಲೈ ತಿಂಗಳಲ್ಲಿ (1896) ಮುಂಬಯಿ ದ್ವೀಪದ ಪೂರ್ವದ ಕಡೆಯ ತೀರಪ್ರದೇಶದಲ್ಲಿ ದಟ್ಟ ಜನ ಸಂದಣಿಯಿಂದ ಕೂಡಿದ ಕೊಳಚೆ ಪ್ರದೇಶಗಳಲ್ಲಿ ನಿಗೂಢ ರೀತಿಯಲ್ಲಿ ಪ್ರಕಟ ವಾಯಿತು. ಈ ನಿಗೂಢ ವ್ಯಾಧಿಗ್ರಸ್ಥರು ಒಂದೆರಡು ದಿನಗಳಲ್ಲೇ ಸಾಯುತ್ತಿದ್ದರು. ವೈದ್ಯ ಸಮೂಹದವರಿಗೂ ತಕ್ಷಣ ಅದಾವ ರೋಗವಿರಬಹುದೆಂಬುದರ ಅರಿವು ಇದ್ದಂತಿರಲಿಲ್ಲ. ಆಗಸ್ಟ್ 15ರಂದು ಅಂತಹ ಎರಡು ಪ್ರಕರಣಗಳು ದಾಖಲಾದವು. ಅವರಿಬ್ಬರೂ ವಿಪರೀತ ಜ್ವರದಿಂದ ಬಳಲುತ್ತಿದ್ದು ನ್ಯೂಮೋನಿಯಾ ಆಗಿರಬಹುದೆಂಬುದು ವೈದ್ಯರ ಸಂಶಯವಾಗಿತ್ತು. ಇನ್ನೆರಡು ದಿನಗಳಲ್ಲೇ ಅವರಿಬ್ಬರೂ ಸಾವಿಗೀಡಾದರು. ಅವರ ಸಾವು ಸ್ಥಳೀಯ ವೈದ್ಯ ಸಮೂಹದವರನ್ನು ದಿಗ್‌ಭ್ರಮೆಗೊಳಿಸಿತು. ಮುಂದಿನ ತನಿಖೆಯಿಂದ ಆ ಇಬ್ಬರು ರೋಗಿಗಳು ಕೆಲವು ದಿನಗಳ ಹಿಂದೆ ಇನ್ನೊಂದು ನಗರಕ್ಕೆ ಭೇಟಿ ನೀಡಿ ಹಿಂತಿರುಗಿದವರಾಗಿದ್ದರು; ಅಲ್ಲಿ ಅವರು ಚೀನಾದ ಕ್ಯಾಂಟನ್‌ನಗರದಿಂದ ವ್ಯಾಪಾರಾರ್ಥ

ವಾಗಿ ಬಂದ ಕೆಲವು ಚಹಾ ವ್ಯಾಪಾರಿಗಳೊಡನೆ ಸಂಪರ್ಕವಿರಿಸಿಕೊಂಡಿದ್ದರು. ಈ ವರ್ತಕರ ಅಂಗಡಿಗಳಲ್ಲಿ ಕೆಲವು ಸತ್ತ ಇಲಿಗಳನ್ನೂ ಸಹಾ ಇವರು ನೋಡಿದ್ದರು. ಸಮಸ್ಯೆ ಈಗ ತಿಳಿಯಾಗತೊಡಗಿತು. ಬಹುಶಃ ಕ್ಯಾಂಟನ್‌ನಿಂದ ಸರಕುಗಳನ್ನು ಸಾಗಿಸುತ್ತಿದ್ದ ಹಡಗುಗಳಿಂದ ಪ್ಲೇಗ್ ಪೀಡಿತ ಇಲಿಗಳೂ ಇಲ್ಲಿಗೆ ರವಾನೆಯಾಗಿದ್ದವು; ಆ ಇಲಿಗಳೇ ಇಲ್ಲಿ ಪ್ಲೇಗಿನ ಸೋಂಕನ್ನು ಹರಡುವ ವಾಹಕಗಳಾಗಿದ್ದವು. ಆದರೂ ಇಂತಹ ಅಪಾಯಕಾರಿ ಸೂಚನೆಯನ್ನು ಯಾರೂ ಗಂಭೀರವಾಗಿ ಪರಿಗಣನೆಗೆ ತೆಗೆದು ಕೊಂಡಂತಿಲ್ಲ. ಹಾಗೆಯೇ 40 ದಿನಗಳು ಸಂದು ಹೋದವು. ಅಂತಿಮವಾಗಿ ಮುಂಬಯಿಯ ವೈಗಾಸ್ ಎಂಬ ವೈದ್ಯರು ಅಲ್ಲಿಯ ವಿಚಿತ್ರ ಕಾಯಿಲೆ ಪ್ಲೇಗ್ ವ್ಯಾಧಿಯೆಂಬುದನ್ನು ಖಚಿತಪಡಿಸಿದರು. ಆದರೂ ಆಗಿನ ಬ್ರಿಟಿಷ್ ವಸಾಹತುಶಾಹಿ ಆಡಳಿತ ವರ್ಗದವರು ಈ ವಿಷಯ ಒಪ್ಪಿಕೊಂಡು ಪ್ರಚಾರಮಾಡಲು ತಯಾರಿರಲಿಲ್ಲ. ಭಾರತದ ವಿದೇಶಿ ವ್ಯಾಪಾರ ವಹಿವಾಟುಗಳು ದೇಶದ ಹೆಬ್ಬಾಗಿಲೆನಿಸಿದ ಮುಂಬಯಿ ನಗರದ ಮೂಲಕವೇ ಜರುಗುತ್ತಿದ್ದು, ಅಲ್ಲಿ ಪ್ಲೇಗ್ ಇರುವ ಬಗೆಗೆ ಪ್ರಚಾರ ನಡೆದರೆ ಅವರ ವ್ಯಾಪಾರ ಮತ್ತಿತರ ಕಾರ್ಯಕ್ರಮಗಳ ಮೇಲೆ ತೀವ್ರ ಪರಿಣಾಮ ಭೀರಬಹುದೆಂಬ ಭಯ-ಭೀತಿಯೇ ಅವರ ವರ್ತನೆ ಕಾರಣವಾಗಿತ್ತು! ಅಲ್ಲಿಯ ಹಡಗು ಕಟ್ಟೆಯ ಆಜುಬಾಜಿನ ಜನಭರಿತ ಕೂಲಿಯಾಳುಗಳ ಜೋಪಡಿಗಳಲ್ಲಿ ಪ್ರತಿದಿನ 10-12 ಜನ ಪ್ಲೇಗಿನಿಂದ ಸಾಯುತ್ತಿದ್ದರು; ಅಚ್ಚರಿಯ ಸಂಗತಿ ಎಂದರೆ ಆ ಸಮಯದಲ್ಲೇ ಭಾರತದಲ್ಲಿನ ಪ್ಲೇಗ್ ಪರಿಸ್ಥಿತಿ ಬಗೆಗೆ ರಷ್ಯಾ ಸರ್ಕಾರದವರು ಮಾಹಿತಿಯನ್ನು ಅಪೇಕ್ಷಿಸಿದಾಗ ಪ್ಲೇಗಿನ ರೋಗಿಗಳ ಸಂಖ್ಯೆ ತೀರ ಕಡಿಮೆಯಾಗಿದೆ, ಹಾಗೂ ಕೇವಲ ಸೂಕ್ಷ್ಮ ದರ್ಶಕದಲ್ಲಿ ನೋಡಬಹುದೇನೋ ಎಂಬ ಸುಳ್ಳು ಮಾಹಿತಿಯನ್ನು ಒದಗಿಸಿದ್ದರು. ಆ ಉತ್ತರ ನೀಡಿದ ಸಮಯದಲ್ಲೇ ಮುಂಬಯಿ ಷಹರಿನಲ್ಲೇ ಪ್ರತಿ ತಿಂಗಳು 2500 ಜನ ಸಾಯುತ್ತಿದ್ದರು. ಇದೊಂದು ಕಡೆಯಾದರೆ, ಸಲೋಮನ್ ಇಜ್ಜ ಎಂಬ ಮತ ಪ್ರಚಾರಕ ಆ ಶತಮಾನ ಅಂತ್ಯವಾಗುತ್ತಿರುವ ಸಮಯದಲ್ಲಿ ಪಾಪಿಗಳಾದ ಮಾನವರನ್ನೆಲ್ಲಾ ಪ್ಲೇಗ್ ಮೂಲಕ ನಾಶಮಾಡಿ ವಿಶ್ವವನ್ನು ಪರಿಶುದ್ಧಗೊಳಿಸುವ ಭಗವದೇಚ್ಛೆಯೆಂದು ಭವಿಷ್ಯವನ್ನು ಸಾರುತ್ತಿದ್ದನಂತೆ! ಇಂತಹ ಭವಿಷ್ಯ ವಾಣಿಗಳಿಂದ ಭಯಭೀತರಾದ ನಗರದ ಅಂದಾಜು ನಾಲ್ಕು ಲಕ್ಷಜನ ಮುಂಬಯಿಯಿಂದ ದಿಕ್ಕಾಪಾಲಾಗಿ ವಲಸೆ ಹೋಗತೊಡಗಿದರು. ಮುಂಬಯಿಯಲ್ಲಿ ಈ ವ್ಯಾಧಿ ಬಹುಪಾಲು ಭಾರತೀಯರನ್ನು ಬಲಿ ತೆಗೆದುಕೊಳ್ಳುತಿದ್ದು, ಯುರೋಪಿಯನ್ನರು ವಾಸಿಸುತ್ತಿದ್ದ ವಲಯಗಳಲ್ಲಿ ಅದೇಕೆ ಹರಡುತ್ತಿಲ್ಲ? ಎಂಬುದು ಬಹುಜನರಿಗೆ ಹೊಳೆದಂತಿಲ್ಲ. ಮುಂಬಯಿಯಲ್ಲಿ ಆಗ ದಾಖಲಾದ 10,000 ಪ್ಲೇಗ್ ಪ್ರಕರಣಗಳಲ್ಲಿ ಕೇವಲ 23 ಯುರೋಪಿಯನ್ನರಿಗೆ ತಗುಲಿ ಅವರಲ್ಲಿ ಎರಡು ಜನ ಮಾತ್ರ ಸಾವಿಗೀಡಾಗಿದ್ದರು. ಈ ಪ್ರಕರಣಗಳೆಲ್ಲಾ ಯುರೋಪಿಯನ್ನರೇ ಸಾಮಾನ್ಯವಾಗಿ ವಾಸಿಸುತ್ತಿದ್ದ ಎಸ್ಪಲನೇಡ ಜಿಲ್ಲೆಯಲ್ಲಿ ಕಾಣಿಸಿಕೊಂಡಿದ್ದವು; ಭಾರತೀಯರು ವಾಸಿಸುತ್ತಿದ್ದ ಜಿಲ್ಲೆಗಳಲ್ಲಿ ಸಾವು ನೋವುಗಳು 10-20 ಪಟ್ಟು ಜಾಸ್ತಿಯಾಗಿರುತ್ತಿದ್ದವು.

ಇಂತಹ ಪರಿಸ್ಥಿತಿಯಲ್ಲಿ ಹತಾಶರಾದ ಮುಂಬಯಿ ನಿವಾಸಿಗಳು ವೈದ್ಯರನ್ನಾಗಲೀ, ಸರ್ಕಾರೀ ಅಧಿಕಾರಿಗಳನ್ನಾಗಲೀ ನಂಬುವ ಸ್ಥಿತಿಯಲ್ಲಿರಲಿಲ್ಲ. ಅವರೆಲ್ಲಾ ಮುಂಬಯಿಯ ದ್ವೀಪವನ್ನು ತ್ಯಜಿಸಿ ಪಕ್ಕದ ಭೂ ಪ್ರದೇಶಕ್ಕೆ ದಾಟಿ ಬಂದರು. ಅಲ್ಲಿಂದ ಅವರು ಹಡಗು/ದೋಣಿ, ರೈಲು ಇಲ್ಲವೇ ನಡೆದುಕೊಂಡೇ ದೇಶದ ವಿವಿಧ ಭಾಗಗಳಿಗೆ ವಲಸೆ ಹೋಗಲಾರಂಭಿಸಿದರು. ಕೆಲವರು ಕರಾಚಿಯತ್ತ ಹೊರಟರೆ ಮತ್ತೆ ಕೆಲವರು ದಕ್ಷಿಣ ಭಾರತದ ಕಡೆಗೆ ಧಾವಿಸಿದರು. ಎಲ್ಲೆಲ್ಲಿ ನೋಡಿದರೂ ತಲೆ ಮೇಲೆ ಸಾಮಾನುಗಳನ್ನು ಹೊತ್ತುಕೊಂಡು ತಿರುಗಾಡುವವರ ತಂಡಗಳು ಕಂಡು ಬರುತ್ತಿದ್ದವು. ಹೀಗೆ ಸಾವಿರಗಟ್ಟಲೆ ಜನ ಪ್ಲೇಗಿನ ಹಾವಳಿಯಿಂದ ದಿಕ್ಕಾಪಾಲಾಗಿ ಓಡುತ್ತಿದ್ದ ವರದಿಗಳನ್ನು ಕಲ್ಕತ್ತಾದಲ್ಲಿದ್ದ ಭಾರತದ ಕೇಂದ್ರ ಸರ್ಕಾರ ಅಲಕ್ಷಿಸುವಂತಿರಲಿಲ್ಲ. ಆ ದಿಸೆಯಲ್ಲಿ ಏನಾದರೊಂದು ಕ್ರಮತೆಗೆದುಕೊಳ್ಳುವುದು ಅನಿವಾರ್ಯವೆನಿಸಿತು. ಆಸಂದರ್ಭದಲ್ಲಿ ಅವರಿಗೆ ಹೊಳೆದ ಒಂದೇ ಉಪಾಯವೆಂದರೆ, ಈಗಾಗಲೇ ಕಾಲರಾ ಸೋಂಕಿನ ಮೇಲೆ ವಿಜಗಳಿಸುತ್ತಿದ್ದ ವ್ಲಾದಿಮಿರ್ ಹಾಫ್‌ಕಿನ್ನರನ್ನು ಮುಂಬಯಿಗೆ ಕಳುಹಿಸುವುದು!

ಪ್ಲೇಗಿನ ಕರಾಳ ಇತಿಹಾಸವನ್ನು ಮುಗಿಸುವ ಮೊದಲು ಇತ್ತೀಚಿಗೆ 1993ರ ಸೆಪ್ಟೆಂಬರ್-ಅಕ್ಟೋಬರ್ ಸಮಯದಲ್ಲಿ ಗುಜರಾತಿನ ಸೂರತ್ ನಗರದಲ್ಲುಂಟಾದ ಉಪಟಳದ ಬಗೆಗೆ ಮಾಹಿತಿ ಉಚಿತವೆನಿಸುತ್ತದೆ.

ಅಮೆರಿಕಾವೂ ಸೇರಿದಂತೆ ವಿಶ್ವದ ಹಲವು ಕಡೆ ಈಗಲೂ ಪ್ಲೇಗ್ ರೋಗವು ಸ್ಥಳಿಕವಾಗಿ ಆಗಾಗ್ಗೆ ತಲೆ ಎತ್ತುತ್ತಲೇ ಇದೆ. ಆಫ್ರಿಕಾದ ಜೈಯಿರೆ ದೇಶದಲ್ಲಿ 1993ರ ಆದಿಯಲ್ಲಿ 267 ಜನರಿಗೆ ಈ ವ್ಯಾಧಿ ತಗುಲಿ 70 ಮಂದಿ ಸತ್ತಿದ್ದರು. ಅದು ನ್ಯೂಮೋನಿಕ್ ವಿಧದ ಪ್ಲೇಗಾಗಿದ್ದು ವಿಶ್ವದ ಯಾವುದೇ ಕಡೆಗೆ ಜಿಗಿಯುವ ಸಾಧ್ಯತೆ ಇರುವುದಾಗಿ ವಿಶ್ವ ಆರೋಗ್ಯ ಸಂಸ್ಥೆ ಎಚ್ಚರಿಕೆ ನೀಡಿತ್ತು. ಸೂರತ್‌ಗೆ ಅಲ್ಲಿಂದಲೇ ಬಂದಿತೋ ಇಲ್ಲವೇ ಸ್ಥಳೀಯ ಕಾರಣವಿತ್ತೋ ಹೇಳಲಾಗುವುದಿಲ್ಲ. ಹತ್ತಿರದಲ್ಲಿ ಪ್ರವಾಹ ನಿಯಂತ್ರಣಕ್ಕಾಗಿದ್ದ ಉಕಾಯಿ ಆಣೆಕಟ್ಟಿನಿಂದ ಹಟಾತ್ತಾಗಿ ಬಿಟ್ಟ ನೀರು ಸೂರತ್‌ನ ಜನಭರಿತ ವಯಲಗಳಿಗೆ ನುಗ್ಗಿ ಅನೈರ್ಮಲ್ಯ ಪರಿಸ್ಥಿತಿ ಉಂಟುಮಾಡಿದ್ದು ಒಂದು ಕಾರಣವೆನ್ನಲಾಗಿದೆ.

ಅದಾದ ಒಂದು ವಾರದೊಳಗೆ ಸೂರತ್‌ನಲ್ಲಿ ನ್ಯೂಮೋನಿಕ್ ತರಹೆ ಪ್ಲೇಗು ಕಾಣಿಸಿಕೊಂಡಿತು. ಸುಮಾರು 400 ಜನರಿಗೆ ತಗುಲಿ 46 ಜನ ಸಾವಿಗೀಡಾದರು. ಜನ ಭಯ ಭೀತಿಯಿಂದ ನಡುಗಿದರು. ಅಲ್ಲಿಯ 20 ಲಕ್ಷ ಜನರ ಮೂರನೇ ಒಂದು ಭಾಗದವರು ದೂರದ ತಮ್ಮ ಊರುಗಳಗೆ ಧಾವಿಸಿದರು. ಅವರು ಹೋದೆಡೆಗಳಲ್ಲಿ ಪ್ಲೇಗ್ ಕಾಣಿಸಿಕೊಂಡವರು ಇತರರಿಗೆ ಅದನ್ನು ಹರಡುವ ಸಾಧ್ಯತೆಗಳು ಹೆಚ್ಚಾಗತೊಗಿದವು. ಹಾಗಾಗಿ ಇಡೀ ಭಾರತ ಹಾಗೂ ಅಕ್ಕಪಕ್ಕದ ಇತರ ದೇಶಗಳಿಗೂ ಅದು ಹರಡುವ ಭಯವಿತ್ತು.

ಈ ಸಾರಿ ಲಭ್ಯವಿದ್ದ ವ್ಯಾಕ್ಸೀನುಗಳು, ಜೀವಿರೋಧಕಗಳು-ಟೆಟ್ರಾಸೈಕ್ಲಿನ್-ಹಾಗೂ ವಲಸೆ ಹೋಗುವವರನ್ನು ಕಟ್ಟುನಿಟ್ಟಾಗಿ ನಿಯಂತ್ರಿಸುವ ಕ್ರಮಗಳಿಂದ ಅತ್ಯಲ್ಪ

ಸಮಯದಲ್ಲೇ ಪ್ಲೇಗ್ ಹರಡುವುದನ್ನು ತಡೆಯುವುದು ಸಾಧ್ಯವಾಯಿತು. ಆದರೂ ನಮ್ಮ ಪರಿಸರದಲ್ಲಿ ಅನೈರ್ಮಲ್ಯತೆ ಮುಂದುವರಿಯುತ್ತಿದ್ದು ಇಲಿಗಳ ಸಂಖ್ಯೆಯೂ ಹೆಚ್ಚಾಗುತ್ತಿದ್ದು ಮತ್ತೆ ಯಾವಾಗ ಹಾಗೂ ಎಲ್ಲಿ ಈ ಕರಾಳ ಮೃತ್ಯುವಿನ ದಾಳಿ ಆರಂಭವಾಗುತ್ತದೋ ಎಂಬುದನ್ನು ಹೇಳಲಾಗದು.

## ಪ್ಲೇಗಿನ ರೂಪರೇಷೆಗಳು

ಯಾವುದೇ ಒಂದು ಪ್ರದೇಶದಲ್ಲಿ ಹಠಾತ್ತನೆ ಇಲಿಗಳು ಸತ್ತು ಬೀಳುವುದು ಕಂಡು ಬಂದರೆ ಅಲ್ಲಿಗೆ ಪ್ಲೇಗ್ ಮಹಾ ಮಾರಿಯ ಆಗಮನವಾದಂತೆ ಭಾವಿಸಬಹುದು. ಪ್ಯಾಸ್ಟುರೆಲ್ಲಾ ಪೆಸ್ಟಿಸ್ ಬ್ಯಾಸಿಲೈಗಳ ಸೋಂಕಿನಿಂದ ಪ್ಲೇಗ್ ಸಂಭವಿಸುತ್ತದೆಂದು ಮೊದಲೇ ಪ್ರಸ್ತಾಪಿಸಲಾಗಿದೆಯಷ್ಟೆ. ರೋಗ ಪೀಡಿತ ಇಲಿಗಳ ಮೈಮೇಲೆ ಸಾಮ್ಯಾವಾಗಿ ವಾಸಿಸುತ್ತಿರುವ ಚಿಗಟಗಳು ಅವುಗಳ ರಕ್ತ ಹೀರುವಾಗ ಪ್ಲೇಗ್ ಬ್ಯಾಸಿಲೈಗಳು ಅವುಗಳನ್ನು ಸೇರುತ್ತವೆ. ಚಿಗಟಗಳು ಮನುಷ್ಯರನ್ನು ಕಚ್ಚಿದಾಗ ಪ್ಲೇಗಿನ ಸೋಂಕು ಅವರಿಗೆ ತಗಲುತ್ತದೆ. ಚಿಗಟ ಕಚ್ಚಿದ ಜಾಗದಲ್ಲಿ ಸೇರಿಕೊಂಡು ಬ್ಯಾಸಿಲೈಗಳು ಅಸಂಖ್ಯಾತ ಸಂಖ್ಯೆಯಲ್ಲಿ ವೃದ್ಧಿಯಾಗುತ್ತವೆ. ಮುಂದೆ ಅವು ಕಚ್ಚಿದ ಭಾಗಕ್ಕೆ ಹತ್ತಿರವಿರುವ ದುಗ್ಧಗ್ರಂಥಿಗಳಲ್ಲಿ ತಡೆ ಹಿಡಿಯಲ್ಪಟ್ಟು ಅಲ್ಲೂ ಮತ್ತೆ ವೃದ್ಧಿಯಾಗುತ್ತವೆ. ಈ ಕಾರಣದಿಂದಲೇ ಕಾಲುಗಳ ಮೇಲ್ಭಾಗದಲ್ಲಿರುವ ಗೆಜ್ಜೆ ಸಂದು ಮತ್ತು ಕೈಗಳಿಗೆ ಸಂಬಂಧಿಸಿದ ಕಂಕುಳಲ್ಲಿರುವ ದುಗ್ಧಗ್ರಂಥಿಗಳೇ ಸಾಮಾನ್ಯವಾಗಿ ಊದಿ ದಪ್ಪಗಾಗುತ್ತವೆ. ಅವುಗಳೊಳಗಡೆ ಕೀವುಗಟ್ಟಿ, ರಕ್ತಸ್ರಾವವೂ ಉಂಟಾಗುತ್ತದೆ. ಅವು ಕೆಂಪಡರಿ, ಊದಿ ಕೊಂಡು ತುಂಬಾ ನೋವಾಗುತ್ತಿರುತ್ತದೆ. ಇದನ್ನೇ ''ಬ್ಯೂಬೋ'' (Bubo) ಎಂದು ಕರೆಯುತ್ತಾರೆ. ಹಾಗೂ ಪ್ಲೇಗ್ ಆ ರೀತಿಯಲ್ಲಿ ಪ್ರಕಟವಾದಾಗ ಅದನ್ನುಬ್ಯುಬೋನಿಕ್ ಪ್ಲೇಗ್ ಎನ್ನಲಾಗುತ್ತದೆ.

ರಕ್ತಸಂಚಾರವನ್ನು ಸೇರಿದ ಬ್ಯಾಸಿಲೈಗಳು ಅಲ್ಲೇ ಹೆಚ್ಚಾಗಿ ವೃದ್ಧಿಯಾಗಿ ವಿಪರೀತ ಜ್ವರವನ್ನುಂಟುಮಾಡಬಹುದು. ಅದನ್ನು ಸೆಪ್ಟಿಸೀಮಿಕ್ ಪ್ಲೇಗ್ ಎನ್ನಲಾಗುತ್ತದೆ; ಇನ್ನೊಂದು ವಿಧದಲ್ಲಿ ಶ್ವಾಸಕೋಶಗಳನ್ನು ಸೇರಿದ ಬ್ಯಾಸಿಲೈಗಳು ಕೆಮ್ಮು, ಕಫಗಳನ್ನುಂಟುಮಾಡಿ ಅಂತಿಮವಾಗಿ ನ್ಯೂಮೋನಿಯಾ (ಪುಪ್ಪಸದುರಿತ) ವುಂಟು ಮಾಡುವುದರಿಂದ ಆ ಬಗೆಯದನ್ನು ನ್ಯೂಮೋನಿಕ್ ಪ್ಲೇಗ್ ಎನ್ನಲಾಗುತ್ತದೆ; ಇದು ಅತೀ ಭೀಕರ ಸ್ವರೂಪದ್ದಾಗಿರುತ್ತದೆ.

ಚಿಗಟ ಕಚ್ಚಿದ ಒಂದು ವಾರದೊಳಗೇ ವ್ಯಕ್ತಿಗೆ ವಿಪರೀತ ಜ್ವರದ ಲಕ್ಷಣಗಳು ಪ್ರಕಟವಾಗಲಾರಂಭಿಸುತ್ತವೆ; ವಿಪರೀತ ಆಲಸಿಕೆ, ತಲೆನೋವು, ಬೆನ್ನುನೋವುಗಳಿಂದ ಬಳಲುತ್ತಾನೆ; ಕಣ್ಣುಗಳು ಕೆಂಪಡರುತ್ತವೆ; ಕೆಲವರಿಗೆ ವಾಂತಿಯೂ ಆಗಬಹುದು. ಜ್ವರ ಕಾಣಿಸಿಕೊಂಡ2-3 ದಿನಗಳಲ್ಲಿ ಬ್ಯೂಬೋಗಳು ಪ್ರಕಟವಾಗುತ್ತವೆ.

ಈ ಮೊದಲು ಪ್ಲೇಗಿನ ಇತಿಹಾಸವನ್ನು ಹೇಳಲಾಗಿದೆಯಷ್ಟೆ. ಆ ಸಮಯದಲ್ಲಿ ಈ ಕಾಯಿಲೆ ದೈವಿ ವಿಕೋಪದಿಂದುಂಟಾಗುತ್ತದೆಂಬ ಭಾವನೆಯಿತ್ತು. ನಮ್ಮ ದೇಶದಲ್ಲಂತೂ

ಮಾರಿ, ಮಸಣಿಗಳಂಥ ಕ್ಷುದ್ರ ದೇವತೆಗಳ ಅವಕೃಪೆಯೇ ಎಲ್ಲಾ ಸೋಂಕುಗಳಿಗೂ ಕಾರಣವೆಂಬ ದೃಢನಂಬಿಕೆ ಇತ್ತು; ಈಗಲೂ ಆ ನಂಬಿಕೆ ಮಾಯವಾಗಿಲ್ಲ. ಪ್ಲೇಗ್ ಪಾಶ್ಚಾತ್ಯ ಮೂಲದಿಂದ ಬಂದಿರುವುದಾದರೂ, ನಮ್ಮವರು ಅದನ್ನು ನಮ್ಮದನ್ನಾಗಿಸಿಕೊಂಡು, ''ಪ್ಲೇಗಿನ ಅಮ್ಮ'' ಎಂಬ ದೇವತೆಯ ವಿಕೋಪದಿಂದ ಉಂಟಾಗುತ್ತದೆಂಬ ಹಣೆಪಟ್ಟಿ ಹಚ್ಚಿದ್ದಾರೆ. ಪ್ಲೇಗಿನಮ್ಮನ ದೇವಸ್ಥಾನಗಳನ್ನು ಕಟ್ಟಿ ಅಲ್ಲಿಪೂಜೆ, ಪುನಸ್ಕಾರ, ಜಾತ್ರೆಗಳನ್ನು ಈಗಲೂ ನಡೆಸುತ್ತಿರುವುದನ್ನು ನೋಡಬಹುದಾಗಿದೆ.

ಯೆರ್ಸಿನಾ ಮತ್ತು ಕಿಟಾಸಾಟೋ ಅವರು ಪ್ಲೇಗ್ ಬ್ಯಾಸಿಲೈಗಳನ್ನು ಕಂಡು ಹಿಡಿಯುವವರೆಗೂ ಪ್ಲೇಗಿನ ಚಿಕಿತ್ಸಾ ವಿಧಾನ ಹಲವು ಊಹಾಪೋಹಗಳಿಂದ ಕೂಡಿದ್ದವು. ಇಲಿಗಳು ಸಾಯುತ್ತಿದ್ದ ಮನೆಮಠಗಳನ್ನು ತ್ಯಜಿಸಿ ಊರಿನ ಹೊರವಲಯದಲ್ಲಿ ಕೆಲ ಕಾಲ ಬೀಡುಬಿಡುವುದರಿಂದ ಸ್ವಲ್ಪಮಟ್ಟಿಗೆ ಪ್ಲೇಗ್ ಹರಡುವುದನ್ನು ಕಡಿಮೆ ಮಾಡಬಹುದಾಗಿತ್ತು. ಮುಂದೆ ಜೀವಿರೋಧಕಗಳ ಯುಗಾರಂಭವಾದ ನಂತರ ಪ್ಲೇಗಿನದೇ ಮರಣಗಂಟೆ ಬಾರಿಸಿದಂತಾಯಿತು. ಭಾರತ ಸಂಜಾತ ಡಾ|| ಯಲ್ಲಾಪ್ರಗಡ ಸುಬ್ಬರಾಯರು ಅಮೆರಿಕೆಯಲ್ಲಿ ಆವಿಷ್ಕರಿಸಿದ ಟೆಟ್ರಾಸೈಕ್ಲಿನ್‌ನ (Tetracycline) ಉದಯವಾದ ಮೇಲಂತು ಅದೊಂದು ರಾಮಬಾಣದಂತೆ ಪ್ಲೇಗ್ ಬ್ಯಾಸಿಲೈಗಳ ಮೇಲೆ ಎರಗಿ ಅದರ ಹುಟ್ಟಡಗಿಸಿತೆಂದೇ ಹೇಳಬಹುದು. ಇತ್ತೀಚಿನ ವರ್ಷಗಳಲ್ಲಿ (1993) ಸೂರತ್ ನಗರದಲ್ಲಿ ಪ್ಲೇಗ್ ವ್ಯಾಧಿಯ ಅಂಕುರವಾಗಿ ಅದು ಇಡೀ ದೇಶವೆಲ್ಲಾ ಆವರಿಸಬಹುದೆಂಬ ಭಯ ಭೀತಿಯುಂಟಾದಾಗ ಟೆಟ್ರಾಸೈಕ್ಲಿನ್ ಜೀವಿರೋಧಕದ ವ್ಯಾಪಕ ಬಳಕೆ ಅದನ್ನು ಹತೋಟಿಗೆ ತಂದುದನ್ನು ಇಲ್ಲಿ ಸ್ಮರಿಸಬಹುದು.

೧೧

# ಪ್ಲೇಗ್ ವ್ಯಾಕ್ಸೀನ್

## ಮುಂಬಯಿ ದರ್ಶನ

ಹಗಲು-ರಾತ್ರಿಗಳ ಪರಿವೆ ಇಲ್ಲದೆ ಕಾಲರಾ ವ್ಯಾಕ್ಸಿನೇಷನ್ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದ ವ್ಲಾದಿಮಿರ್ ಹಾಫ್‌ಕಿನ್ನರು ಮುಂಬಯಿಗೆ ತೆರಳಿ ಅಲ್ಲಿ ಕಾಳ್ಗಿಚ್ಚಿನಂತೆ ಹರಡುತ್ತಿದ್ದ ಪ್ಲೇಗ್ ರೋಗಕ್ಕೆ ನಿವಾರಣೋಪಾಯಗಳನ್ನು ಕಂಡು ಹಿಡಿಯುವ ಪ್ರಯತ್ನ ಮಾಡಬೇಕೆಂಬ ಭಾರತ ಸರ್ಕಾರದ ಆದೇಶ ತಲುಪಿತ್ತು. ಆ ಬಗೆಗೆ ಅವರು ಎರಡು ಯೋಚನೆ ಮಾಡಲಿಲ್ಲ. ಒಡನೆಯೇ ಮುಂಬಯಿಗೆ ಹೋಗುವ ನಿರ್ಧಾರವಾಯಿತು.

ಭಾರತದಲ್ಲೇ ಅತಿ ದೊಡ್ಡ ನಗರ ಕಲ್ಕತ್ತಾ ದೇಶದ ಪೂರ್ವ ತುದಿಯಲ್ಲಿದ್ದರೆ, ಭಾರತದ ಹೆಬ್ಬಾಗಿಲೆನಿಸಿದ ಹಾಗೂ ಎರಡನೆ ದೊಡ್ಡ ಪಟ್ಟಣವೆನಿಸಿದ ಮುಂಬಯಿ ಪಶ್ಚಿಮ ತೀರದಲ್ಲಿದೆ. ನಡುವೆ ಸಾವಿರಾರು ಮೈಲುಗಳ ಅಂತರದಲ್ಲಿ ಗುಡ್ಡ ಬೆಟ್ಟಗಳು, ವಿಶಾಲ ಬಯಲು ಪ್ರದೇಶಗಳು ಹಾಗೂ ಕಡಿದಾದ ಪಶ್ಚಿಮ ಘಟ್ಟಗಳ ಮೂಲಕ ಪ್ರಯಾಣ ಸಾಗಬೇಕಿತ್ತು. ಒಂದೆರಡು ದಿನಗಳಲ್ಲೇ ತಮ್ಮ ಸಾಮಾನು ಸರಂಜಾಮುಗಳನ್ನು ಗಂಟು ಕಟ್ಟಿಕೊಂಡು ಕಲ್ಕತ್ತಾದಿಂದ ಹೊರಡುವ ಎಕ್ಸ್‌ಪ್ರೆಸ್ ರೈಲಿನಲ್ಲಿ ಹಾಫ್‌ಕಿನ್ ಪ್ರಯಾಣ ಹೊರಟರು. ಇಡೀ ಉಪಖಂಡವನ್ನು ಸೀಳಿಕೊಂಡು ಹೋಗುತ್ತಿದ್ದ ರೈಲು ಮುಂದಿನ 24 ಗಂಟೆಗಳಲ್ಲಿ ಮುಂಬಯಿಯನ್ನು ತಲುಪುವ ಅಂದಾಜಿತ್ತು. ಬಂಗಾಳದ ಜೌಗು ಪ್ರದೇಶವನ್ನು ಹಿಂದೆ ಬಿಟ್ಟು ದೂಳುಮಯ ಹಾಗೂ ಶುಷ್ಕ ವಾತಾವರಣ ದಕ್ಕನ್ ಪ್ರಸ್ಥಭೂಮಿಯತ್ತ ರೈಲು ಒಂದೇ ಸಮನೆ ಸಾಗುತ್ತಿತ್ತು.

ರೈಲು ಗಾಡಿಯ ಬೋಗಿಗಳೆಲ್ಲಾ ಜನರಿಂದ ತುಂಬಿ ತುಳುಕಾಡುತ್ತಿದ್ದವು. ಬೇಸಗೆಯ ಉಸಿರು ಕಟ್ಟಿಸುವ ಬಿಸಿಲಿನ ಝಳಕ ಎಲ್ಲರ ಮೇಲೂ ಪ್ರಭಾವ ಬೀರಿದಂತಿತ್ತು. ಹಾಫ್‌ಕಿನ್ ಸಾಮಾನ್ಯವಾಗಿ ಬಿಳಿಯರಿಗೆ ಮೀಸಲಾಗಿದ್ದ ಬೋಗಿಯಲ್ಲಿ ಸ್ಥಳ ಪಡೆದಿದ್ದರು. ಆ ಬೋಗಿಯೂ ಸಹಾ ಸೇನಾಪಡೆಯ ಯುವ ಯೋಧರಿಂದ ತುಂಬಿ ಹೋಗಿತ್ತು. ಅವರೆಲ್ಲಾ ಕಾಡು ಹರಟೆ ಹೊಡೆಯುತ್ತಲೋ ಇಲ್ಲವೇ ಇಸ್ಪೀಟಾಟದಲ್ಲಿ ತೊಡಗಿಕೊಂಡು ಉಲ್ಲಾಸ ಭರಿತರಾಗಿ ಕಾಲಕಳೆಯುತ್ತಿದ್ದರು. ಪ್ರಚಲಿತವಿದ್ದ ಪ್ಲೇಗಿನ ಹಾವಳಿ, ಬಿಸಿಹವೆಯ ವೈಪರೀತ್ಯ ಮುಂತಾದ ಭಾರತದ ಅವಸ್ಥೆಗಳ ಬಗೆಗೆ ಬಾಯಿಗೆ ಬಂದಂತೆ ಬೈಗಳಗಳು ಕೆಲವರಿಂದ ಬಂದರೆ, ಮತ್ತೆ ಕೆಲವರು ಅವರ ನೆಚ್ಚಿನ ಕ್ರಿಕೆಟ್, ಗೋಲ್ಫ್ ಅಥವಾ ಅಧಿಕಾರಿ

ಶ್ರೇಣಿಯಲ್ಲಿನ ಬಡ್ತಿ, ಸಂಬಳ ಏರಿಕೆ ಮುಂತಾದವುಗಳೂ ಸಹ ಅವರ ಚರ್ಚೆಗೆ ಗ್ರಾಸವಾಗಿರುತ್ತಿದ್ದವು.

ಅದೇ ಬೋಗಿಯಲ್ಲಿ ಇನ್ನೊಂದು ಕಡೆ ಮೂವತ್ತೈದು ವಯಸ್ಸಿನ ಸ್ಪುರದ್ರೂಪಿ ಯುವಕ ತಲೆಬಗ್ಗಿಸಿಕೊಂಡು ಯಾವುದೋ ಪುಸ್ತಕ ಓದುವಲ್ಲಿ ಮಗ್ನರಾಗಿರುತ್ತಿದ್ದ ಹಾಫ್‌ಕಿನ್ನರನ್ನು ನೋಡಬಹುದಾಗಿತ್ತು; ಬೋಗಿಯಲ್ಲಿ ಅಷ್ಟೆಲ್ಲಾ ಆಟಗಳು, ಚರ್ಚೆಗಳು ನಡೆಯುತ್ತಿದ್ದರೂ ಶಾಂತಸ್ವಭಾವದ ಹಾಫ್‌ಕಿನ್ನರಿಗೆ ಅದಾವುದರಲ್ಲೂ ಆಸಕ್ತಿ ಇದ್ದಂತಿರಲಿಲ್ಲ; ಯಾರೊಬ್ಬರೊಡನೆಯೂ ಸಂಭಾಷಣೆಗಿಳಿಯುವ ಅಭಿಲಾಷೆಯಂತೂ ಇರಲೇ ಇಲ್ಲ. ಸಹ ಪ್ರಯಾಣಿಕರೂ ಕೂಡ ಹೆಚ್ಚಿನ ಗಮನಕೊಡದೆ ಯಾರೋ ಮತ ಪ್ರಚಾರಕ ಪಾದ್ರಿಯಿರಬಹುದೆಂದು ಕೊಂಡಿದ್ದರೆನಿಸುತ್ತದೆ.

ಮುಂಬಯಿಯಲ್ಲಿ ಪ್ಲೇಗಿನ ಹಾವಳಿ ಅತ್ಯಂತ ಭೀಕರವಾಗಿದ್ದರೂ, ರೈಲಿನಲ್ಲಿದ್ದ ಬಹುಪಾಲು ಜನರಿಗೆ ಅದರ ಅಗಾಧತೆಯ ಅರಿವಿರಲಿಲ್ಲವೆನಿಸುತ್ತದೆ. ಸರ್ಕಾರದವರು ವೃತ್ತ ಪತ್ರಿಕೆಗಳಿಗೂ ಹೆಚ್ಚಿನ ಪ್ರಚಾರಕ್ಕೆ ಅವಕಾಶ ಕೊಡದಿದ್ದುದರಿಂದ ದೂರದ ಕಲ್ಕತ್ತಾದಿಂದ ಬರುವವರಿಗೆ ಆ ಬಗೆಗೆ ಗೊತ್ತಿರದಿದ್ದುದು ಆಶ್ಚರ್ಯವೇನಲ್ಲ. ಅಲ್ಲಿದ್ದ ವರಲ್ಲೆಲ್ಲಾ ಭಾರತ ಸರ್ಕಾರದ ಮಿಣಜೀವಿಶಾಸ್ತ್ರಪಟು ವ್ಲಾದಿಮಿರ್ ಹಾಫ್‌ಕಿನ್ ಒಬ್ಬರು ಮಾತ್ರ ಪ್ಲೇಗ್‌ನ ಹಾವಳಿಯ ಬಗೆಗೆ ಯೋಚನಾಕ್ರಾಂತರಾಗಿದ್ದವರು. ಕಲ್ಕತ್ತೆಯಿಂದ ಹೊರಡುವ ಮುಂಚೆ ಸರ್ಕಾರದವರು ಅವರಿಗೆ ಪ್ಲೇಗ್ ಬಗೆಗೆ ಸಾಕಷ್ಟು ಮಾಹಿತಿ ಒದಗಿಸಿದ್ದರು; ಹಾಗೂ ಅವರೇ ಸ್ವತಃ ಅದರ ನಿಯಂತ್ರಣಕ್ಕೆ ಉಪಾಯ ಕಂಡು ಹಿಡಿಯಲು ತೆರಳುತ್ತಿದ್ದವರು. ರೈಲು ಮುಂಬಯಿಗೆ ನೂರಾರು ಮೈಲಿಗಳಿರುವಷ್ಟರಲ್ಲೇ ಅವರಿಗೆ ಪ್ಲೇಗಿನ ಹಾವಳಿಯ ಸೂಚನೆಗಳು ಕಂಡುಬರುತ್ತಿದ್ದಂತಿತ್ತು. ಮುಂಬಯಿಯಿಂದ ಹೊರಟು ಪೂರ್ವಾಭಿಮುಖವಾಗಿ ಸಾಗುತ್ತಿದ್ದ ರೈಲುಗಾಡಿಗಳಲ್ಲಿ ಜನಸಂದಣಿಯೇ ಅದರ ದ್ಯೋತಕವಾದಂತಿತ್ತು. ಮುಂಬಯಿ ರೈಲ್ವೆ ನಿಲ್ದಾಣದಲ್ಲೆಲ್ಲಾ ಅವಸರದಿಂದ ಊರುಬಿಟ್ಟು ಹೋಗುವವರು ಗಂಟು ಮೂಟೆ ಕಟ್ಟಿಕೊಂಡು ಹಿಂಡುಹಿಂಡಾಗಿ ಕಾಯ್ದುಕುಳಿತಿರುತ್ತಿದ್ದರು. ಮುಂಬಯಿ ಬೀದಿಗಳಲ್ಲಿ ಚಲಿಸುತ್ತಿದ್ದಾಗ ಅವೆಲ್ಲಾ ಬಹುತೇಕ ಖಾಲಿಯಾಗಿದ್ದವು. ಅಂಗಡಿ ಮುಂಗಟ್ಟು ಸಹಾ ಮುಚ್ಚಿರುತ್ತಿದ್ದವು. ಈ ಬದಲಾವಣೆಗಳೆಲ್ಲಾ ಪ್ಲೇಗಿನ ಹಾವಳಿಯಿಂದಾದ ವೆನ್ನುವುದನ್ನು ಊಹಿಸಲು ಹಾಫ್‌ಕಿನ್ನರಿಗೆ ಬಹಳ ಕಾಲ ಬೇಕಾಗಲಿಲ್ಲ. ಅಕ್ಟೋಬರ್ 7 (1896)ರಂದು ಹಾಫ್‌ಕಿನ್ನರು ಮುಂಬಯಿಗೆ ಬಂದಿಳಿದರು.

## ಪುಟ್ಟಪ್ರಯೋಗಾಲಯ

ಮುಂಬಯಿಯ ಗ್ರ್ಯಾಂಟ್ ಮೆಡಿಕಲ್ ಕಾಲೇಜು ಹಾಫ್‌ಕಿನ್ನರ ಕಾರ್ಯಕ್ಷೇತ್ರ ವೆಂದು ಮೊದಲೇ ನಿಯೋಜಿಸಲಾಗಿತ್ತು. ಅಲ್ಲಿಗೆ ತಲುಪಿದ ಕೇವಲ 24 ಗಂಟೆಗಳಲ್ಲಿ ಅವರೊಂದು ಪ್ರಯೋಗಾಲಯವನ್ನು ಸಜ್ಜುಗೊಳಿಸಿದರು. ಒಂದು ಕೊಠಡಿ ಮತ್ತು ಅದಕ್ಕೆ

ಹೊಂದಿಕೊಂಡ ಪಡಸಾಲೆಯನ್ನು ಅವರಿಗೆ ಬಿಟ್ಟುಕೊಟ್ಟಿದ್ದರು; ಒಬ್ಬ ಗುಮಾಸ್ತ ಮತ್ತು ಮೂರು ಜನ ತಾಂತ್ರಿಕ ಸಹಾಯಕರನ್ನು ನೇಮಿಸಿದ್ದರು; ತಮಗೆ ದೊರೆಯಬೇಕಾದ ಅನುಕೂಲತೆ, ಆಹಾರವಸ್ತುಗಳಿಗಾಗಲೀ ಇತರ ಸೌಲಭ್ಯಗಳಿಗಾಗಲಿ ಅವರೆಂದೂ ತಲೆಕೆಡಿಸಿಕೊಂಡವರಲ್ಲ. ಮುಂದೆ ನಲವತ್ತು ವರ್ಷಗಳ ನಂತರ ಪೆನಿಸಿಲಿನ್ ಸಂಶೋಧಕ ಅಲೆಗ್ಸಾಂಡರ್ ಫ್ಲೆಮಿಂಗ್ ಒಮ್ಮೆ ಹೇಳಿದಂತೆ ಅಮೃತಶಿಲೆಗಳಿಂದಾವೃತವಾದ ಹಾಲ್ (Hall )ಗಳು ಯಾವುದೇ ಬುದ್ಧಿಜೀವಿಯನ್ನು ಚುರುಕುಗೊಳಿಸುವುದಿಲ್ಲ. ಅವನಲ್ಲಿ ಒಳ್ಳೆಯ ಮೇದಾಶಕ್ತಿ ಮತ್ತು ಚೈತನ್ಯಗಳಿದ್ದರೆ ಅವನು ಯಾವುದೇ ಕಷ್ಟದ ಕಾರ್ಯವನ್ನು ಯಶಸ್ವಿಯಾಗಿ ಮಾಡಬಲ್ಲನು, ಎಂಬುದನ್ನು ಹಾಫ್‌ಕಿನ್ನರು ಬಹಳ ಹಿಂದೆಯೇ ತಮ್ಮ ಬಾಲ್ಯದಿಂದಲೂ ಕೃತಿಗಿಳಿಸಿದವರು. ವಸತಿಗಾಗಿ ಸರ್ಕಾರ ಏರ್ಪಡಿಸಿದ ಹೋಟೆಲು, ಅತಿಥಿ ಗೃಹವನ್ನು ಅವರು ಇಷ್ಟಪಡಲಿಲ್ಲ; ಮೆಡಿಕಲ್ ಕಾಲೇಜಿನಲ್ಲೇ ಒಂದು ಕೊಠಡಿಯಲ್ಲೇ ವಾಸಿಸತೊಡಗಿದರು. ಪ್ರಯೋಗಾಲಯದ ಕೊಠಡಿಯಲ್ಲಿ ಮೇಜುಗಳನ್ನಿರಿಸಿ ಪ್ರನಾಳ ಮತ್ತು ಫ್ಲಾಸ್ಕ್‌ಗಳನ್ನು ಜೋಡಿಸಿಕೊಂಡರು. ಪಡಸಾಲೆ ಮುಂದಿನ ಕೆಲವೇ ದಿನಗಳಲ್ಲಿ ಇಲಿ ಮತ್ತು ಮೊಲಗಳ ಬೋನುಗಳಿಂದ ತುಂಬಿ ಹೋಯಿತು. ಮಾರನೇ ದಿನದಿಂದಲೇ ಪ್ರಯೋಗಾಲಯ ಕಾರ್ಯಾರಂಭವಾಯಿತು.

ಪ್ಯಾರಿಸ್ಸಿನ ಪ್ಯಾಶ್ಚರ ಇನ್ಸ್ಟಿಟ್ಯೂಟ್‌ನಲ್ಲಿ ಯೆರ್ಸೀನಾ ಮತ್ತು ಸಂಗಡಿಗರು ಪ್ಲೇಗ್ ಚಿಕಿತ್ಸೆಗಾಗಿ ಒಂದು ರಸಿಕೆಯನ್ನು ತಯಾರಿಸುವಲ್ಲಿ ತೊಡಗಿದ್ದಾರೆಂಬುದು ಹಾಫ್‌ಕಿನ್ನರ ಗಮನಕ್ಕೂ ಬಂದಿತ್ತು. ಆದರೂ ಅವರು ಕಲ್ಕತ್ತಾದಿಂದ ಹೊರಡುವ ಮೊದಲೇ ತಮ್ಮದೇ ಯೋಜನೆಯನ್ನು ತಯಾರುಮಾಡಿಕೊಂಡಿದ್ದರು. ಕಾಲರಾ ವ್ಯಾಕ್ಸೀನು ತಯಾರಿಸುವಲ್ಲಿ ಅವರು ಗಳಿಸಿಕೊಂಡಿದ್ದ ಅನುಭವ ಮತ್ತು ಹಿಂದೆ ಲೂಯಿಪ್ಯಾಶ್ಚರ್ ಇಂತಹ ಸಂದರ್ಭಗಳಿಗಾಗಿ ನಿರೂಪಿಸಿದ ತತ್ವಗಳ ಆಧಾರದ ಮೇಲೆ ಅವರ ಯೋಜನೆಯೂ ರೂಪುಗೊಂಡಿತ್ತು.

ಯಾವುದೇ ಮಿಣಜೀವಿಗಳ ಸತ್ವವನ್ನು ಕುಂದಿಸಿ ಅಥವಾ ಸಾಯಿಸಿ ಆರೋಗ್ಯಕರ ಮನುಷ್ಯನ ದೇಹವನ್ನು ಪ್ರವೇಶಿಸುವಂತೆ ಮಾಡಿದರೆ, ಅವನಲ್ಲಿ ವ್ಯಾಧಿಯ ವಿರುದ್ಧ ಸೆಣಸಬಲ್ಲ ಆಂಟಬಾಡಿಗಳ ಉತ್ಪಾದನೆಗೆ ಪ್ರೇರಣೆ ನೀಡುತ್ತದೆಂಬ ಸಿದ್ಧಾಂತ ಅಷ್ಟರಲ್ಲಿ ಸಾಬೀತಾಗಿತ್ತು. ಅದೇ ರೀತಿಯಲ್ಲಿ ಜೀವಂತ ಅಥವಾ ಕ್ರಿಯಾಶೀಲ ಏಜೆಂಟುಗಳನ್ನು ನೀಡಿದಾಗಲೂ ರೋಗನಿರೋಧಕ ಶಕ್ತಿಯನ್ನು (ಇಮ್ಯುನಿಟಿ) ಪಡೆದುಕೊಳ್ಳುವ ಉದ್ದೇಶ ಹಾಫ್‌ಕಿನ್ನರದಾಗಿತ್ತು. ಆದರೆ ಯಾವುದೇ ಸಿದ್ಧಾಂತವೊಂದನ್ನು ರೂಪಿಸುವುದಕ್ಕೂ, ಈತನಕ ಯಾರೂ ತಯಾರು ಮಾಡದ ಪ್ಲೇಗ್ ವಿರುದ್ಧ ಕಾರ್ಯವೆಸಗುವ ವ್ಯಾಕ್ಸೀನ್ ತಯಾರು ಮಾಡುವುದಕ್ಕೂ ವ್ಯತ್ಯಾಸವಿರುತ್ತದೆ. ಆದರೆ ಪ್ಲೇಗ್ ಬ್ಯಾಸಿಲೈಗಳನ್ನು ''ಬೆಳೆಸಿ'' ಅವುಗಳನ್ನು ಅಭ್ಯಸಿಸಿದಾಗ ಅವು ತುಂಬಾ ಕೋಮಲ ಹಾಗೂ ದುರ್ಬಲ ಸ್ವಭಾವದವೆನ್ನುವುದು ಸುಲಭವಾಗಿ ತಿಳಿದುಬಂದಿತು. ಅವುಗಳನ್ನು ಪ್ರಯೋಗ ಪರೀಕ್ಷೆ ಇಲ್ಲವೆ ಅಭ್ಯಾಸಮಾಡುವ

ಸಲುವಾಗಿ ಕೆಲ ಸಮಯ ಶೇಖರಿಸಿಟ್ಟುಕೊಳ್ಳುವುದೇ ತ್ರಾಸದಾಯವಾಗಿಬಿಡುತ್ತಿತ್ತು. ಆದುದರಿಂದ ಪ್ಲೇಗ್ ಬ್ಯಾಸಿಲೈಗಳನ್ನು ಸಾಯಿಸುವ ವಿಧಾನವನ್ನು ರೂಪಿಸುವುದಕ್ಕಿಂತಲೂ, ಅವುಗಳನ್ನು ಜೀವಂತವಾಗಿಟ್ಟುಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ವೃದ್ಧಿಯಾಗುವಂತೆ ಮಾಡುವುದಕ್ಕೇ ಬಹಳ ಸಮಯ ಬೇಕಾಯಿತು. ಅವುಗಳನ್ನು ಸಾಮಾನ್ಯವಾಗಿ ಲಭ್ಯವಾಗುವ ಗೋಮಾಂಸಾರ-(Beef-Broth)ದಲ್ಲಿ ಹುಲುಸಾಗಿ ಬೆಳೆಸಬಹುದಾಗಿತ್ತು. ಮುಂದೆ ಅವುಗಳನ್ನು ಸತ್ವಗುಂದಿಸಿ, ವ್ಯಾಕ್ಸೀನು ತಯಾರಿಸುವ ಸಮಸ್ಯೆಯನ್ನು ಎದುರಿಸಬೇಕಾಯಿತು.

## ಪ್ರಯೋಗಗಳ ಸರಣಿ

ಗ್ರ್ಯಾಂಟ್ ಮೆಡಿಕಲ್ ಕಾಲೇಜಿನ ಪುಟ್ಟ ಪ್ರಯೋಗಾಲಯದಲ್ಲಿ ಪ್ಲೇಗ್ ಬ್ಯಾಸಿಲೈಗಳ ಹಲವಾರು 'ಬೆಳೆ' (Culture)ಗಳು ತಯಾರಾದವು; ಹಾಗೂ ಅವುಗಳ ಸತ್ವವನ್ನು ಕುಂದಿಸುವ ಹಲವು ಪ್ರಯೋಗಗಳ ಸರಣಿಗಳು ಯೋಜಿಸಲ್ಪಟ್ಟವು; ಫೀನಾಲ್, ಕ್ಲೋರೋಫಾರಂಗಳನ್ನು ಅವುಗಳ ಮೇಲೆ ಪ್ರಯೋಗಿಸಿ ನೋಡಿದರು; ಅವುಗಳನ್ನು ವಿವಿಧ ಮಟ್ಟದ ಶಾಖದ ವಾತಾವರಣಗಳಿಗೊಳಪಡಿಸಿಲಾಯಿತು; ಅವುಗಳ ಪರಿಸರದ ತೇವವನ್ನು ತೆಗೆದು ಬತ್ತಿಸಿ (ಡೆಸಿಕೇಷನ್) ನೋಡಲಾಯಿತು. ಆ ಸಲುವಾಗಿ ಪ್ರಯೋಗಾಲಯದ ಮೊಲಗಳ ಮಾಂಸಖಂಡಗಳಿಗೆ ಪ್ಲೇಗ್ ಬ್ಯಾಸಿಲೈಗಳನ್ನು ಚುಚ್ಚಿ ಅಲ್ಲಿಯ ಊತಕಗಳನ್ನು ಬತ್ತಿಸುವ ಪ್ರಯೋಗ ಮಾಡಲಾಯಿತು. ಅಂತಹ ಊತಕಗಳನ್ನು ಬಳಸಿಕೊಂಡು ವ್ಯಾಕ್ಸೀನ್ ತಯಾರುಮಾಡುವ ಪ್ರಯತ್ನಗಳಾದವು;ಅಂತಹ ಸಂದರ್ಭಗಳಲ್ಲಿ ಕೆಲವು ಬ್ಯಾಸಿಲೈಗಳು ಊತಕದ ಆಳವಾದ ನೆಲೆಗಳಲ್ಲಿ ಜೀವಂತವಾಗಿದ್ದು ಕೊಂಡು ಅದರಿಂದ ತಯಾರಿಸಿದ ವ್ಯಾಕ್ಸೀನ್ ನೀಡಿದ ಪ್ರಾಣಿಗಳಿಗೆ ಘಾಸಿಯಾಗುವುದು ಕಂಡು ಬಂದಿತು. ಅದರಿಂದ ಈ ತರಹೆಯ ವ್ಯಾಕ್ಸೀನನ್ನು ಮನುಷ್ಯರ ಮೇಲೆ ಪ್ರಯೋಗಿಸುವಲ್ಲಿ ಹಾಫ್‌ಕಿನ್ನರಿಗೆ ಮನಸ್ಸಾಗಲಿಲ್ಲ. ಆದುದರಿಂದ ಬತ್ತಿಸುವ ವಿಧಾನವನ್ನು ಕೈಬಿಡಬೇಕಾಯಿತು.

ಅದೇ ರೀತಿಯಲ್ಲಿ ಬಿಸಿ ಮಾಡಿದ ಬ್ಯಾಸಿಲೈಗಳನ್ನು ನೀಡಿದಾಗಲೂ ಪ್ರಯೋಗಾಲಯದ ಪ್ರಾಣಿಗಳಲ್ಲಿ ಉತ್ತಮ ಫಲಿತಾಂಶಗಳಾಗುವುದಿಲ್ಲವೆಂಬುದನ್ನು ಕಂಡುಕೊಳ್ಳಲೂ ಸಹಾ ಬಹಳ ಸಮಯ ಬೇಕಾಯಿತು. ಸುಮಾರು $65^0$c ಶಾಖದವರೆಗೆ ಬಿಸಿಮಾಡಿದ ಬ್ಯಾಸಿಲೈಗಳನ್ನು ನೀಡಿದಾಗಲೂ ಅವುಗಳಲ್ಲಿ ರೋಗ ನಿರೋಧಕ ಶಕ್ತಿಯನ್ನು ಕುಂದಿಸಲು ಸಾಧ್ಯವಾಗಲಿಲ್ಲ. ಆದರೆ ಕಾಲರಾ ವ್ಯಾಕ್ಸೀನನ್ನು ರೂಪಿಸುವಾಗ ಅದೇ ಶಾಖದ ಮಟ್ಟದಲ್ಲಿ ಕಾಲರಾ ಬ್ಯಾಸಿಲೈಗಳಲ್ಲಿ ರೋಗನಿರೋಧಕ ಸಾಮರ್ಥ್ಯ ಉಳಿದುಕೊಂಡಿರುತ್ತಿತ್ತು. ಆದುದರಿಂದ ಪ್ಲೇಗ್ ಬ್ಯಾಸಿಲೈಗಳಲ್ಲಿ ರೋಗನಿರೊಧಕ ಶಕ್ತಿಯನ್ನುಂಟು ಮಾಡುವ ವಿಫಲತೆಗೆ ಕಾರಣಗಳೇನಿರಬಹುದು? ಅಂತಹವಿಫಲತೆಗೆ ಬ್ಯಾಸಿಲೈಗಳೇ ಕಾರಣವೋ ಅಥವಾ ಅದನ್ನು ಪ್ರಯೋಗಿಸಿದ ಇಲಿಗಳೇ ಕಾರಣವೋ? ಹಾಗೂ ಅಲ್ಲದೆ

ಸಂಶೋಧಕನು ಬಳಸುತ್ತಿರಬಹುದಾದ ತಪ್ಪು ಮಾರ್ಗಗಳೇ ಕಾರಣವಾಗಿರಬಹುದೋ? ಎಂಬ ಸಂಶಯಗಳ ನಿವಾರಣೆ ಅಗತ್ಯವಾಗಿತ್ತು. ಮತ್ತು ಇಂತಹ ವ್ಯಾಕ್ಸೀನುಗಳ ಪ್ರಭಾವ ಇಲಿಗಳಿಗಿಂತ ಮನುಷ್ಯರ ಮೇಲೆ ಪ್ರಯೋಗಿಸಿದರೆ ಉತ್ತಮ ಫಲಿತಾಂಶ ಬರುವ ಸಾಧ್ಯತೆಗಳಿರಬಹುದೇ ಎಂಬ ಅನುಮಾನ ಹಾಫ್‌ಕಿನ್ನರ ಮನದಾಳದಲ್ಲುಂಟಾಯಿತು. ಹಾಪ್‌ಕಿನ್ ಈ ಬಗೆಗೆ ತುಂಬಾ ಆಶಾದಾಯಕರಾಗಿದ್ದರು. ಆದರೆ ಬಹಳಷ್ಟು ಅನುಮಾನ ಕ್ಕಾಸ್ಪದವಿರುವ ಈ ತರಹೆಯ ವ್ಯಾಕ್ಸೀನನ್ನು ಮಾನವರ ಮೇಲೆ ಮೊದಲ ಪ್ರಯೋಗ ಮಾಡುವುದಾದರೂ ಹೇಗೆ? ಅಲ್ಲದೆ ಅಂತಹ ಪ್ರಯೋಗಕ್ಕೆ ಸ್ವಪ್ರೇರಿತರಾಗಿ ಮುಂದೆ ಬರಲು ಯಾರು ತಯಾರಿರುತ್ತಾರೆ? ಜವಾಬ್ದಾರಿಯಾಗುವವರು ಯಾರು? ಎಂಬೆಲ್ಲಾ ಪ್ರಶ್ನೆಗಳು ಹಾಫ್‌ಕಿನ್ನರಿಗೆ ಎದುರಾದವು.

ಒಂದಂತೂ ನಿಜವೆನ್ನುವುದರ ಅರಿವು ಅವರಿಗಿತ್ತು. ಅದೆಂದರೆ, ಮನುಷ್ಯರನ್ನು ಬಳಸಿಕೊಂಡು ಜರುಗಿಸುವ ಪ್ರಯೋಗಗಳ ಫಲಿತಾಂಶಗಳು ದೊರೆಯುವುದಕ್ಕೆ ಬಹಳ ಕಾಲ ಹಿಡಿಯುತ್ತಿತ್ತೆಂಬುದು; ಹಾಗೂ ಅವು ಅಪಾಯಕಾರಿ ಪರಿಣಾಮಗಳಲ್ಲಿ ಪರ್ಯವಸಾನವಾಗುವುದೂ ಸಾಧ್ಯವಿತ್ತು. ಅಲ್ಲದೆ ಮನುಷ್ಯರಲ್ಲಿ ಅಂತಹ ಪ್ರಯೋಗಕ್ಕಿಳಿಯುವ ಮೊದಲು ಅವರಿಗೆ ನೀಡಬೇಕಾಗುವ ವ್ಯಾಕ್ಸೀನಿನ ಡೋಸ್ ನಿರ್ಧಾರವಾಗಬೇಕಿತ್ತು. ಆ ದಿಸೆಯಲ್ಲಿ ವ್ಯಕ್ತಿಯ ವಯಸ್ಸು, ಲಿಂಗ, ಮೈಕಟ್ಟು ಹಾಗೂ ತೂಕ ಪ್ರಮುಖ ಪಾತ್ರವಹಿಸುವುದು ಸ್ವಾಭಾವಿಕ. ಭಾರತದ ರೈತ, ಕಾರ್ಮಿಕರಲ್ಲಿ ಸಾಮಾನ್ಯವಾಗಿ 85ರಿಂದ 97 ಪೌಂಡು ತೂಕದವರಾಗಿರುತ್ತಿದ್ದರು. ಹೀಗೆ ನಾನಾ ಪರಿಸ್ಥಿತಿಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅಷ್ಟೇನೂ ಸುಲಭವಾಗಿರಲ್ಲಿ. ಹಾಫ್‌ಕಿನ್ ಮತ್ತು ಅವರ ಪ್ರಯೋಗಾಲಯದವರು ಆ ಸಮಯದಲ್ಲಿ ಎದುರಿಸುತ್ತಿದ್ದ ಸಮಸ್ಯೆಗಳ ಚಿತ್ರಣವನ್ನು ಮುಂಬಯಿಯ ಖ್ಯಾತ ಪ್ರಕಾಶಕ ಬಿ.ಮಲಬಾರಿ ಎಂಬವರು ಹೊರತಂದ ''ಇಂಡಿಯಾ 1897'' ಎಂಬ ಕೃತಿಯ ಲೇಖನದ ಚರ್ಚೆಯ ವಿಷಯವಾಗಿತ್ತು. ''ಪೌಷ್ಟಿ ಆಹಾರಗಳ ಕೊರತೆಯಿಂದ ಸಣಕಲಾಗಿರುವವ ಯಾವುದೇ ಕಾಯಿಲೆ, ಅದರಲ್ಲೂ ಪ್ಲೇಗ್‌ನಂತಹ ರೋಗವನ್ನು ಸಹಿಸಿಕೊಳ್ಳುವ ಸ್ಥಿತಿಯಲ್ಲಿರುವುದಿಲ್ಲ; ಹಾಗೂ ಒಳ್ಳೆಯ ಕಟ್ಟುಮಸ್ತಾಗಿರುವ ಸಿರಿವಂತರನ್ನು ಅದು ಸಾಮಾನ್ಯವಾಗಿ ಎಡತಾಕುವುದಿಲ್ಲ'' ಎಂದು ವಿವರಿಸಿದ್ದರು. ಇವಲ್ಲದೆ ವ್ಯಾಕ್ಸೀನು ನೀಡಿದಾಗ ಉಂಟಾಗಬಹುದಾದ ಜ್ವರ ನೋವು ಮತ್ತಿತರ ಬಗೆಯ ಅಸ್ವಸ್ಥತೆ ಬಗೆಗೂ ಅಂದಾಜು ಮಾಡಿಕೊಳ್ಳಬೇಕಾಗುತ್ತಿತ್ತು.

ಅಸಂಖ್ಯ ಜನಸ್ತೋಮದ ಮುಂಬಯಿ ಭಯಭೀತ ಜನರ ಈ ಅಗಾಧ ಸಮಸ್ಯೆಯನ್ನು ಪರಿಹರಿಸಲು 1896ರ ಚಳಿಗಾಲದ ತಿಂಗಳುಗಳಲ್ಲಿ ಅಲ್ಲಿಯ ಪುಟ್ಟ ಪ್ರಯೋಗಾಲಯದಿಂದ ಮೋಕ್ಷ ದೊರೆಯುತ್ತದೆಂಬುದು ನಂಬಲಸಾಧ್ಯವೇ ಸರಿ. ಮುಂದೆ ಹಲವು ವರ್ಷಗಳ ನಂತರ ಮುಂಬಯಿಯ ಖ್ಯಾತ ವಿಜ್ಞಾನಿ ಪ್ರೊ:ಖನೋಲ್ಕರ್ ತಮ್ಮ ನಗರದಲ್ಲೇ ಜರುಗುತ್ತಿದ್ದ ವೈಜ್ಞಾನಿಕ ಪ್ರಯೋಗಗಳ ಇತಿಹಾಸದ ಬಗೆಗೆ ಬರೆಯುತ್ತಾ

''ಪ್ಲೇಗಿನ ಸಾಂಕ್ರಾಮಿಕ ಹರಡುತ್ತಲೇ ಇತ್ತು; ಡಾ॥ ಹಾಫ್‌ಕಿನ್ನರಿಗೆ ಸಮಯದ ಅಭಾವವಿತ್ತು; ಪ್ಲೇಗಿನ ವಿರುದ್ಧ ವ್ಯಾಕ್ಸೀನಿನ ತಯಾರಿಕೆಯಲ್ಲಿ ತೊಡಗಿದ್ದಾಗಲೇ ಮುಂಬಯಿಯ ವೈದ್ಯ ಸಮೂಹದವರಿಗೆ ಪ್ಲೇಗ್ ನಿಯಂತ್ರಣದ ಬಗೆಗೆ ಪ್ರಚಾರ ಭಾಷಣಗಳನ್ನು ಮಾಡುತ್ತಲೂ ಇದ್ದರು. ಪ್ಲೇಗನ್ನು ನಿರೋಧಿಸುವಲ್ಲಿ ಈ ಅಂತರ್ಮುಖಿ ಹಾಗೂ ಮಿತಭಾಷಿಯಾದ ಸಜ್ಜನ ತನ್ನ ಮಾತುಗಳಿಂದ ವ್ಯಾಕ್ಸೀನಿನ ಪ್ರಭಾವವನ್ನು ವಿವರಿಸುವಲ್ಲಿ ಯಶಸ್ವಿಯೇನೋ ಆಗುತ್ತಿದ್ದ; ಪ್ರತಿದಿನ 12-14 ಗಂಟೆಗಳ ಕಾಲ ಕೆಲಸದಲ್ಲಿ ಮಗ್ನನಾಗಿರುತ್ತಿದ್ದ; ಅವರ ಜೊತೆಯಲ್ಲಿ ಸಹಾಯಕನಾಗಿದ್ದವನೊಬ್ಬ ಅಲ್ಲಿಯ ಕಷ್ಟನಷ್ಟಗಳನ್ನು ಸಹಿಸಲಾರದೇ ನರಗಳ ದೌರ್ಬಲ್ಯತೆಯಿಂದ ಪ್ರಯೋಗಾಲಯವನ್ನು ಬಿಟ್ಟು ಹೋದ; ಇನ್ನಿಬ್ಬರು ಕೆಲಸದ ಒತ್ತಡ ಮತ್ತು ಅಲ್ಲಿಯ ಗಾಬರಿ ಹುಟ್ಟಿಸುವ ವಾತಾವರಣವನ್ನು ಸಹಿಸಲಾರದೆ ಬಿಟ್ಟು ಹೋದರು''.

ಈ ಕೆಲವು ಸಾಲುಗಳ ಉಲ್ಲೇಖ ಹಾಫ್‌ಕಿನ್ನರು ಮುಂಬಯಿಯ ಪ್ರಯೋಗಾಲಯದಲ್ಲಿ ಎದುರಿಸುತ್ತಿದ್ದ ಒತ್ತಡಗಳ ಅಗಾಧತೆಯನ್ನು ಪ್ರತಿಬಿಂಬಿಸುವಂತಿವೆ. ಗಾಜಿನ ಫ್ಲಾಸ್ಕ್‌ಗಳು ಮತ್ತು ಪ್ರನಾಳಗಳಲ್ಲಿ ಲಕ್ಷಗಟ್ಟಲೆ ಸಂಖ್ಯೆಯಲ್ಲಿ ಬೆಳೆದು ವೃದ್ಧಿಯಾಗುತ್ತಿರುವ ಮಾರಕ ಪ್ಲೇಗ್ ಬ್ಯಾಸಿಲೈಗಳಿಗೂ ಹಾಫ್‌ಕಿನ್ ಮತ್ತು ಅವರ ಸಹೋದ್ಯೋಗಿಗಳ ನಡುವಿನ ಅಂತರ ಆ ಗಾಜಿನ ಪಾತ್ರೆಗಳ ಭಿತ್ತಿಯಷ್ಟು ತೆಳು ವಾಗಿರುತ್ತಿತ್ತು. ಅವುಗಳು ಗಾಜು ಅಕಸ್ಮಾತ್ತಾಗಿ ಒಡೆದರೆ ಇಲ್ಲವೆ ಬಿರುಕು ಬಿಟ್ಟರೂ ಸಹಾ ಪ್ಲೇಗ್ ಬ್ಯಾಸಿಲೈಗಳ ಸೋಂಕು ಅವರಿಗೆಲ್ಲಾ ತಗುಲುವ ಅಪಾಯ ಸದಾ ಇರುತ್ತಿತ್ತು. ಕಾರ್ಯನಿರತರಾಗಿದ್ದಾಗ ಅವರ ಕೈಗಳಿಗೆ ಗಾಯವಾದರೆ ಇಲ್ಲವೆ ಪ್ರಯೋಗಾಲಯ ಪ್ರಾಣಿಗಳು ಕಚ್ಚಿದರೂ ಅವರೆಲ್ಲರ ಜೀವಕ್ಕೆ ಅಪಾಯ ಉಂಟಾಗುವ ಸಾಧ್ಯತೆಗಳಿದ್ದವು. ಅವೆಲ್ಲಾ ಸಾಕಷ್ಟು ಗಂಭೀರವಾದ ಆತಂಕಗಳೇ ಸರಿ; ಆದರೆ ಹಾಫ್‌ಕಿನ್ನರನ್ನು ಸದಾ ಬಾಧಿಸುತ್ತಿದ್ದ ಆತಂಕವೊಂದಿತ್ತು; ಕಾಲರಾನಿರೋಧದ ವ್ಯಾಕ್ಸೀನಿನ ತಯಾರಿಕೆಗೆ ಬಹಳ ಸಮಯ ಹಿಡಿಯುತ್ತಿದ್ದುದೇ ಅವರ ಆತಂಕದ ಕಾರಣ! ಆದರೂ ಅವರು ಕಾರ್ಯಾರಂಭ ಮಾಡಿದ ಕೇವಲ ಮೂರೇ ತಿಂಗಳಲ್ಲಿ ಅಂತಹ ಒಂದು ವ್ಯಾಕ್ಸೀನನ್ನು ತಯಾರು ಮಾಡಲು ಸಾಧ್ಯವಾದುದು ಅವರ ಕಾರ್ಯದಕ್ಷತೆ ಮತ್ತು ಪ್ಲೇಗಿಗೆ ಬಲಿಯಾಗುತ್ತಿದ್ದ ಸಹಸ್ರಗಟ್ಟಲೆ ಜನರ ನೆರವಿಗೆ ಬರಬೇಕೆಂಬ ಉತ್ಕಾಟಾಕಾಂಕ್ಷೆ.

ಡಿಸೆಂಬರ್ 1896ರ ಹೊತ್ತಿಗೆ ವ್ಯಾಕ್ಸೀನು ತಯಾರಾಗಿ ಪ್ರಯೋಗಕ್ಕೆ ಸಜ್ಜಾಗಿತ್ತು. ಅವುಗಳು ''ಬೆಳೆ''ಯುವಂತೆ ಮಾಡಲು ಅವಶ್ಯಕವಾದ ಆಹಾರ ಮಾಧ್ಯದ ಬ್ರಾಥ್ ತಟ್ಟೆಗಳು ಪ್ರಯೋಗಾಲಯದ ಕತ್ತಲು ಕೋಣೆಯಲ್ಲಿ ಕಾಯ್ದು ಕುಳಿತಿದ್ದವು; ಅವು ಪ್ಲೇಗ್ ಬ್ಯಾಸಿಲೈ ಬೆಳೆಗೆ ಅತ್ಯವಶ್ಯಕವಾದ ಪೌಷ್ಟಿಕಾಂಶ ಭರಿತವಾಗಿದ್ದವು. ಈ ಬ್ಯಾಸಿಲೈಗಳು ಶೀಘ್ರವಾಗಿ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ವೃದ್ಧಿಯಾಗಲು ಹಾಫ್‌ಕಿನ್‌ರು ಸರಳ ಹಾಗೂ ಅತ್ಯಂತ ಪರಿಣಾಮಕಾರಿಯಾದ ಯೋಜನೆಯೊಂದನ್ನು ನಿರೂಪಿಸಿಕೊಂಡಿದ್ದರು.

ಬ್ಯಾಸಿಲೈಗಳು ಬೆಳವಣಿಗೆಯಾಗುತ್ತಿದ್ದ ಬ್ರಾಥ್‌ನ ಮೇಲ್ಪದರಕ್ಕೆ ಸ್ವಲ್ಪ ತೆಂಗಿನ ಎಣ್ಣೆಯನ್ನು ಅಥವಾ ಮಾಂಸದ ಕೊಬ್ಬನ್ನು ಚುಮುಕಿಸುವುದೇ ಆ ಉಪಾಯವಾಗಿತ್ತು. ಈ ರೀತಿಯ ಕೊಬ್ಬಿನ ಹಳದಿ ತೊಟ್ಟುಗಳಿಗೆ ಬ್ಯಾಸಿಲೈಗಳು ಅಂಟಿಕೊಂಡು ಅಲ್ಲಿಂದಲೇ ಕೆಳಮುಖವಾಗಿ ಕಾಲೋನಿಯ ರೀತಿ ಬೆಳೆಯುತ್ತಾ ಫ್ಲಾಸ್ಕ್‌ನ ತಳವನ್ನೂ ಮುಟ್ಟುತ್ತಿದ್ದವು. ಅದರಿಂದ ಬೇರೆ ವಿಧಾನಗಳಿಗಿಂತ ಈ ತರಹದಲ್ಲಿ ಕಾಲೋನಿಗಳನ್ನು ಬೆಳೆಸುವುದು ಉತ್ತಮ ವಿಧಾನವೆಂದು ಶ್ರುತಪಟ್ಟಿತು. ಫ್ಲಾಸ್ಕನ್ನು ಆಗಿಂದಾಗ್ಗೆ ಅಲ್ಲಾಡಿಸುವುದರಿಂದ ಮೊದಲಿದ್ದವು ಅಲ್ಲಿಂದ ಚದುರಿ ಫ್ಲಾಸ್ಕಿನ ತಳ ಸೇರುತ್ತಿದ್ದವು. ಹೊಸ ಕಾಲೋನಿಗಳು ಹಿಂದಿನ ಕೊಬ್ಬಿನ ತೊಟ್ಟುಗಳಿಗೇ ಅಂಟಿಕೊಂಡು ಬೆಳೆಯಲಾರಂಭಿಸುತ್ತಿದ್ದವು. ಆರು ವಾರಗಳ ನಂತರ ಭಯಂಕರ ಪ್ಲೇಗ್ ಬ್ಯಾಸಿಲೈಗಳಿದ್ದ ಫ್ಲಾಸ್ಕನ್ನು ಬಿಸಿಮಾಡಲಾಗುತ್ತಿತ್ತು; ಬ್ಯಾಸಿಲೈಗಳು ಮತ್ತು ಅವುಗಳಿಂದ ಲಭಿಸಿದ ಟಾಕ್ಸಿನ್‌ಗಳು ಒಟ್ಟು ಸೇರಿ ಅಂತಿಮವಾಗಿ ಬೂದುಬಣ್ಣದ ಜೀವರಕ್ಷಕ ವ್ಯಾಕ್ಸೀನ್ ಲಭ್ಯವಾಗುತ್ತಿತ್ತು.

ಹೀಗೆ ದೊರೆಯುವ ವ್ಯಾಕ್ಸೀನಿನ ಜೀವರಕ್ಷಕ ಗುಣಗಳನ್ನು ಈಗ ಸಾಬೀತು ಪಡಿಸಬೇಕಾಗಿತ್ತು.

ಹಾಫ್‌ಕಿನ್ನರು ಬಹುಪಾಲು ಯಶಸ್ವಿಯಾಗಬಹುದಾದ ವ್ಯಾಕ್ಸೀನನ್ನು ತಯಾರಿಸಿ ಅದನ್ನು ಪ್ರಾಯೋಗಿಕವಾಗಿ ಬಳಸಬೇಕೆಂಬ ನಿರ್ಧಾರ ಮಾಡುವ ಸಮಯಕ್ಕೆ, ಅವಕಾಶವೊಂದು ತಂತಾನೇ ಒದಗಿಬಂದಿತು. ಡಿಸೆಂಬರ್ ತಿಂಗಳ ಅಂತ್ಯದ ಸಮಯ ಹಾಗೂ ಹೊಸವರ್ಷ 1897ರ ಹೊಸ್ತಿಲಿನಲ್ಲಿ ಯುರೋಪಿನಿಂದ ಹಡಗೊಂದು ಮುಂಬಯಿಗೆ ಆಗಮಿಸಿತ್ತು. ಅದರೊಳಗೆ ಸಾಮಾನುಗಳ ಜೊತೆ ಪ್ರಯಾಣ ಬೆಳೆಸಿದ ಆರೋಗ್ಯವಂತ 20 ಇಲಿಗಳನ್ನು ಹಾಫ್‌ಕಿನ್ನರ ಪ್ರಯೋಗಾಲಯಕ್ಕೆ ಕಳುಹಿಸಿದರು. ಅವುಗಳ ಪೈಕಿ 10 ಇಲಿಗಳಿಗೆ ಈಗಾಗಲೇ ತಯಾರಿಸಿಕೊಂಡಿದ್ದ ವ್ಯಾಕ್ಸೀನನ್ನು ಇಂಜಕ್ಷನ್ ಮಾಡಲಾಯಿತು; ಇನ್ನುಳಿದವಕ್ಕೆ ಅದನ್ನು ನೀಡಿರಲಿಲ್ಲ. ಅವುಗಳನ್ನೆಲ್ಲಾ ಒಟ್ಟಾಗಿ ಸೇರಿಸಿ ಒಂದು ದೊಡ್ಡ ಬೋನಿನಲ್ಲಿ ಕೂಡಿಹಾಕಿದರು. ಅವುಗಳ ಜೊತೆಗೆ ಪ್ಲೇಗ್‌ನ ಸೋಂಕು ಉಂಟಾಗಿದ್ದ ಒಂದು ಇಲಿಯನ್ನೂ ಸಹ ಬಿಟ್ಟರು. ಫಲಿತಾಂಶ 24 ಗಂಟೆಗಳಲ್ಲೇ ಹೊರಬಿದ್ದಿತು. ಪ್ಲೇಗ್ ವ್ಯಾಕ್ಸೀನೇಷನ್ ಮಾಡಿದ್ದ ಎಲ್ಲಾ ಹತ್ತು ಇಲಿಗಳೂ ಆರೋಗ್ಯ ವಾಗಿದ್ದವು; ಇಂಜಕ್ಷನ್ ಮಾಡದಿದ್ದವರ ಪೈಕಿ ಒಂಭತ್ತು ಇಲಿಗಳು ಸತ್ತು ಬಿದ್ದಿದ್ದವು. ಫಲಿತಾಂಶ ಅಷ್ಟೊಂದು ಖಚಿತವಾಗಿದ್ದರಿಂದ ಆ ದಿಸೆಯಲ್ಲಿ ಮತ್ತೆ ಪ್ರಯೋಗಗಳನ್ನು ಜರುಗಿಸುವ ಆವಶ್ಯಕತೆ ಕಂಡುಬರಲಿಲ್ಲ; ಅಂತಹ ಪ್ರಯೋಗಗಳಿಂದ ಇನ್ನಾವುದೇ ಹೊಸಬಗೆಯ ಅಂಶಗಳು ಬರಬಹುದೆಂಬ ನಿರೀಕ್ಷೆಯೂ ಇರಲಿಲ್ಲ.

ಪ್ರಾಣಿಗಳಲ್ಲಿ ವ್ಯಾಕ್ಸೀನಿನ ಸುರಕ್ಷತೆ ಮತ್ತು ರೋಗ ನಿರೋಧಕ ಸಾಮರ್ಥ್ಯ ಸಾಬೀತಾದುದರಿಂದ ಮಾನವರ ಮೇಲೆ ಅದನ್ನು ಪ್ರಯೋಗಿಸುವ ಹಂತವನ್ನು ತಲುಪಿದಂತಾಗಿತ್ತು. ಅದು ಮನುಷ್ಯರಲ್ಲಿ ಅದೇ ರೀತಿಯಲ್ಲಿ ರೋಗನಿರೋಧಕ

ಸಾಮರ್ಥ್ಯವನ್ನು ಪ್ರೇರೇಪಿಸಬಹುದೇ, ಹಾಗಿದ್ದರೆ ಅವರಿಗೆ ನೀಡಬೇಕಾದ ಪ್ರಮಾಣ ಮತ್ತು ಉಂಟಾಗಬಹುದಾದ ಅಸ್ವಸ್ಥತೆಯನ್ನು ಅಂದಾಜು ಮಾಡಬೇಕಾಯಿತು. ಈಗ ತಯಾರಿಸಿದ್ದ ವ್ಯಾಕ್ಸೀನಿನಲ್ಲಿ ಜೀವಂತ ಪ್ಲೇಗ್ ಬ್ಯಾಸಿಲೈಗಳಿರಲಿಲ್ಲ; ಆದರೆ ಅವುಗಳಿಂದ ಉತ್ಪಾದನೆಯಾದ ಟಾಕ್ಸಿನ್ ಇರುತ್ತಿತ್ತು. ಮಾರಕವಾಗಿರಬಹುದಾದ ಅಂತಹ ಟಾಕ್ಸಿನ್ನಿ ಮೊದಲ ಪ್ರಯೋಗ ಮಾಡುವುದು ಯಾರ ಮೇಲೆ ಎಂಬುದು ಮುಂದಿನ ಪ್ರಶ್ನೆ. ಹಣದಾಶೆಗಾಗಿ ಅಂತಹ ಪ್ರಯೋಗಕ್ಕೆ ಮುಂದೆ ಬರಬಹುದಾದ ಬಡವರಿಗೇನೂ ಮುಂಬಯಿಯಲ್ಲಿ ಕೊರತೆ ಇರಲಿಲ್ಲ. ಆದರೆ ಹಾಫ್‌ಕಿನ್ ತಮ್ಮ ಜೀವಮಾನದುದ್ದಕ್ಕೂ ಕೆಲವು ಉದಾತ್ತ ಧ್ಯೇಯಗಳಿಗೆ ಅಂಟಿಕೊಂಡಿದ್ದವರು. ಅಮಾಯಕ ಬಡವನೊಬ್ಬನ ಜೀವದೊಡನೆ ಪಣವಿಟ್ಟು ನೋಡಲು ಅವರಿಗಿಷ್ಟವಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ತಮ್ಮ ಮೇಲೆಯೇ ವ್ಯಾಕ್ಸೀನುಗಳನ್ನು ಪ್ರಯೋಗಿಸಿಕೊಂಡ ಹಲವು ವಿಜ್ಞಾನಿಗಳು ಅನುಸರಿಸಿದ ಉದಾಹರಣೆಗಳು ಅವರೆದುರಿಗಿದ್ದವು. ಅಷ್ಟೇಕೆ, ಕೆಲವು ವರ್ಷಗಳ ಹಿಂದೆ ತಾವೇ ಕಾಲರಾ ವ್ಯಾಕ್ಸೀನ್ ತೆಗೆದುಕೊಂಡಿದ್ದರಲ್ಲವೇ? ಈ ಸಂದರ್ಭದಲ್ಲೂ ತಮ್ಮನ್ನೇ ಮೊದಲ ಪ್ರಯೋಗಕ್ಕೆ ಒಡ್ಡಿಕೊಳ್ಳುವುದೆಂಬ ನಿರ್ಧಾರ ಮಾಡಿದರು.

## ಮತ್ತೆ ಸ್ವಯಂ ಪ್ರಯೋಗ - ಜನವರಿ 10, 1897

ಹಾಫ್‌ಕಿನ್ನರು ತಮ್ಮ ಮೇಲಿನ ಪ್ರಯೋಗವನ್ನು ಬಹಳ ಗುಟ್ಟಾಗಿ ಜರುಗಿಸಿಕೊಂಡರು. ಆ ಪ್ರಯೋಗ 1897ರ ಜನವರಿ 10ರಂದು ಜರುಗಿತು. ಆ ವಿಷಯ ಕೇವಲ ಇನ್ನೆರಡು ಜನರಿಗೆ ಮಾತ್ರ ತಿಳಿದಿತ್ತು. ಅವರೆಂದರೆ ಅವರಿಗೆ ಮೊದಲ ಇಂಜಕ್ಷನ್ ನೀಡಿದ ಡಾ|| ಸರ್ವೇಯರ್ ಮತ್ತು ಸಾಕ್ಷಿಗಾಗಿ ಆಹ್ವಾನಿಸಿದ್ದ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರು. ಆ ದಿನ ಅವರಿಗೆ ಪ್ರಯೋಗಾಲಯದಲ್ಲಿ ಲಭ್ಯವಿದ್ದ ಅತಿ ಹೆಚ್ಚು ಪ್ರಭಾವ ಬೀರಬಹುದಾದ ಟಾಕ್ಸಿನ್‌ನ ಮಾದರಿಯನ್ನೇ ಆರಿಸಿಕೊಳ್ಳಲಾಗಿತ್ತು.; ಅಲ್ಲದೆ ಅತಿ ಹೆಚ್ಚಿನ ಪ್ರಮಾಣದ ಡೋಸ್‌ನ್ನು ತೆಗೆದುಕೊಳ್ಳುವ ನಿರ್ಧಾರವೂ ಆಗಿತ್ತು. ಡಾ|| ಸರ್ವೇಯರ್, ಹಾಫ್‌ಕಿನ್ನರ ಎರಡೂ ಸೊಂಟದ ಪಕ್ಕೆ ಮಾಂಸ ಖಂಡಗಳಿಗೆ ವ್ಯಾಕ್ಸೀನಿನ ತಲಾ 10 ಸಿ.ಸಿ ಗಳನ್ನು ಒಂದರ ಮೇಲೊಂದರಂತೆ ಇಂಜಕ್ಷನ್ ಮಾಡಿದರು. ಅಂದರೆ ಅತಿ ಹೆಚ್ಚು ತೀಕ್ಷ್ಣತೆ ಇರಬಹುದಾದ ವಾಕ್ಸೀನಿನ ಹೆಚ್ಚಿನ ಡೋಸನ್ನು ಅವರು ತೆಗೆದುಕೊಂಡಹಾಗಿತ್ತು. ಮುಂದೆ ಮುಂಬಯಿಯಲ್ಲಿ ರೋಗದ ಸಾಂಕ್ರಾಮಿಕತೆ ಅತಿ ಹೆಚ್ಚಾಗಿದ್ದ ಜನರಿಗೆ ಸುರಕ್ಷಿತವೆಂದು ನಿರ್ಧರಿಸಿ ಕೊಟ್ಟ ಡೋಸ್‌ನ ನಾಲ್ಕುಪಟ್ಟು ಇದು ಹೆಚ್ಚಾಗಿತ್ತು. ಈ ಐತಿಹಾಸಿಕ ಘಟನೆಯ ಬಗೆಗೆ ಇಂಗ್ಲಿಷ್ ವೈದ್ಯ ಮತ್ತು ಗ್ರಂಥಕರ್ತ ಡಾ||ಡೇವಿಡ್ ಮಾಸ್ಟರ್ಸ್ ದಾಖಲಿಸಿದ್ದನ್ನು ಇಲ್ಲಿ ಉಲ್ಲೇಖಿಸಬಹುದು: ''ಆ ಧೀರೋದಾತ್ತ ವಿಜ್ಞಾನಿ ಮೊದಲಿಗೆ ತಮ್ಮ ಎಡಪಾರ್ಶ್ವದ ಬಟ್ಟೆಗಳನ್ನು ಮೇಲೆತ್ತಿ ಹೊರಚಾಚಿದರು ಅಲ್ಲಿಗೆ ಮಾರಕವಾಗಬಹುದಾದ ಪ್ಲೇಗ್ ವ್ಯಾಕ್ಸೀನನ್ನು ಚುಚ್ಚಿದರು; ನಂತರ ಅದೇ ರೀತಿಯಲ್ಲಿ ಬಲಪಾರ್ಶ್ವಕ್ಕೂ ಅಷ್ಟೇ ಪ್ರಮಾಣದ ವ್ಯಾಕ್ಸೀನ್‌ನನ್ನು ಚುಚ್ಚಲಾಯಿತು. ಮುಂದೆ ನಮ್ಮ

ವೀರ ವಿಜ್ಞಾನಿ ಬಟ್ಟೆ ತೊಟ್ಟುಕೊಂಡರು; ಮುಂದೆ ತಮಗೆ ಸಂಭವಿಸಬಹುದಾದ ಅದೃಷ್ಟದ ಘಟನೆಗಳನ್ನು ಎದುರಿಸಲು ಅತ್ಯಂತ ಶಾಂತಚಿತ್ತರಾಗಿ ತಯಾರಾದರು. ಒಂದೆರಡು ಗಂಟೆಗಳಲ್ಲೇ ಜ್ವರ ಬರುವ ಲಕ್ಷಣಗಳು ಕಂಡು ಬಂದವು. ಪ್ಲೇಗ ರೋಗದ ಸಾಮಾನ್ಯ ಲಕ್ಷಣಗಳನ್ನು ಅವರೇ ಗುರುತಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಮುಂದಿನ ಒಂಭತ್ತು ಗಂಟೆಗಳಲ್ಲಿ ಜ್ವರ $102^0$Fಗೆ ಏರಿತು. ನಡೆದ ಘಟನೆಯನ್ನು ಬೇರಾರಿಗೂ ತಿಳಿಸದೆ ಎಂದಿನಂತೆ ತಮ್ಮ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿ ಬಿಟ್ಟರು. ಮರುದಿನ ಬೆಳಿಗ್ಗೆ ಇಂಜಕ್ಷನ್ ತೆಗೆದುಕೊಂಡ ಜಾಗಗಳಲ್ಲಿ ನೋವು ಅತಿಯಾಗಿತ್ತು; ಹಾಸಿಗೆಯಿಂದ ಏಳಲಾರದಷ್ಟು ಆಯಾಸ, ಸುಸ್ತು ಆಗಿತ್ತು. ಇಂಜಕ್ಷನ್ ಮಾಡಿದ ಜಾಗಗಳು ಊದಿಕೊಂಡು, ಊರಿಯೂತ ಉಂಟಾಗಿತ್ತು. ಎಡ ಗೆಜ್ಜೆಯಲ್ಲಿ ಹೆಚ್ಚಿನ ಬಾಧೆ ಇತ್ತು. ಅಷ್ಟೆಲ್ಲಾ ಬಾಧೆಗಳಿದ್ದರೂ ಮರುದಿನ ತಮ್ಮ ಕೆಲಸ ಕಾರ್ಯಗಳಲ್ಲಿ ಎಂದಿನಂತೆ ತೊಡಗಿಸಿಕೊಳ್ಳುವುದನ್ನು ಬಿಡಲಿಲ್ಲ. ಆ ದಿನ ಹಾಜರಾಗಬೇಕಿದ್ದ ಇಂಡಿಯನ್ ಮೆಡಿಕಲ್ ಸರ್ವಿಸ್‌ನ ಮಹಾ ನಿರ್ದೇಶಕರು ಕರೆದಿದ್ದ ಸಭೆಯಲ್ಲೂ ಭಾಗವಹಿಸಿದ್ದರು. ಅವರ ಧೈರ್ಯವನ್ನು ಎಷ್ಟು ಪ್ರಶಂಸಿಸಿದರೂ ಸಾಲದು.

''ಮುಂದೊಂದು ಸಾರಿ ಹಾಫ್‌ಕಿನ್ನರೇ ಆ ಬಗೆಗೆ ಪ್ರಸ್ತಾಪಿಸಿದ್ದನ್ನು ನೋಡಿ, 'ನಾನು ಆ ದಿನದ ಸಭೆಯಲ್ಲಿ ಭಾಗವಹಿಸಲು ಶಕ್ತನಾಗಿದ್ದೆ. ಅಲ್ಲದೆ ನನ್ನಲ್ಲಿ ಉದ್ಭವಿಸಿದ್ದ ರೋಗ ಲಕ್ಷಣಗಳೆಲ್ಲಾ ಮಾಯವಾಗುವವರಿಗೂ, ನಾನು ಇನಾಕ್ಯುಲೇಷನ್ ಮಾಡಿಸಿಕೊಂಡಿದ್ದು ಬೇರಾರಿಗೂ ತಿಳಿಯದಂತೆ ವರ್ತಿಸಿದೆ' ಕದ್ದೂ ಮುಚ್ಚಿಯೂ ಇತರರಿಗೆ ಒಳ್ಳೆಯದನ್ನು ಮಾಡಬಹುದೆಂಬುದಕ್ಕೆ ಈ ಐತಿಹಾಸಿಕ ಘಟನೆ ಒಂದು ಒಳ್ಳೆಯ ನಿದರ್ಶನವಾಗಿ ಉಳಿದುಕೊಂಡಿದೆ''

ಹಾಫ್‌ಕಿನ್ನರು ಅದೆಷ್ಟು ಸ್ವಾಭಾವಿಕವಾಗಿ ವರ್ತಿಸಿದರೆಂದರೆ ಆ ಘಟನೆಯ ವಿಷಯ ಬಹಿರಂಗವಾಗಲೂ ಇನ್ನೂ ಕೆಲವು ದಿನಗಳೇ ಆದವು. ಹಾಫ್‌ಕಿನ್ನರು ವ್ಯಾಕ್ಸೀನನ್ನು ಪ್ರಾಯೋಗಿಕವಾಗಿ ತೆಗೆದುಕೊಳ್ಳಲು ಸ್ವಯಂಪ್ರೇರಿತರಾಗಿ ಬರಲು ಇತರರಿಗೆ ಕೋರಿಕೆ ಮಾಡದಿದ್ದರೆ, ಬಹುಶಃ ಈ ಘಟನೆ ಜನ ಸಮುದಾಯಕ್ಕೆ ತಿಳಿಯುತ್ತಿರಲೇ ಇಲ್ಲವೇನೋ. ಈ ವ್ಯಾಕ್ಸೀನು ಅಪಾಯಕಾರಿಯಲ್ಲವೆಂಬುದನ್ನು ಋತಪಡಿಸಲು ಅವರು ಗ್ರ್ಯಾಂಟ್ ಮೆಡಿಕಲ್ ಕಾಲೇಜಿನ ವೈದ್ಯ ಸಮೂಹದವರಿಗೆ ತಾವು ಇನಾಕ್ಯುಲೇಷನ್ ಮಾಡಿಸಿಕೊಂಡಾಗಿನಿಂದ ಉಂಟಾದ ಅನುಭವಗಳನ್ನು ಒಂದು ಸಭೆಯಲ್ಲಿ ವಿವರಿಸಿದರು. ಅದೊಂದು ಅತ್ಯಂತ ಕಷ್ಟಕರ ಅನುಭವವಾಗಿತ್ತೆಂಬುದನ್ನು ಅವರೇ ಒಪ್ಪಿಕೊಂಡು, ಆ ಸಮಯದಲ್ಲಿ ಅವರ ದೇಹದ 16 ಕಡೆ ಇಂಜಕ್ಷನ್ ತೆಗೆದುಕೊಂಡು ಹಾಗೆ ನೋವನ್ನು ಅನುಭವಿಸ ಬೇಕಾಯಿತೆಂದು ಹೇಳಿಕೊಂಡಿದ್ದರಂತೆ.

ಹಾಫ್‌ಕಿನ್ ಅನುಭವಿಸಬೇಕಾದ ಈ ನೋವಿನ ಪ್ರಮೇಯ, ಆ ಪ್ರಯೋಗದ ಯೋಗ್ಯತೆಯ ಒಂದು ವಿಷಾದನೀಯ ಘಟನೆಯೆಂದು ಹೇಳಬಹುದು. ಆದರೂ ಪ್ರತಿದಿನ ಪ್ಲೇಗಿನಿಂದ ನೂರಾರು ಜನ ಸಾಯುತ್ತಿದ್ದ ಸಂದರ್ಭದಲ್ಲಿ ಅದನ್ನು ತಡೆಗಟ್ಟುವಲ್ಲಿ

ಇನಾಕ್ಯುಲೇಷನ್ ಮಾಡುವುದೊಂದೇ ಸರಿಯಾದ ಮಾರ್ಗವಾಗಿತ್ತು. ಹಾಫ್‌ಕಿನ್ನರು ಆ ದಿಸೆಯಲ್ಲಿ ಮಾಡಿಕೊಂಡ ಮನವಿಗೆ ಭಾರತೀಯರೇ ಅಲ್ಲದೆ, ಯುರೋಪಿಯನ್ನರೂ, ವಿದ್ಯಾರ್ಥಿಗಳು, ಪ್ರಾಧ್ಯಾಪಕರೇ ಮುಂತಾದವರು ಮುಂದೆ ಬಂದು ಇನಾಕ್ಯುಲೇಷನ್ ಮಾಡಿಸಿಕೊಂಡರು. ಅವರನ್ನನುಸರಿಸಿ ಮುಂಬಯಿಯ ನೂರಾರು ಜನ ವಿದ್ಯಾವಂತರು ಸ್ವಪ್ರೇರಿತರಾಗಿ ಇನಾಕ್ಯುಲೇಷನ್‌ಗೆ ಮುಂದಾದದರು. ಹಾಗೆ ಸ್ವಪ್ರೇರಿತರಾಗಿ ಮುಂದೆ ಬಂದವರೆಲ್ಲಾ ಮುಂಬಯಿಯ ಶ್ರೀಮಂತ ಬಡವಾಣೆಯೆನಿಸಿದ ಎಸ್ಪಲನೇಡ್ ಪ್ರದೇಶದಿಂದ ಬಂದವರಾಗಿದ್ದರು. ಅತ್ಯಂತ ಜನಭರಿತ ಹಾಗೂ ಬಡಜನ ಸಮುದಾಯ ಕೇಂದ್ರೀಕೃತವಾಗಿದ್ದ ಪರೇಲ್, ಬೈಕುಲ್ಲಾ ಮತ್ತು ಮಾಂಡಾವಿಯ ಜನರ ಪ್ರತಿಕ್ರಿಯೆ ನಿರಾಶದಾಯಕವಾಗಿತ್ತು. ಆ ದಿಸೆಯಲ್ಲಿ ಪ್ರಬಲವಾದ ಪೌರಾಡಲಿತ ವರ್ಗದವರದ್ದೇ ಪ್ರಮುಖ ಅಡಚಣೆಯಾಗಿತ್ತು; ಜನರ ಸ್ವಾಸ್ಥ್ಯ ಸಂರಕ್ಷರಾಗಬೇಕಿದ್ದ ಅವರೇ ವ್ಯಾಕ್ಸಿನೇಷನ್ ಚಳುವಳಿಯ ವಿರುದ್ಧ ಪ್ರಬಲಗೋಡೆ ನಿರ್ಮಿಸಿದಂತ್ತಿತ್ತು; ಇನಾಕ್ಯುಲೇಷನ್‌ಗಳನ್ನು ವ್ಯಾಪಕವಾಗಿ ನೆರವೇರಿಸಲು ಜನರನ್ನು ಒಂದೆಡೆ ಸೇರುವಂತೆ ಮಾಡಲು ಕೇಂದ್ರಗಳನ್ನು ಸ್ಥಾಪಿಸುವಲ್ಲಿ ಅವರೇ ಆಡಚಣೆ ಒಡ್ಡುತ್ತಿದ್ದರು.

## ಕೈದಿಗಳ ಮೇಲೆ ಪ್ರಯೋಗ

ಈ ಸಂದರ್ಭದಲ್ಲಿ ಪೌರಾಡಳಿತದವರೇ ಹಾಫ್‌ಕಿನ್ನರನ್ನು ತಮ್ಮ ನೆರವಿಗೆ ಬರುವಂತೆ ಕೇಳಿಕೊಳ್ಳುವ ಪ್ರಮೇಯ ಒದಗಿಬಂದಿತು. ಬೈಕುಲ್ಲಾ ಪ್ರದೇಶದಲ್ಲಿನ ಬ್ರಿಟಿಷ್ ರಿಫಾರ್ಮೇಟರಿ ಎಂಬ ಜೈಲಿನಲ್ಲಿ ಪ್ಲೇಗ್ ಸಾಂಕ್ರಾಮಿಕ ಕಾಲಿಟ್ಟಿತು. ಹಲವಾರು ನಿವಾಸಿಗಳು ಅದರಿಂದ ಸಾವಿಗೀಡಾದರು. ಭದ್ರವಾದ ಕಲ್ಲುಗೋಡೆಗಳಿಂದ ನಿರ್ಮಿತವಾದ ಜೈಲಿನ ಒಳಾಂಗಣಕ್ಕೆ, 1897ರ ಜನವರಿ 30ರಂದು ಹಾಫ್‌ಕಿನ್ ಮತ್ತು ಸಹೋದ್ಯೋಗಿಗಳು ಪ್ರವೇಶಿಸಲು ಅನುಮತಿ ದೊರೆಯಿತು. ಜೈಲಿನ ಮುಖ್ಯಾಧಿಕಾರಿ ಮತ್ತು ಅಲ್ಲಿಯ ವೈದ್ಯರೂ ಸಹಾ ಉಂಟಾಗುತ್ತಿದ್ದ ಸಾವು ನೋವುಗಳಿಂದ ಭಯಭೀತರಾಗಿದ್ದರು. ಜೈಲಿನಲ್ಲಿರುವ ಎಲ್ಲಾ ಕೈದಿಗಳಿಗೂ ಅವರು ಇಷ್ಟ ಪಡಲಿ ಅಥವಾ ಪಡದಿರಲಿ, ಪ್ಲೇಗ್ ನಿರೋಧಕ ಇನಾಕ್ಯುಲೇಷನ್ ಮಾಡಬೇಕೆಂದು ಕೇಳಿಕೊಂಡರು. ಆದರೆ ಹಾಫ್‌ಕಿನ್ ಆ ಸಲಹೆಗೆ ಸಮ್ಮತಿಸಲಿಲ್ಲ. ಜೈಲಿನಲ್ಲಿರುವ ಕೆಲವು ಯುರೋಪಿನ್ನರು ಮತ್ತು ಕೆಲವು ವಿದ್ಯಾವಂತ ಯುವಕರಿಗೆ ವ್ಯಾಕ್ಸಿನೇಷನ್ ಮಾಡುವುದಕ್ಕಿಂತ ಬೈಕುಲ್ಲಾ ಜಿಲ್ಲೆಯ ಇಡೀ ಜನ ಸಮುದಾಯಕ್ಕೇ ಆ ಕಾರ್ಯವನ್ನು ನೇರವೇರಿಸುವುದು ಹಾಫ್‌ಕಿನ್ನರ ಆಶಯವಾಗಿತ್ತು. ಕಾರಣವಿಷ್ಟೆ. ವ್ಯಾಕ್ಸೀನಿನಿಂದಾಗುವ ಪರಿಣಾಮಗಳ ಸಂಪೂರ್ಣ ಮೌಲ್ಯಮಾಪನ ಇನ್ನೂ ಆಗಿರಲಿಲ್ಲ; ಜೈಲಿನಲ್ಲಿರುವರಿಗೆಲ್ಲಾ ಒತ್ತಾಯ ಪೂರ್ವಕವಾಗಿ ಇನಾಕ್ಯುಲೇಷನ್ ಮಾಡಿದಾಗ, ಅಹಿತಕರ ದುಷ್ಪರಿಣಾಮಗಳಾಗಲೂ ಸಾಧ್ಯ; ಅದರ ಪರಿಣಾಮಗಳು ಕೇವಲ ಜೈಲಿನ ನಾಲ್ಕು ಗೋಡೆಗಳೊಳಗೆ ಸೀಮಿತವಾಗಿ ಉಳಿದುಕೊಳ್ಳುತ್ತವೆಂದು ನಿರೀಕ್ಷಿಸಲಾಗದು. ಅಂತಹ ಸುದ್ದಿ ಹೊರಗಡೆ ಪ್ರಸರಿಸಿದಾಗ ಸಾರ್ವಜನಿಕರು ಮುಂದೆ

ಇನಾಕ್ಯುಲೇಷನ್ ವಿಧಾನವನ್ನೇ ಸಾರಾಸಗಟಾಗಿ ನಿರಾಕರಿಸಬಹುದಾಗಿತ್ತೆಂಬುದು ಅವರ ಅಭಿಮತವಾಗಿತ್ತು.

ಆದರೂ ಹಾಫ್‌ಕಿನ್ನರು ಮನಸ್ಸು ಮಾಡಿ ಅಲ್ಲಿದ್ದ 337 ಯುವ ಕೈದಿಗಳೊಡನೆ ವಿಚಾರ ವಿನಿಮಯ ಮಾಡಿದರು. ದುಭಾಷಿಗಳು ಅವರಾಡಿದ ಇಂಗ್ಲಿಷ್ ಮಾತುಗಳನ್ನು ಮರಾಠಿ, ಹಿಂದಿ, ಮತ್ತು ಉರ್ದು ಭಾಷೆಗಳಿಗೆ ತರ್ಜುಮೆ ಮಾಡಿ ವಿವರಿಸಿದರು. ಅವರಲ್ಲಿ ಧೈರ್ಯ ತುಂಬಿದರು. ಅಲ್ಲಿದ್ದ ಕೆಲವು ಭಾರತೀಯ ವೈದ್ಯರು ಕೈದಿಗಳ ಎದುರಿಗೇ ಮೊದಲು ಇನಾಕ್ಯುಲೇಷನ್ ಮಾಡಿಸಿಕೊಂಡರು. ನಂತರ ಸ್ವಯಿಚ್ಛೆಯಿಂದ ಮಾಡಿಸಿಕೊಳ್ಳುವವರಿಗೆ ಆಹ್ವಾನವಿತ್ತರು. ಕೂಡಲೇ 134 ಕೈದಿಗಳು ಮುಂದಡಿ ಇಟ್ಟರು.

ಹಾಫ್‌ಕಿನ್ನರು ಈ ಸಂದರ್ಭದಲ್ಲಿ ತಾವೇ ಮೊದಲ ಬಾರಿಗೆ ಇನಾಕ್ಯುಲೇಷನ್ ಮಾಡಿಸಿಕೊಂಡಾಗಿನಷ್ಟೇ ಧೈರ್ಯ ಮತ್ತು ಜವಾಬ್ದಾರಿಯನ್ನು ವಹಿಸಬೇಕಾಯಿತು. ರಿಫಾರ್ಮೆಟರಿಯ ಪಡಸಾಲೆಗಿಂತ ಉತ್ತಮ ಪರಿಸರ ಇಂತಹ ಪ್ರಮುಖ ಇನಾಕ್ಯುಲೇಷನ್‌ಗೆ ಬೇರೊಂದಿರಲಾರದು. ಜೈಲಿನ ಸೀಮಿತ ವಠಾರದಲ್ಲಿ ಇನಾಕ್ಯುಲೇಷನ್ ಮಾಡಿಸಿಕೊಂಡವರು ಹಾಗೂ ಮಾಡಿಸಿಕೊಳ್ಳದವರನ್ನೆಲ್ಲಾ ಒಂದೇ ಕಡೆ ಇರುವ ವ್ಯವಸ್ಥೆ ಮಾಡಿದರು. ಅದರಿಂದ ಇನಾಕ್ಯುಲೇಷನ್ ಬಗೆಗೆ ಇರಬಹುದಾದ ಅನುಕೂಲ, ಅನಾನುಕೂಲಗಳೆಲ್ಲಾ ಹೊರಬರುವುದಕ್ಕೆ ಸರಿಯಾದ ಪರಿಸ್ಥಿತಿಯ ನಿರ್ಮಾಣ ಮಾಡಿದಂತಾಗಿತ್ತು. ಈ ಪ್ರಮುಖ ಪ್ರಯೋಗದ ಆಗುಹೋಗುಗಳ ಸಂಪೂರ್ಣ ಜವಾಬ್ದಾರಿ ಹೊತ್ತಿದ್ದ ಹಾಫ್‌ಕಿನ್ನರು ಮುಂದೆ ಒಂದು ವಾರ ರಿಫಾರ್ಮೆಟರಿಯೊಳಗಡೆಯೇ ಉಳಿದುಕೊಂಡರು. ಒಂದು ಸಾರಿಯೂ ಅವರು ಜೈಲನ್ನು ಬಿಟ್ಟು ಹೊರಹೋಗದೆ ಕೈದಿಗಳ ಸ್ವಾಸ್ಥ್ಯದ ಮೇಲೆ ಕಟ್ಟೆಚ್ಚರವಹಿಸಿ ಉಳಿದುಕೊಂಡಿದ್ದರು. ಮೊದಲ ರಾತ್ರಿಯ ಅನುಭವ ತುಂಬಾ ಭಯಾನಕವಾಗಿತ್ತು. ಇನಾಕ್ಯುಲೇಷನ್ ಮಾಡಿಸಿಕೊಂಡಿದ್ದ ಇಬ್ಬರು ಭಾರತೀಯ ಯುವಕರಿಗೆ ಕೆಲವೇ ಗಂಟೆಗಳಲ್ಲಿ ದುಗ್ಧಗ್ರಂಥಿಗಳ ಉರಿಊತ, ಜ್ವರ ಮುಂತಾದ ಪ್ಲೇಗಿನ ಚಿಹ್ನೆಗಳು ಪ್ರಕಟವಾದವು. ಇಂಜಕ್ಷನ್ ನೀಡುವ ಮೊದಲೇ ಅವರಲ್ಲಿ ಪ್ಲೇಗಿನ ಸೋಂಕು ತಗುಲಿರಬಹುದಾದ್ದರಿಂದ ಅದರ ಲಕ್ಷಣಗಳು ಪ್ರಕಟವಾಗಿರಬಹುದು; ಆದುದರಿಂದ ಅದರ ಬೆಳವಣಿಗೆಯನ್ನು ತಡೆಗಟ್ಟಲಾಗಲಿಲ್ಲ; ಅವರಿಬ್ಬರೂ ಆ ರಾತ್ರಿಯೇ ಆಸು ನೀಗಿದರು. ಇನ್ನುಳಿದ ಇನಾಕ್ಯುಲೇಷನ್ ಮಾಡಿಸಿಕೊಂಡವರಲ್ಲೆಲ್ಲಾ ಪ್ಲೇಗಿನ ಎಲ್ಲಾ ಅನಿಷ್ಟಕರ ಲಕ್ಷಣಗಳು ಕಾಣಿಸಿಕೊಂಡವು. ಈ ಚಿಹ್ನೆಗಳು ಅವರಲ್ಲಿ ಇನಾಕ್ಯುಲೇಷನ್‌ನಿಂದ ಪ್ಲೇಗೇ ಸಂಭವಿಸಿತೋ ಇಲ್ಲವೆ ಅವೆಲ್ಲಾ ವ್ಯಾಕ್ಸಿನೇಷನ್‌ನ ಪ್ರತಿಕ್ರಿಯೆಯಾಗಿದ್ದವೋ ಎಂಬುದನ್ನು ತಕ್ಷಣ ನಿರ್ಧರಿಸಲು ಸಾಧ್ಯವಿರಲಿಲ್ಲ.

ಮುಂದಿನ ಒಂದೇ ವಾರದಲ್ಲಿ ಈ ಪ್ರಯೋಗದ ಫಲಿತಾಂಶ ದೊರೆಯಿತು. ಇನಾಕ್ಯುಲೇಷನ್ ನೀಡುವ ಮೊದಲೇ ವ್ಯಾಧಿಯ ಸೋಂಕನ್ನಂಟಿಸಿಕೊಂಡ ಇಬ್ಬರು ರೋಗನಿರೋಧಕ ಶಕ್ತಿಯು ವರ್ಧಿಸುವ ಮೊದಲೇ ಅಸುನೀಗಿದ್ದನ್ನು ಹೊರತು ಪಡಿಸಿದರೆ,

134 ಮಂದಿಯಲ್ಲಿ ಕೇವಲ ಒಬ್ಬನಿಗೆ ಪ್ಲೇಗಿನ ಪೂರ್ಣ ಪ್ರಮಾಣದ ಲಕ್ಷಣಗಳು ಪ್ರಕಟವಾಗಿದ್ದವು; ಚಿಕಿತ್ಸೆಯಿಂದ ಅವನನ್ನು ಬದುಕಿಸಿಕೊಳ್ಳಲು ಸಾಧ್ಯವಾಯಿತು. ನಿರಾಕರಿಸಿದ 177 ಕೈದಿಗಳ ಪೈಕಿ 13 ಜನರಿಗೆ ಪ್ಲೇಗ್ ಕಾಣಿಸಿಕೊಂಡು 7 ಜನ ಅದರಿಂದ ಅಸುನೀಗಿದರು.

ಹಾಫ್‌ಕಿನ್ ಆತಂಕಕಾರಿಯಾಗಿ ಕಳೆದಿದ್ದ ಆ ಒಂದು ವಾರದಲ್ಲಿ ಹಲವು ಅನುಮಾನಗಳಿಗೆ ಉತ್ತರಕಂಡುಕೊಂಡಿದ್ದರು. ಒಂದು ಅಂದಾಜಿನಿಂದ ನಿಗದಿಪಡಿಸಿ ಕೊಂಡಿದ್ದ ವ್ಯಾಕ್ಸೀನಿನ ಡೋಸ್ ಸರಿಯಾಗಿದ್ದಿತು; ಇನಾಕ್ಯುಲೇಷನ್ ನೀಡುವ ಮೊದಲೇ ಅದರಿಂದುಂಟಾಗಬಹುದಾದ ಒಳ್ಳೆಯ ಪರಿಣಾಮಗಳು, ಅವರು ಊಹಿಸಿಕೊಂಡ ಸಿದ್ಧಾಂತದ ಲೆಕ್ಕಾಚಾರ ಸರಿಯಾಗಿದ್ದುವೆಂಬುದು ಸಾಬೀತಾಯಿತು. ವ್ಯಾಕ್ಸೀನನ್ನು ತಯಾರಿಸುವ ಹಂತದಲ್ಲಿ ಅದನ್ನ ಬಿಸಿ ಮಾಡುವ ಕ್ರಮ ಸರಿಯಾಗಿದೆ ಎಂದಂತಾಯಿತು. ಮುಂಬಯಿಯ ಪೌರಾಡಳಿತಾಧಿಕಾರಿಗಳು ಹಾಫ್‌ಕಿನ್ನರ ವ್ಯಾಕ್ಸೀನಿನ ಬಗೆಗೆ ಇಟ್ಟುಕೊಂಡಿದ್ದ ಅನುಮಾನಗಳಿಗೂ ಆಧಾರವಿಲ್ಲವೆಂಬುದು ಶ್ರುತಪಟ್ಟಿತು.

ಪ್ಯಾರಿಸ್ಸಿನ ಪ್ಯಾಶ್ಚರ್ ಇನ್ಸ್ಟಿಟ್ಯೂಟ್‌ನವರು ಸೋಂಕು ರೋಗಗಳ ಹತೋಟಿಗೆ ನಿರೂಪಿಸಿದ ಸಿದ್ಧಾಂತಗಳ ಬಗೆಗೆ ಬಹುಪಾಲು ಭಾರತೀಯ ವೈದ್ಯರಿಗೆ ತಿಳಿದಿರಲ್ಲವೆಂದೇ ಹೇಳಬಹುದು. ಹಾಗಾಗಿ ಆ ಬಗೆಗೆ ಅರಿವಿಲ್ಲದವರು ಹಾಫ್‌ಕಿನ್ ವೈದ್ಯ ಸಮೂಹದವರನ್ನು ಉದ್ದೇಶಿಸಿ ಭಾಷಣಗಳನ್ನು ಮಾಡುತ್ತಿದ್ದಾಗ ಅಲ್ಲಸಲ್ಲದ ವ್ಯಂಗ್ಯಟೀಕೆಗಳನ್ನು ಮಾಡುತ್ತಿದ್ದುದುಂಟು. ಈ ದಿಸೆಯಲ್ಲಿ ''ತಪ್ಪು ಕಲ್ಪನೆಯಿಂದ ಭವಿಷ್ಯ ನುಡಿದಿದ್ದ ತತ್ವಜ್ಞಾನಿ ತನ್ನ ಜೀವಮಾನ ಪರ್ಯಂತ ಸುಮ್ಮನಿರುವುದೇ ಒಳ್ಳೆಯದು'' ಎಂದು ಭಾರತೀಯರಲ್ಲಿ ಚಲಾವಣೆಯಿದ್ದ ನಾಣ್ನುಡಿಯನ್ನು ಕೆಲವರು ಆಗಾಗ್ಗೆ ಉಲ್ಲೇಖಿಸಿ ಪರೋಕ್ಷವಾಗಿ ಅವರ ಸಿದ್ಧಾಂತಗಳನ್ನು ಪದೇ ಪದೇ ಪುನರುಚ್ಚರಿಸಬಾರದೆಂದು ಜ್ಞಾಪಿಸುತ್ತಿದ್ದರೆನಿಸುತ್ತದೆ. ಪ್ರಸ್ತುತ 1897ರ ಜನವರಿ-ಫೆಬ್ರವರಿ ತಿಂಗಳುಗಳಲ್ಲಿ ಪ್ಲೇಗಿನ ಹಾವಳಿ ಅತ್ಯುಗ್ರವಾಗಿದ್ದು ಪ್ರತಿ ತಿಂಗಳು ಸುಮಾರು 3000ರಷ್ಟು ಜನರು ಸಾಯುತ್ತಿದ್ದರು; ಅಲ್ಲದೆ ಬ್ರಿಟಿಷ್ ರಿಫಾರ್ಮೇಟರಿಯ ನಾಲ್ಕು ಗೋಡೆಗಳ ನಡುವೆ ಜರುಗಿದ ಪವಾಡದ ಹಿನ್ನೆಲೆಯಲ್ಲಿ ಹಾಫ್‌ಕಿನ್ ತಮ್ಮ ವ್ಯಾಕ್ಸೀನಿನ ಪ್ರಭಾವದ ಬಗೆಗೆ ಅಧಿಕೃತವಾಗಿ ಮಾತಾಡಬಹುದಿತ್ತು. ಯಾರೊಬ್ಬರೂ ಅವರನ್ನು ವ್ಯಂಗ್ಯ ಟೀಕೆಗಳಿಂದ ನಾಣ್ನುಡಿಯನ್ನು ಉಲ್ಲೇಖಿಸಿ ಮಾತಾಡುವ ಧೈರ್ಯ ವಿರಲಿಲ್ಲ.

ಮುಂಬಯಿ ಷಹರಿನಿಂದ ಭಯಭೀತರಾಗಿ ವಲಸೆ ಹೋಗುತ್ತಿದ್ದವರು ಭಾರತದ ವಾಯುವ್ಯ ದಿಕ್ಕಿನ ತೀರ ಪ್ರದೇಶಗಳತ್ತ ಸಾಗುತ್ತಾ ಅಲ್ಲೆಲ್ಲಾ ಪ್ಲೇಗಿನ ಸೋಂಕನ್ನು ಹರಡಲಾರಂಭಿಸಿದ್ದರು. ಫ್ರಾನ್ಸ್ ದೇಶದಷ್ಟು ವಿಶಾಲ ಪ್ರದೇಶದಲ್ಲಿ ಸುಮಾರು ಒಂದು ಕೋಟಿ ಎಂಬತ್ತು ಲಕ್ಷ ಜನರಿರುವ ವಲಯದಲ್ಲಿ ಹರಡುವ ಸಾಧ್ಯತೆ ಇತ್ತು. ಕರಾಚಿ, ಹೈದರಾಬಾದ್ (ಸಿಂಧ್), ಪೂನ, ಪಾಲಂಪೂರ್‌ಗಳಲ್ಲಿ ಪ್ರತಿದಿನ ನೂರಾರು ಜನರು

ಸಾಯುತ್ತಿದ್ದ ವರದಿಗಳು ಬರುತ್ತಿದ್ದವು. ಭಾರತದ ದವಸಧಾನ್ಯಗಳ ಉಗ್ರಾಣವೆಂದು ಖ್ಯಾತಿ ಪಡೆದಿದ್ದ ಸಿಂಧ್ ಪ್ರಾಂತ್ಯವನ್ನು ಈಗ ಪ್ಲೇಗ್ ಆವರಿಸಿಕೊಂಡಿತ್ತು. ಇಂತಹ ಮಹಾಸಾಂಕ್ರಾಮಿಕದ ಸುದ್ದಿಯನ್ನು ಸರ್ಕಾರ ಜನರಿಂದ ಮುಚ್ಚಿಡಲು ಈಗ ಸಾಧ್ಯವಾಗಲೇ ಇಲ್ಲ. ಭಾರತವೇ ಅಲ್ಲದೆ ಇಂಗ್ಲೆಂಡಿನಲ್ಲಿಯೂ ಜನಾಭಿಪ್ರಾಯ ದೇಶದಲ್ಲಿ ಪ್ಲೇಗನ್ನು ಹತ್ತಿಕ್ಕಲು ಸರಿಯಾದ ಕ್ರಮಗಳನ್ನು ಜರುಗಿಸಬೇಕೆಂದು ಒತ್ತಾಯ ಮಾಡಲಾರಂಸಿದವು.

## ಪ್ಲೇಗ್ ಕಂಟ್ರೋಲ್ ಕಮಿಟಿ

ಇಂತಹ ಒತ್ತಾಯಗಳಿಗೆ ಭಾರತ ಸರ್ಕಾರ ಯಾವುದಾದರೊಂದು ರೀತಿಯಲ್ಲಿ ಸ್ಪಂದಿಸಲೇ ಬೇಕಾಯಿತು. ಆ ಸಲುವಾಗಿ 1897ರ ಮಾರ್ಚ್ 5ರಂದು ಪ್ಲೇಗ್ ಕಂಟ್ರೋಲ್ ಕಮಿಟಿಯೆಂಬ ವ್ಯವಸ್ಥೆಯನ್ನು ನೇಮಿಸಿದರು. ಅದರ ಮುಖ್ಯಸ್ಥರನ್ನಾಗಿ ಸೇನಾಬಲದ ಗ್ಯಾರಿಸನ್ ಒಂದರ ಜವಾಬ್ದಾರಿ ಹೊತ್ತಿದ್ದ ಬ್ರಿಗೇಡಿಯರ್ ಜನರಲ್ ಗಟಾಕ್ರೇ ಎಂಬವರನ್ನು ನೇಮಿಸಲಾಯಿತು; ಸಾಂಕ್ರಾಮಿಕ ರೋಗಗಳನ್ನು ಕಾನೂನು ಪ್ರಕಾರ ನಿಯಂತ್ರಿಸುವ ಆರ್ಡಿನೆನ್ಸ್ ನಂಬರ್ 3ರ ಪ್ರಕಾರ ನಿರುಂಕುಶಾಧಿಕಾರವನ್ನು ಅವರಿಗೆ ನೀಡಲಾಯಿತು. ಬ್ರಿಗೇಡಿಯರ್ ಜನರಲ್ಲರು ಪ್ಲೇಗ್ ರೋಗ ಉದ್ಭವಿಸುವ ಕಾರಣಗಳನ್ನು ತಿಳಿದುಕೊಳ್ಳುವ ಗೋಜಿಗೆ ಹೋಗಲಿಲ್ಲ; ಸೇನೆಯ ಅಭ್ಯಾಸದಂತೆ ಯುದ್ಧದಲ್ಲಿ ಶರಣಾಗತರಾದವರನ್ನು ನೋಡಿಕೊಳ್ಳುವ ರೀತಿಯಲ್ಲಿ ಮುಂಬಯಿ ಪ್ರಾಂತ್ಯದ ಜನಗಳನ್ನು ಪರಿಗಣಿಸಲಾರಂಭಿಸಿದರು. ಇಡೀ ಮುಂಬಯಿ ನಗರವನ್ನು ಹಲವು ಜಿಲ್ಲೆಗಳಾಗಿ ವಿಂಗಡಿಸಿದರು; ಪ್ರತಿದಿನ ಬೆಳಿಗ್ಗೆ ಜಿಲ್ಲೆಗಳಿಗೆ ಇಬ್ಬರು ಪೋಲಿಸರು ಮತ್ತು ಮೂವರು ಸಿಪಾಯಿಗಳನ್ನು ಪರಿವೀಕ್ಷಣೆಗಾಗಿ ತಿರುಗಾಡುವಂತೆ ನೇಮಿಸಿದರು. ಅವರು ಮನೆಮನೆಗೆ ಭೇಟಿ ಮಾಡಿ ಪ್ಲೇಗ್‌ನಿಂದ ಬಳಲುತ್ತಿರುವರೆಂಬ ಅನುಮಾನವಿರುವವರನ್ನೆಲ್ಲಾ ಬಲಾತ್ಕಾರದಿಂದ ಒಂದು ಕೈಗಾಡಿಗೆ ತುಂಬಿ ಹತ್ತಿರದ ಆಸ್ಪತ್ರೆಗೆ ಸೇರುವಂತೆ ಕಳುಹಿಸಿಕೊಡುತ್ತಿದ್ದರು. ಅಂತಹ ರೋಗಿಗಳ ವಠಾರದಲ್ಲಿರುವ ಇತರರನ್ನು ನಗರದ ಹೊರವಲಯದಲ್ಲಿ ಅವರಿಗಾಗಿ ಏರ್ಪಡಿಸಿದ್ದ ಬೇರ್ಪಡಿಸುವ ಶಿಬಿರಗಳಿಗೆ ಕಳುಹಿಸು ತ್ತಿದ್ದರು ಮತ್ತು ವಠಾರದಲ್ಲೆಲ್ಲಾ ಸೋಂಕುರೋಗಗಳನ್ನು ತಡೆಗಟ್ಟಲು ಬಳಸುವ ಕ್ರಿಮಿನಾಶಕಗಳನ್ನು ಸಿಂಪಡಿಸುತ್ತಿದ್ದರು.

ಬ್ರಿಗೇಡಿಯರ್ ಜನರಲ್ ಗಟಾಕ್ರೆಯ ಪ್ಲೇಗ್ ಕಂಟ್ರೋಲ್ ಕಮಿಟಿಯವರು ಪ್ಲೇಗ್ ನಿಯಂತ್ರಣಕ್ಕಾಗಿ ಜರುಗಿಸುತ್ತಿದ್ದ ಕಾರ್ಯಕ್ರಮಗಳನ್ನು ಪತ್ರಿಕೆಗಳನ್ನು ತಪ್ಪದೇ ಪ್ರಕಟಿಸುತ್ತಿದವು; ಅವೆಲ್ಲಾ ಮೆಚ್ಚತಕ್ಕ ಕ್ರಮಗಳೆಂದು ವೈಭವೀಕರಿಸಿ ವರದಿ ಮಾಡುತ್ತಿದ್ದರು. ಹಾಗೆ ನೋಡಿದರೆ ಮೇಲೆ ವಿವರಿಸಿದ ಕ್ರಮಗಳೆಲ್ಲಾ ಪ್ಲೇಗ್ ನಿಯಂತ್ರಣಕ್ಕೆ ಅವಶ್ಯಕವಾದ ಕಾರ್ಯಗಲೇ ಸರಿ; ಅವಕ್ಕಿಂತ ಬೇರೇನು ಮಾಡಲು ಸಾಧ್ಯ? ಆದರೆ ಪ್ಲೇಗ್ ರೋಗಿಗಳನ್ನು ಕಳುಹಿಸುತ್ತಿದ್ದ ಆಸ್ಪತ್ರೆಗಳು ಮತ್ತು ಬೇರ್ಪಡಿಸುವ ಶಿಬಿರಗಳಿಗೆ ಭೇಟಿ ನೀಡಿ ಕಣ್ಣಾರೆ ಕಂಡವರಿಗೆ ಆ ವ್ಯವಸ್ಥೆಗಳು ಹೇಗಿರುತ್ತಿದ್ದವೆಂಬುದರ ಅರಿವಾಗಬಹುದಿತ್ತು.

''ಕಾರ್ಚ್-ಮಾಂಡೇ ಆಸ್ಪತ್ರೆಯ ಪರಿಸ್ಥಿತಿ ತೀರಾ ಶೋಚನೀಯವಾಗಿತ್ತು. ಚಿಕ್ಕ ಹೋಟೆಲ್ ಒಂದನ್ನು ಆಸ್ಪತ್ರೆಯನ್ನಾಗಿ ಮಾರ್ಪಡಿಸಲಾಗಿತ್ತು; ಅದರಲ್ಲಿ 120-140 ಜನರನ್ನು ಕಿಕ್ಕಿರಿದು ತುಂಬಲಾಗಿತ್ತು; ಪ್ರತಿದಿನ 20-30 ಜನ ಸಾಯುತ್ತಿದ್ದರು. ಸೌಲಭ್ಯಗಳು ತುಂಬಾ ಹಿಂದಿನ ಕಾಲದವಾಗಿದ್ದವು; ಸಿಬ್ಬಂದಿಯಂತೂ ತೀರಾ ಕಡಿಮೆ. ಅಲ್ಲಿದ್ದ ನಾಲ್ಕು ದಾದಿಯರಿಗೆ ಅವರ ಸಾಮರ್ಥ್ಯ ಮೀರುವಷ್ಟು ಕೆಲಸಗಳಿದ್ದವು; ಒಬ್ಬರೇ ವೈದ್ಯರಿದ್ದು ಅವರು ಏನು ಮಾಡಬೇಕೆಂಬುದೇ ತೋಚದ ಸ್ಥಿತಿಯಲ್ಲಿದ್ದರು. ಒಂದು ಹಾಸಿಗೆಯಲ್ಲಿ ಬೆಳಿಗ್ಗೆ ಒಬ್ಬ ಮಲಗಿದ್ದನ್ನು ನೋಡಿದವರಿಗೆ ಸಾಯಂಕಾಲದ ಹೊತ್ತಿಗೆ ಅಲ್ಲಿ ಬೇರೊಬ್ಬನಿರುತ್ತಿದ್ದ. ಅಲ್ಲಿಗೆ ದಾಖಲಾಗುತ್ತಿದ್ದ ರೋಗಿಗಳ ಲೆಕ್ಕವಿಡುವುದಾಗಲೀ, ಅವರನ್ನು ಪರೀಕ್ಷೆ ಮಾಡಿ ಚಿಕಿತ್ಸೆ ಮಾಡುವುದಕ್ಕಾಗಲೀ ಅಸಾಧ್ಯವಾದ ಪರಿಸ್ಥಿತಿ ಇತ್ತು. ಹೃದಯ ವಿದ್ರಾವಕ ನೋವು ನರಳಿಕೆಗಳು ಎಲ್ಲಾ ಕಡೆಗಳಿಂದ ಕೇಳಿ ಬರುತ್ತಿದ್ದವು. ರೋಗಿಗಳ ಬಾಯಿ, ಮೂಗು, ಕಿವಿಗಳ ಸುತ್ತ ನೊಣಗಳು ಮುತ್ತಿಕೊಂಡಿರುತ್ತಿದ್ದವು. ನೋಡಿದವರಿಗೆ ಅದೊಂದು ಮರೆಯಲಾಗದ ದೃಶ್ಯವಾಗಿ ಉಳಿದುಕೊಂಡು ಬಿಡುತ್ತಿದ್ದವು''. ಇದು 1897ರ ಫೆಬ್ರುವರಿಯಲ್ಲಿ ರಷ್ಯಾದ ಸಾಂಕ್ರಾಮಿಕ ರೋಗಶಾಸ್ತ್ರಜ್ಞ ಪ್ರೊ:ವೈಸೋಕೋವಿಚ್ ಕಣ್ಣಾರೆ ಕಂಡ ದೃಶ್ಯದ ವರದಿ.

ಗಟಾಕ್ರೆಯವರು ಬಳಸುತ್ತಿದ್ದ ಕ್ರಿಮಿನಾಶಕಗಳ ಬಗೆಗೆ ವಿಚಿತ್ರವಾದ ಭಾವನೆ ಇಟ್ಟುಕೊಂಡಂತಿತ್ತು. ಕಾರ್ಬಾಲಿಕ್ ಆಸಿಡ್ ಅಥವಾ ಮರ್ಕ್ಯುರಿಕ್ ಕ್ಲೋರೈಡ್‌ಗಳಂಥ ದ್ರವರೂಪದ ಕ್ರಿಮಿನಾಶಕಗಳನ್ನು ಅಗ್ನಿಶಾಮಕ ದಳದವರು ಬಳಸುತ್ತಿದ್ದ ಪೈಪುಗಳ ಮೂಲಕ ಮನೆಗಳೊಳಗಡೆ ಚೆಲ್ಲಿಬಿಡುತ್ತಿದ್ದರೆಂಬುದನ್ನು ರಷ್ಯಾ ಸರ್ಕಾರದವರು ಇಲ್ಲಿಯ ಸಾಂಕ್ರಾಮಿಕವನ್ನು ಅಭ್ಯಾಸ ಮಾಡಿ ವರದಿ ಮಾಡಲು ನೇಮಿಸಿದ್ದ ಡಾ॥ ಲೇವಿನ್ ಅವರು ಬರೆದಿದ್ದರು. ಬಡ ಭಾರತೀಯರ ಗುಡಿಸಲುಗಳಲ್ಲಿ ಯಾವುದೇ ಪೀಠೋಪಕರಣ ಗಳಾಗಲೀ, ಮತ್ತಿತರ ಸಾಮಾನು ಸರಂಜಾಮುಗಳಿರುತ್ತಿರಲಿಲ್ಲ ವಾದುದರಿಂದ ಕ್ರಿಮಿನಾಶಕಗಳನ್ನು ಸಿಂಪಡಿಸುವಲ್ಲಿ ಯಾವ ಅಡೆತಡೆಗಳೂ ಇರುತ್ತಿರಲಿಲ್ಲ. ಹಳ್ಳಿಗಳಲ್ಲಿ ಬಡವರ ಹುಲ್ಲಿನ ಗುಡಿಸಿಲುಗಳ ಮೇಲ್ಚಾವಣಿಗಳನ್ನು ತಳ್ಳಿ ಹಾಕಿ ಅವುಗಳೊಳಗೆ ಬಿಸಿಲು ನೇರವಾಗಿ ಬೀಳುವಂತೆ ಮಾಡಿಬಿಡುತ್ತಿದ್ದರು.

ರಷ್ಯಾದ ಇತಿಹಾಸಕಾರ ನೋವಿಟಸ್ಕಿ ಕಲ್ಕತ್ತಾಕ್ಕೆ ಹೋಗುವ ಮಾರ್ಗದಲ್ಲಿ ಮುಂಬಯಿಗೂ ಭೇಟಿ ನೀಡಿದ್ದರು. ಅಲ್ಲಿಯ ಕೆಲವು ''ಬೇರ್ಪಡಿಸುವ ಶಿಬಿರ'' ಗಳನ್ನು ಸಂದರ್ಶಿಸಿದ್ದರು. ''ಶಿಬಿರಗಳು ಸ್ಥಳೀಯ ಜನರಿಂದ ತುಂಬಿ ತುಳುಕಾಡುತ್ತಿದ್ದವು. ಸುತ್ತಲ ಹಸಿರು ಪರಿಸರದ ನಡುವೆ ತುಂಬಾ ದುಃಖಕರವಾಗಿ ಕಾಣಿಸುತ್ತಿದ್ದವು. ಬೆತ್ತಲಾಗಿದ್ದ ಅರೆಹೊಟ್ಟೆಯ ನೂರಾರು ಭಾರತೀಯರು ಹುಲ್ಲು ಗುಡಿಸಲುಗಳ ಸೂರಿನಡಿಯಲ್ಲಿ ನಲುಗಿ ಆ ಬಂಧನದಿಂದ ಬಿಡಿಸಿಕೊಂಡು ಹೋಗುವುದೆಂತು ಎಂದು ಪರಿತಪಿಸುತ್ತಿದ್ದರು'' ಎಂದು ಬರೆದಿದ್ದರು (1898). ಈ ತರಹೆಯ ಜೈಲುವಾಸ ಮತಿಗೆಟ್ಟಂತೆಯೇ ಅತ್ಯಂತ

ಕ್ರೂರತರವಾಗಿಯೂ ಇತ್ತು. ಅಲ್ಲಿ ಕೂಡಿಹಾಕಿದವರಲ್ಲಿ ಪ್ಲೇಗ್‌ನಿಂದ ನರಳುತ್ತಿದ್ದವರ ಸಂಪರ್ಕ ಹೊಂದಿದವರನೇಕರು ಇದ್ದರು. ಆ ತರಹೆಯ ಶಿಬಿರಗಳಲ್ಲಿ ಜನರು10-11 ದಿನಗಳನ್ನು ಕಳೆಯಬೇಕಾಗುತ್ತಿತ್ತು. ಅಲ್ಲಿಯ ವಾತಾವರಣವನ್ನು ಸಹಿಸಲಾರದೆ ಒಂದು ಸಾರಿ 75 ಜನ ತಪ್ಪಿಸಿಕೊಂಡು ಓಡಿಹೋಗಿದ್ದರು. ಆದರೆ ಅಂತಹ ಪ್ರಕರಣಗಳು ಪದೇ ಪದೇ ಜರುಗುತ್ತಿರಲಿಲ್ಲ; ಭಾರತೀಯರಲ್ಲಿ ಸಾಮಾನ್ಯವಾಗಿದ್ದ ವಿಧೇಯತಾ ಭಾವನೆಯೇ ಅದಕ್ಕೆ ಕಾರಣವೆನ್ನಲಾಗಿತ್ತು. ಆದರೂ ಒಂದೊಂದು ಸಾರಿ ಉಪಾಯದಿಂದಲೋ ಇಲ್ಲವೆ ಆವೇಶದ ಭರಾಟೆಯಿಂದಲೋ ಪ್ರತಿಭಟನೆಗಳಾಗುತ್ತಿದ್ದುದು ಅಪರೂಪವಾಗಿರಲಿಲ್ಲ. ತಪಾಸಣೆ ಮಾಡುತ್ತಿದ್ದ ಸೈನಿಕರ ಹಿಂಸಾಚಾರಗಳನ್ನು ಸಹಿಸಲಾರದೇ ಜನರು ಬ್ರಿಗೇಡಿಯರ್ ಜನರಲ್ಲರಿಗೆ ನೇರವಾಗಿ ತಮ್ಮ ಅಹವಾಲುಗಳನ್ನು ಬರೆದುಕೊಳ್ಳುತ್ತಿದ್ದರು. ಅವರ ವರ್ತನೆಗಳನ್ನು ಪ್ರತಿಭಟಿಸಿ ನಗರದಲ್ಲಿ ಗಲಭೆಗಳುಂಟಾಗುವ ಸಾಧ್ಯತೆಗಳಿದ್ದವು. ಸ್ವತಃ ಬ್ರಿ.ಜ.ಗಟಾಕ್ರೆಯವರೇ ಮಿಲಿಟರಿ ತುಕಡಿಗಳೊಡನೆ ತಪಾಸಣೆಗೆ ಹೋಗುತ್ತಲೂ ಇದ್ದರು. ಆದರೆ 1998ರ ಮಾರ್ಚ್ ಹೊತ್ತಿಗೆ ಬಂದೂಕಿನ ಪಹರೆ ಸಹಾ ಪ್ಲೇಗ್ ಕಂಟ್ರೋಲ್ ಕಮಿಟಿಯವರನ್ನು ರಕ್ಷಿಸುವುದು ಕಷ್ಟವಾಗುವ ಪರಿಸ್ಥಿತಿಯುಂಟಾಯಿತು. ಕೆಲವೇ ದಿನಗಳಲ್ಲಿ ಬಂದರು ಕೆಲಸಗಾರರು, ರೈಲ್ವೇ ನೌಕರರು ಮುಂತಾದವರೆಲ್ಲಾ ಕೆಲಸ ನಿಲ್ಲಿಸಿ ಹರತಾಳ ಆಚರಿಸಿದರು. ಪ್ಲೇಗ್ ಕಂಟ್ರೋಲ್ ಕಮಿಟಿಯವರು ವ್ಯಾಧಿಯನ್ನು ತಡೆಯುವ ಬದಲು ಅದನ್ನು ಹರಡಲು ಸಹಾಯ ಮಾಡುತ್ತಿದ್ದಾರೆಂಬ ಅಭಿಪ್ರಾಯ ಮೂಡಿ ಬರಲಾರಂಭಿಸಿತು. ಅಂಗಡಿ ಮುಂಗಟ್ಟುಗಳವರು ಮತ್ತು ಷಹರಿನ ಇತರ ಕಾರ್ಮಿಕರೂ ಹರತಾಳಕ್ಕೆ ಕೈಗೂಡಿಸಿದರು. ಪರಿಣಾಮವಾಗಿ ಮಹಾನಗರದ ಸಾರಿಗೆ ಸಂಪರ್ಕ ಮತ್ತು ವ್ಯಾಪಾರ ವಹಿವಾಟುಗಳು ಸ್ಥಗಿತವಾದವು. ಕೂಲಿ ಕಾರ್ಮಿಕವರ್ಗದವರು ಕೆಲಸಗಳಲ್ಲಿ ಮಗ್ನರಾಗಿರುವಾಗ ಅವರ ಮನೆಯವರು ಮತ್ತು ಸಂಬಂಧಿಕರನ್ನು ಮನೆಗಳಿಂದ ಹೊರಡಿಸಿ ಬೇರ್ಪಡಿಸುವ ಶಿಬಿರಗಳಲ್ಲಿ ಕೂಡಿಹಾಕುತ್ತಿದ್ದರು; ಹಾಗೂ ಅವರ ಮನೆಮಠಗಳನ್ನು ಧ್ವಂಸ ಮಾಡುತ್ತಿರುವ ದೂರುಗಳು ಬರುತ್ತಿರುವುದಾಗಿ **ಟೈಮ್ಸ್ ಆಫ್ ಇಂಡಿಯಾ** ಪತ್ರಿಕೆ ವರದಿ ಮಾಡಿತು. ಆದರೆ ಸರ್ಕಾರದವರ ದಬ್ಬಾಳಿಕೆ ಮುಂದುವರಿಯಿತು. ಫುರ್‌ನ್‌ಕರ್ ಎಂಬಲ್ಲಿ ನಡೆದ ಗಲಭೆಯಲ್ಲಿ ನಡೆದ ಗೋಲಿಬಾರ್‌ನಲ್ಲಿ ಎಂಟು ಜನ ಸತ್ತರು; ಇಪ್ಪತ್ತೇಳು ಜನರಿಗೆ ಗಾಯವಾಯಿತು. ಬೆಂಗಾಲ್ ಎಂಬ ಹಳ್ಳಿಯ ರೈತರನ್ನು ಮುಂಜಾಗ್ರತಾ ಕ್ರಮವಾಗಿ ಪುಟ್ಟ ಮನೆಯೊಂದರಲ್ಲಿ ಕೂಡಿ ಹಾಕಿದ್ದರು; ಶಿಬಿರದ ಜೀವನ ಕ್ರಮ ಮತ್ತು ಬಿಸಿಯಾದ ಹವಾಮಾನವನ್ನು ತಾಳಲಾರದೆ ಅವರು ದಂಗೆಯೆದ್ದಿದ್ದರು.

ಇದೀಗ ಹಾಫ್‌ಕಿನ್ನರು ಆಗಿನ ಪರಿಸ್ಥಿತಿ ಬಗೆಗೆ ಏನು ಮಾಡುತ್ತಿದ್ದರು ಹಾಗೂ ಅವರ ಅನಿಸಿಕೆಗಳು ಏನು ಎಂಬುದರ ಬಗೆಗೆ ತಿಳಿಯಲು ಪ್ರಯತ್ನಿಸೋಣ:

ಬ್ರಿಗೇಡಿಯರ್ ಜನರಲ್ ಗಟಾಕ್ರೆ ಪ್ರತಿದಿನ ಏರ್ಪಡಿಸುತ್ತಿದ್ದ ಸಭೆಗಳಿಗೆ ಹಾಫ್‌ಕಿನ್ ಹಾಜರಾಗುತ್ತಿದ್ದರು. ಅಲ್ಲಿಯ ಅವರ ನಡೆವಳಿಕೆಗಳನ್ನು ಗಮನಿಸುತ್ತಿದ್ದಾಗ

''ಅರವತ್ತು ವರುಷ ತಲುಪಿದ ಎಲ್ಲಾ ವಿಜ್ಞಾನಿಗಳು ಸತ್ತರೆ ಅದೆಷ್ಟೋ ಒಳ್ಳೆಯದಾಗುತ್ತದೆ. ಅಷ್ಟು ವಯಸ್ಸಿನವರೆಲ್ಲಾ ಯಾವುದೇ ಹೊಸ ಸಿದ್ಧಾಂತಗಳನ್ನು ವಿರೋಧಿಸುವ ಸ್ವಭಾವದವರಾಗಿರುತ್ತಾರೆ'' ಎಂದು ಚಾರ್ಲ್ಸ್ ಡಾರ್ವಿನ್ ಹೇಳಿದುದು ಜ್ಞಾಪಕಕ್ಕೆ ಬರುತ್ತಿತ್ತಂತೆ. ಆ ಸಮಯದಲ್ಲಿ ಗಟಾಕ್ರೆ ಎಲ್ಲದರಲ್ಲೂ ಹುಳುಕು ಹುಡುಕುವ ಮನೋಭಾವದ ವಯಸ್ಸಿಗೆ ಸಮೀಪಿಸಿದ್ದರು. ಪ್ಲೇಗ್ ಕಂಟ್ರೋಲ್ ಕಮಿಟಿಯ ಅಧ್ಯಕ್ಷರಾಗಿದ್ದರೂ ಅವರೇನೂ ವಿಜ್ಞಾನಿಯಾಗಿರಲಿಲ್ಲ; ಅವರು ಕಮಿಟಿಯ ಅಧ್ಯಕ್ಷರಾಗಿ ವಿಶಾಲ ಅಧಿಕಾರ ಹೊಂದಿದ್ದು ಅವರಿಗೆ ತಿಳಿಯದ ವಿಷಯಗಳೇ ಇರಲಿಲ್ಲವೆಂದು ಯೋಚಿಸುತ್ತಿದ್ದರು. ಪ್ಲೇಗ್ ವ್ಯಾಧಿಯ ಬಗೆಗೆ ವೈದ್ಯರು, ಜೀವಶಾಸ್ತ್ರಜ್ಞರಿಗಿಂತ ತಮಗೆ ಹೆಚ್ಚಿನ ಪರಿಣತಿ ಇದ್ದವರ ಹಾಗೆ ವರ್ತಿಸುತ್ತಿದ್ದರು. ಪ್ಲೇಗ್ ನಿರೋಧಕ ವ್ಯಾಕ್ಸೀನನ್ನು ಕಂಡು ಹಿಡಿದ ಹಾಫ್‌ಕಿನ್ನರ ಜೊತೆ ಚರ್ಚಿಸುವುದು ಅವರ ಅಂತಸ್ಥಿಗೆ ಕಡಿಮೆಯೆಂದು ಭಾವಿಸಿದ್ದರು. ಅಲ್ಲದೆ ಅದರ ನಿರೋಧಕ್ಕಾಗಿ ವ್ಯಾಕ್ಸೀನ್ ನೀಡುವುದು ಭಾರತದಲ್ಲಿ ಫಕೀರರು ಮಂತ್ರತಂತ್ರಗಳಿಂದ ಮಾಡುವ ಮೋಸದ ಕಾರ್ಯವೆಂಬ ಅನಿಸಿಕೆ ಅವರದಾಗಿತ್ತಂತೆ. ಪ್ಲೇಗ್ ರೋಗಿಗಳಿದ್ದ ವಸತಿಗಳ ಗೋಡೆ ಮತ್ತು ನೆಲವನ್ನು ಕಾರ್ಬಾಲಿಕ್ ಆಸಿಡ್ ಅಥವಾ ಮರ್ಕ್ಯುರಿಕ್ ಕ್ಲೋರೈಡ್‌ಗಳಂಥ ಕ್ರಿಮಿನಾಶಕಗಳಿಂದ ಒದ್ದೆ ಮಾಡುವುದೇ ಪ್ಲೇಗನ್ನು ಅಂತಿಮವಾಗಿ ವಿನಾಶಮಾಡುವ ಕ್ರಮ ಎನ್ನುವುದು ಗಟಾಕ್ರೆಯವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಸಂಕ್ಷಿಪ್ತವಾಗಿ ಹೇಳಬಹುದಾದರೆ ಮುಂಬಯಿಯ ಆ ಗ್ಯಾರಿಸನ್ ಕಮಾಂಡರ್‌ಗೆ ಪ್ಲೇಗಿನ ವಿರುದ್ಧ ಜಯಗಳಿಸುವುದೆಂದರೆ ಯುದ್ಧ ಭೂಮಿಯಲ್ಲಿ ಸಿಪಾಯಿಗಳ ಕಾರ್ಯಾಚರಣೆಯಂತೆ; ಅದಕ್ಕಾಗಿ ಅವರು ಬಳಸುತ್ತಿದ್ದ ಕಾರ್ಬಾಲಿಕ್ ಆಸಿಡ್‌ನ ಕ್ಯಾನ್‌ಗಳ ಸಂಖ್ಯೆಯನ್ನು ಅದು ಅವಲಂಭಿಸುತ್ತಿತ್ತು!

ಹಾಫ್‌ಕಿನ್ನರ ಅಭಿಪ್ರಾಯಗಳು ಸ್ವಾಭಾವಿಕವಾಗಿ ಅದಕ್ಕೆ ತದ್ವಿರುದ್ಧವಾದವು; ಹಾಗಾಗಿ ಅವರಿಬ್ಬರ ನಡುವೆ ಸ್ನೇಹ ಸಂಬಂಧಗಳು ಉಂಟಾಗಲೇ ಇಲ್ಲ. ಭಾರತದಲ್ಲಿ ಆಗಾಗ್ಗೆ ಉದ್ಭವಿಸುವ ಪ್ಲೇಗ್ ಸಾಂಕ್ರಾಮಿಕ ಆಳ-ವಿಸ್ತಾರಗಳನ್ನು ಹದ್ದುಬಸ್ತಿನಲ್ಲಿಡು ವುದಾಗಲೀ, ಅದರ ಹರಡುವಿಕೆಯನ್ನು ಸೀಮಿತಗೊಳಿಸಿ, ಅದನ್ನು ಬುಡದಲ್ಲೇ ವಿನಾಶ ಮಾಡುವುದು ಸಾಧ್ಯವಿಲ್ಲದ ಸಾಹಸವೆಂಬ ಅಭಿಪ್ರಾಯ 1896ರ ಶರತ್ಕಾಲದ ಹೊತ್ತಿಗೆ ಹಾಫ್‌ಕಿನ್ನರಿಗೆ ಅರಿವಾಗತೊಡಗಿತ್ತು. ಪ್ಲೇಗ್ ಬ್ಯಾಸಿಲೈಗಳ ವರ್ತನೆ ಅವರಲ್ಲಿ ಅಂತಹ ಅಭಿಪ್ರಾಯ ಮೂಡುವುದಕ್ಕೆ ಕಾರಣವಾಗಿರಬಹುದು. ಮೈಲಿ ಬೇನೆ. ರೇಬೀಸ್‌ಗಳಿಗೆ ಕಾರಣವಾದ ಮಿಣಿ ಜೀವಿಗಳ ಸ್ವಭಾವದ ತದ್ವಿರುದ್ಧವಾಗಿ ಪ್ಲೇಗ್ ಬ್ಯಾಸಿಲೈಗಳು ಸೋಂಕು ತಗುಲಿದ ಮನುಷ್ಯನಲ್ಲೇ ಅಲ್ಲದೆ, ಅವನನ್ನು ಸುತ್ತುವರಿದ ನೆಲ, ಕಟ್ಟಡಗಳು ಹಾಗೂ ಇತರ ಕೆಲವು ಪ್ರಾಣಿ ಮತ್ತು ಕೀಟಗಳಲ್ಲೂ ಜೀವಂತವಾಗಿರ ಬಲ್ಲವಾಗಿದ್ದವು.

ಆದುದರಿಂದ ಅಷ್ಟೊಂದು ಜನಭರಿತ ಮುಂಬಯಿಯಂಥ ಮಹಾನಗರದಲ್ಲಿ ಪ್ಲೇಗಿನ ವಿರುದ್ಧ ಮುಖಾಮುಖಿಯಾಗಿ ಹೋರಾಟಕ್ಕಿಳಿಯುವುದು ಅವಿವೇಕದ

ಮಾರ್ಗವಾಗುತ್ತಿತ್ತು; ಆದರೆ ಜನರಲ್ಲಿ ಪ್ಲೇಗ್ ಸೋಂಕು ಅಂಟದಂತೆ ಕಾರ್ಯಕ್ರಮಗಳನ್ನು ಜರುಗಿಸುವುದೇ ವಿವೇಕಯುತಮಾರ್ಗವೆಂಬುದು ಹಾಫ್‌ಕಿನ್ನರ ಅಭಿಮತವಾಗಿತ್ತು. ತಮ್ಮ ಈ ವಾದವನ್ನು ಜನಪ್ರಿಯಗೊಳಿಸಲು ಮುಂಬಯಿ ಮತ್ತು ಅದರ ಸರಹದ್ದಿನ ಊರುಗಳಲ್ಲಿ ಪ್ಲೇಗ್ ನಿರೋಧಕ ಕ್ರಮಗಳು ಹೇಗೆ ಕಾರ್ಯ ನಿರ್ವಹಿಸುತ್ತದೆಂಬುದರ ಬಗೆಗೆ ಹಲವು ಜನಪ್ರಿಯ ಭಾಷಣಗಳನ್ನು ಮಾಡುತ್ತಿದ್ದರು. ಅವರ ವಾದಗಳ ಸರಣಿ ತುಂಬಾ ಅರ್ಥಗರ್ಭಿತ ಆದರೂ ಸರಳವಾಗಿರುತ್ತಿದ್ದವು.

''ಪ್ರಕೃತಿಯಲ್ಲಿ ಹತೋಟಿಗೆ ತರಲಾಗದ ಹಲವಾರು ಸಂಗತಿಗಳಿರುತ್ತವೆ. ಅವಕ್ಕೆ ನಾವೇನೂ ಮಾಡಲಾರೆವು; ಆದರೆ ಅವುಗಳಿಂದ ನಾವು ದೂರವಿರಲು ಸಾಧ್ಯ; ಇಲ್ಲವೆ ವೈಯಕ್ತಿಕವಾಗಿ ಅವುಗಳಿಂದ ರಕ್ಷಣೆ ಪಡೆದುಕೊಳ್ಳಬಹುದು. ಉದಾಹರಣೆಗೆ ಭಾರತದಲ್ಲಿ ಅತಿ ಹೆಚ್ಚಾಗಿ ರುವ ಬಿಸಿ ಹವಾಮಾನವನ್ನು ಹತೋಟಿಗೆ ತರುವುದು ಅಸಾಧ್ಯದ ಕೆಲಸ. ಆದರೆ ಕೆಲವರಾದರೂ ಗಿರಿಧಾಮಗಳಿಗೆ ಹೋಗಿ ಕೆಲ ಸಮಯ ಬಿಸಿಲಿನ ಬೇಗೆಯಿಂದ ದೂರವಿರಬಹುದು; ಹಾಗೆ ಹೋಗಲು ಸಾಧ್ಯವಿಲ್ಲದವರು ಬೀಸಣಿಗೆಗಳನ್ನು ಬಳಸಿಕೊಳ್ಳ ಬಹುದಷ್ಟೆ. ಅದೇ ರೀತಿ ಮಲೇರಿಯಾದಿಂದ ವಿಮುಕ್ತಿ ಪಡೆಯಲು ಪ್ರಕೃತಿ ಯಲ್ಲಿನ ಎಲ್ಲಾ ಸೊಳ್ಳೆಗಳನ್ನು ನಾಶ ಮಾಡಲು ಸಾಧ್ಯವಿಲ್ಲ; ಆದರೆ ವೈಯಕ್ತಿಕವಾಗಿ ಸೊಳ್ಳೆ ಪರದೆಗಳನ್ನು ಕಟ್ಟಿಕೊಂಡು ಅವುಗಳ ಕಾಟದಿಂದ ತಪ್ಪಿಸಿಕೊಳ್ಳಬಹುದಲ್ಲವೇ'' ಎಂಬುದು ಅವರ ಪ್ರಚಾರ ಭಾಷಣಗಳ ವೈಖರಿಯಾಗಿರುತ್ತಿತ್ತು. ಈ ತರಹೆಯ ಸಾಮಿತಿಗಳಿಂದ ಅನಕ್ಷರಸ್ಥರೇ ಅಲ್ಲದೆ ವಿಜ್ಞಾನದ ಬಗೆಗೆ ಅರಿವಿಲ್ಲದವರೂ ಸಹಾ, ಪ್ಲೇಗ್ ಇನಾಕ್ಯುಲೇಷನ್ ಮಾಡು ವುದರ ಹಿಂದೆ ಅಡಗಿದ್ದ ಮೂಲ ತತ್ವಗಳನ್ನು ಅರ್ಥಮಾಡಿಕೊಳ್ಳಬಹುದಾಗಿತ್ತು. ದುರದೃಷ್ಟಕರ ಸಂಗತಿಯೆಂದರೆ ಬ್ರಿ.ಜ.ಗಟಾಕ್ರೆ ಇಂತಹ ವಾದಗಳನ್ನು ಪುರಸ್ಕರಿಸುವ ವರಾಗಿರಲಿಲ್ಲ; ಇಲ್ಲವೆ ಇತರರ ಹಿತವಚನಗಳಿಗೆ ಕಿವಿಗೊಡುವವರೂ ಆಗಿರಲ್ಲಿ. ಬಂದೂಕುಧಾರಿ ಸಿಪಾಯಿಗಳನ್ನು ಪ್ಲೇಗ್ ಪೀಡಿತರಾದವರ ವಠಾರಗಳಿಗೆ ಕಳುಹಿಸು ವುದನ್ನು ಮುಂದುವರಿಸುತ್ತಲೇ ಇದ್ದರು. ಜೊತೆಗೆ ಇಡೀ ಮುಂಬಯಿ ನಗರವನ್ನು ''ಶುದ್ಧೀಕರಿಸುವ'' ಸಲುವಾಗಿ ರಸ್ತೆಗಳ ನಡುವೆ ಗಂಧಕವನ್ನು ರಾಶಿ ಹಾಕಿ ಬೆಂಕಿ ಹೊತ್ತಿಸಿ ಹೊಗೆಯಾಡುವಂತೆ ಮಾಡುತ್ತಿದ್ದರು; ಕೆಲ ಸಾರಿ ಇಡೀ ನಗರವೇ ಧೂಮಮಯವಾಗಿ ಬಿಡುತ್ತಿತ್ತು!

ಹಿಂದೊಂದು ಕಾಲದಲ್ಲಿ ತರಬೇತಿ ಪಡೆದುಕೊಂಡಿದ್ದ ವೈದ್ಯರು ನಿರಾಶಾಜನಕ ಸ್ಥಿತಿಯಲ್ಲಿದ್ದ ಕೆಲವು ರೋಗಿಗಳ ದೇಹದ ಮೇಲೆ ಕೆಂಪುಬಣ್ಣದ ಗುಲಾಬಿ ನೀರನ್ನು ಚುಮುಕಿಸುವ ರೂಢಿಯನ್ನಿಟ್ಟುಕೊಂಡಿದ್ದರು. ಅಂದರೆ ಅವರೆಲ್ಲಾ ಸಾಯುತ್ತಾರೆಂದರ್ಥ. ಬಹುಶಃ ಹಾಫ್‌ಕಿನ್ನರು ಅಂತಹ ಒಬ್ಬ ತರಬೇತು ಪಡೆದುಕೊಂಡಿದ್ದ ವೈದ್ಯರಾಗಿದ್ದರೆ ಮುಂಬಯಿಯ ಬ್ರಿಟಿಷ್ ಅಧಿಕಾರಿಗಳಿಗೆ ಅಂತಹ ಕ್ರಮವನ್ನು ಸೂಚಿಸುತ್ತಿದ್ದರೋ ಏನೋ; ಆದರೆ ಆ ರೀತಿಯ ವೈದ್ಯರಾಗಿರದಿದ್ದರೂ, ಕೇವಲ ನೈರ್ಮಲ್ಯದ ನಿಯಮಗಳನ್ನು

ಅನುಸರಿಸುವುದರಿಂದ ಪ್ಲೇಗನ್ನು ಹತೋಟಿಗೆ ತರಲು ಸಾಧ್ಯವಿಲ್ಲವೆಂಬುದರ ಅರಿವು ಅವರಿಗಿತ್ತು.

ಮುಂಬಯಿಯ ಪೌರಾಡಳಿತ ಅಧಿಕಾರಿಗಳ ಆಹ್ವಾನದ ಮೇರೆಗೆ (ಪ್ಲೇಗ್ ಕಂಟ್ರೋಲ್ ಕಮಿಟಿ ಅಸ್ತಿತ್ವಕ್ಕೆ ಬರುವ ಮೊದಲು) ಹಾಫ್‌ಕಿನ್ನರು ಮಾಂಡಾವಿ ಪ್ರದೇಶನ್ನು ಭೇಟಿಮಾಡಿದ್ದರು. ಅಲ್ಲಿ ಬಡವರ್ಗದ ಜನರಿಗಾಗಿ ಕಟ್ಟಿಸಿದ್ದ ಒಂದು ಬಹು ಮಹಡಿ ಕಟ್ಟಡಕ್ಕೆ ಅವರನ್ನು ಕೊಂಡೊಯ್ದಿದ್ದರು. ಸುಮಾರು 30 ಘನ ಅಡಿಗಳ ಕೊಠಡಿಗಳಲ್ಲಿ 8-10 ಜನರ ಕುಟುಂಬದವರು ವಾಸಿಸುತ್ತಿದ್ದರು. ಪ್ರತಿಯೊಂದು ಕೊಠಡಿಗೂ ಬಾಗಿಲೊಂದನ್ನು ಬಿಟ್ಟರೆ, ಗಾಳಿ ಬೆಳಕು ಬರಲು ಕಿಟಕಿಗಳಾಗಲೀ, ಗವಾಕ್ಷಿಗಳಾಗಲೀ ಇರಲಿಲ್ಲ. ಅಡಿಗೆ ಊಟಗಳೂ ಸಹಾ ಅಲ್ಲೇ ಮಾಡಿಕೊಳ್ಳಬೇಕಾಗಿತ್ತು. ಶೌಚಕರ್ಮಾಧಿಗಳಿಗೆ ಒಂದೊಂದು ಮಹಡಿಯಲ್ಲಿದ್ದವರಿಗೆಲ್ಲಾ ಒಂದೇ ಕಡೆ ಏರ್ಪಾಡು ಮಾಡಲಾಗಿತ್ತು. ಗಾಳಿಬೆಳಕುಗಳಿಲ್ಲದ ಉಸಿರು ಕಟ್ಟಿಸುವ ವಾತಾವರಣದಲ್ಲಿ ಜನ ಹೇಗೆ ವಾಸಮಾಡುತಿದ್ದರೋ ಹೇಳಲಾಗದು. ಅಲ್ಲಿ ಪ್ಲೇಗೇ ಏಕೆ, ಇತರ ರೋಗ ರುಜಿನಗಳಿಗೂ ಕೈ ಬೀಸಿ ಕರೆಯುವಂತ್ತಿತ್ತು. ಆ ಕಟ್ಟಡದಲ್ಲೂ ಅಲ್ಲದೆ ಅದರ ಸಮೀಪದಲ್ಲೇ ಅಂತಹದೇ ಒಂದು ಸಾವಿರಕ್ಕಿಂತಲೂ ಹೆಚ್ಚು ಜನರು ವಾಸಿಸುತ್ತಿದ್ದ ಇನ್ನೊಂದರಲ್ಲೂ ಸಹ ಹಲವಾರು ಪ್ಲೇಗ್ ಪ್ರಕರಣಗಳು ವರದಿಯಾಗಿದ್ದವು. ಇಂತಹ ಪರಿಸರದಲ್ಲಿ ಪ್ಲೇಗು ಮತ್ತಿತರ ರೋಗಗಳು ಉದ್ಭವ ವಾಗುವುದನ್ನು ತಡೆಗಟ್ಟುವುದು ಅಷ್ಟೇನೂ ಸುಲಭ ಸಾಧ್ಯವಿಲ್ಲ ವೆಂಬುದನ್ನು ಮನಗಂಡ ಹಾಫ್‌ಕಿನ್ನರು ಪೌರಾಡಳಿತದವರು ಕೈಗೊಳ್ಳುತ್ತಿದ್ದ ಗಂಧಕವನ್ನು ಸುಡುವ ಕಾರ್ಯಕ್ರಮವೂ ಸೇರಿದಂತೆ, ಅವರ ಎಲ್ಲಾ ಯೋಜನೆಗಳಿಗೆ ಸಮ್ಮತಿಸದೆ ಗತ್ಯಂತರವಿರಲಿಲ್ಲ. ಅಂತಹ ಕ್ರಮಗಳಿಂದ ಮುಂಬಯಿ ನಗರದಲ್ಲಿ ಪ್ಲೇಗನ್ನು ತಡೆಗಟ್ಟ ಲಾಗದೆಂದು ಸಾಧಿಸುವುದಕ್ಕೆ ಮುಂದೆ ಅನುಕೂಲವಾಯಿತು.

ಮುಂಬಯಿಯ ಪೌರಾಡಳಿತದವರು ಜಾರಿಗೊಳಿಸುತ್ತಿದ್ದ ನೈರ್ಮಲ್ಯ ಕ್ರಮಗಳನ್ನು ವಿರೋಧಿಸದಿರುವುದಕ್ಕೆ ಮತ್ತೂ ಒಂದು ಕಾರಣವಿತ್ತು. ವೈಜ್ಞಾನಿಕವಾಗಿ ದೃಢಪಡಿಸಿದ ಸಿದ್ಧಾಂತಗಳ ಬಗೆಗೆ ರಾಜೀಮನೋಭಾವ ಹೊಂದಿರದ ಹಾಫ್‌ಕಿನ್ನರು ತಾವು ತಯಾರಿಸಿದ ವ್ಯಾಕ್ಸೀನಿನ ಪರಿಣಾಮವನ್ನು ಶ್ರುತಪಡಿಸಲು  ಯಾವುದೇ ಅಡಚಣೆಗಳಾಗದಂತೆ ನೋಡಿಕೊಳ್ಳುವ ಧೋರಣೆ ಅವರದಾಗಿತ್ತು. ವ್ಯಾಕ್ಸೀನಿನ ಕಾರ್ಯಕ್ಷಮತೆ ಕಂಡುಕೊಳ್ಳಲು ಮುಂಬಯಿಯಲ್ಲಿ 8200 ಜನರಿಗೆ ಯಶಸ್ವಿಯಾಗಿ ವ್ಯಾಕ್ಸೀನ್ ನೀಡಿದ್ದರೂ ಅದರ ಬಗೆಗೆ ಅಪನಂಬಿಕೆ ಇದ್ದೇ ಇತ್ತು. ಅವರು ತಾವೇ ಸ್ವತಃ ಕಣ್ಣಾರೆ ನೋಡಿದ್ದರೂ ಕೆಲ ಸಾರಿ ಅವುಗಳನ್ನು ನಂಬುವವರಲ್ಲ. ಬೈಕುಲ್ಲಾದ ಜೈಲಿನಲ್ಲಿ ಕೈದಿಗಳಿಗೆ ಯಶಸ್ವಿಯಾಗಿ ಇನಾಕ್ಯುಲೇಷನ್ ಮಾಡಿದ ನಂತರ ಹಾಗೂ ಮುಂಬಯಿ ಷಹರದಲ್ಲೂ 8200 ಜನರಿಗೆ ಇನಾಕ್ಯುಲೇಷನ್ ಜರುಗಿಸಿದ ಮೇಲೂ ಅವರಲ್ಲಿ ಅನುಮಾನಗಳಿಲ್ಲದಿರಲಿಲ್ಲ. ಮುಂದೆ ಹಲವಾರು ವೈದ್ಯರಿಗೆ ಇನಾಕ್ಯುಲೇಷನ್ ಮಾಡುವ ವಿಧಾನವನ್ನು ಮನದಟ್ಟು

ಮಾಡಿಕೊಟ್ಟದ್ದರಲ್ಲದೆ ಅವರ ಪ್ರಯೋಗಾಲಯದಿಂದ ಇನಾಕ್ಯುಲೇಷನ್ ಸಾಮಾಗ್ರಿಗಳನ್ನು ಅವರಿಗೆಲ್ಲಾ ಸತತವಾಗಿ ಸರಬರಾಜು ಮಾಡುತ್ತಲೂ ಇದ್ದರು. ಆದರೂ ಹಾಫ್‌ಕಿನ್ ಬ್ರಿ.ಜ.ಗಟಾಕ್ರೆ ಮತ್ತವರ ಅಧಿಕಾರಶಾಹಿಯವರೊಡನೆ ವಾದವಿವಾದಕ್ಕೆಡೆ ಮಾಡಿಕೊಡುತ್ತಿರಲಿಲ್ಲ; ಆದರೆ ಅದೇನು ಹೇಡಿತನದಿಂದಲ್ಲ. ಮುಂದಿನ ಆರೇ ತಿಂಗಳಲ್ಲಿ ಗಟಾಕ್ರೆಯವರ ''ಗುಲಾಬಿ ನೀರು ಚುಮುಕಿಸು''ವಂಥ ಬಾಲಿಷ ಯೋಜನೆಗಳನ್ನು ಪ್ರಬಲವಾಗಿ ವಿರೋಧಿಸತೊಡಗಿದರು. ಆ ಸಯಮದಲ್ಲಿ ಹಾಪ್‌ಕಿನ್ನರ ಸಿದ್ಧಾಂತ ಮತ್ತು ಯೋಜನೆಗಳನ್ನು ಬೆಂಬಲಿಸಿ ಮಾತನಾಡಬಲ್ಲ ಯೋಗ್ಯ ಮಿಣಜೀವಿ ಶಾಸ್ತ್ರಜ್ಞರು ಯಾರೂ ಮುಂಬಯಿಯಲ್ಲಿರಲಿಲ್ಲ; ಅಂತಹರೊಬ್ಬ ನೈತಿಕ ಬೆಂಬಲದ ಅವಶ್ಯಕತೆ ಅವರಿಗಿತ್ತು. ಆ ಶರತ್ಕಾಲದಲ್ಲಿ ತಡವಾದರೂ ಅಂತಹ ಪ್ರೋತ್ಸಾಹದ ಮಾತುಗಳು ಬಂದೇ ಬಿಟ್ಟವು;ಅದರ ವಿಶೇಷವೆಂದರೆ ಅಂತಹ ಮೆಚ್ಚಿಗೆಯ ನುಡಿಗಳು ಕೇಳಿಬಂದುದು ರಷ್ಯನ್ ಭಾಷಿಕರಿಂದ!

ಪ್ರಪಂಚದ ಕೆಲವು ದೇಶಗಳಿಂದ ಮುಂಬಯಿಯಲ್ಲಿ ಪ್ಲೇಗಿನುಂಟಾಗುತ್ತಿದ್ದ ಹಾವಳಿಯನ್ನು ಅಭ್ಯಾಸಮಾಡಲು 1897ರಲ್ಲಿ ತಜ್ಞರ ತಂಡಗಳು ಬರುತ್ತಿದ್ದವು. ಜರ್ಮನಿ, ಇಟಲಿ, ಫ್ರಾನ್ಸ್ ಮತ್ತು ರಷ್ಯಾಗಳಲ್ಲಿ ಆಗ ಪ್ಲೇಗ್ ಧಾಳಿಯು ಒಂದಲ್ಲ ಒಂದು ಬಂದರಿನ ಮೂಲಕ ಆಗಬಹುದೆಂಬ ನಿರೀಕ್ಷೆ ಇತ್ತು. ಅವರಿಗೆಲ್ಲಾ ಭಾರತದಲ್ಲಿ ಪ್ಲೇಗ್ ಸಾಂಕ್ರಾಮಿಕವನ್ನು ತಡೆಗಟ್ಟಲು ತೆಗೆದುಕೊಳ್ಳುತ್ತಿರುವ ಎಲ್ಲಾ ಕ್ರಮಗಳ ಬಗೆಗೆ ಸಂಪೂರ್ಣ ಮಾಹಿತಿ ಪಡೆದುಕೊಂಡು ಬರುವಂತೆ ತಿಳಿಸಲಾಗಿರುತ್ತಿತ್ತು.

## ತಜ್ಞತಂಡದವರ ಮನ್ನಣೆ

ಮಾರ್ಚ್ (1897) ತಿಂಗಳಲ್ಲಿ ರಷ್ಯಾದಿಂದ ಮೂರು ಜನ ಪ್ಲೇಗ್ ಪರಿಣತರು ಮುಂಬಯಿಗೆ ಆಗಮಿಸಿದರು. ಅವರಲ್ಲಿ ವೈಸ್ಕೊವಿಚ್, (ಖಾರ್‌ಕೋವನ ಪ್ರಾಧ್ಯಾಪಕರು) ಮತ್ತು ಜಾಬೋಲೋಟ್ನಿ ಮುಂಬಯಿ ತಲುಪಿದ ದಿನವೇ ಹಾಫ್‌ಕಿನ್ನರ ಪ್ರಯೋಗಾಲಯಕ್ಕೆ ಭೇಟಿ ನೀಡಿದರು. ಹತ್ತು ವರ್ಷಗಳ ನಂತರ ತಮ್ಮ ಸ್ವದೇಶ ಬಾಂಧವರೊಡನಾದ ಸಮಾಗಮ ಅವರಲ್ಲಿ ಮರೆಯಲಾಗದ ಅನುಭವವನ್ನುಂಟು ಮಾಡಿತು. ಮಿತ ಭಾಷಿ ಮತ್ತು ಅಂತರ್ಮುಖಿಯಾಗಿರುತ್ತಿದ್ದ ಹಾಫ್‌ಕಿನ್ ಸ್ವದೇಶ ಬಾಂಧವರನ್ನು ಸಂಧಿಸಿದಾಗ (ಅವರೆಲ್ಲರೂ ಉಕ್ರೇನ್ ಪ್ರಾಂತ್ಯದವರು) ಅವರಿಗಂಟಾದ ಆನಂದವನ್ನು ಮುಚ್ಚಿಡಲಾರ ದಾದರು. ಅದೇ ಮೊದಲ ಬಾರಿಗೆ ಗ್ರ್ಯಾಂಟ್ ಮೆಡಿಕಲ್ ಕಾಲೇಜಿನ ಆವರಣದಲ್ಲಿ ರಷ್ಯನ್ ಮುತ್ತ ಉಕ್ರೇನ್ ಭಾಷೆಗಳ ಕಲರವ ಕೇಳಿ ಬರುವಂತಾಯಿತು. ರಷ್ಯನ್ ಭಾಷೆಯಲ್ಲಿ ಅವರ ಮೂಲ ಹೆಸರಿನಿಂದ ವ್ಲಾದಿಮಿರ್ ಆರೋನೋವಿಚ್ ಎಂದು ಸಂಬೋಧಿಸುತ್ತಿದ್ದು ಹಾಫ್‌ಕಿನ್ನರು ಪುಲಕಗೊಳ್ಳುವಂತೆ ಮಾಡಿತಂತೆ. ರಷ್ಯಾದ ತಂಡದವರಿಗೆ ಪ್ರಯೋಗಾಲಯದಲ್ಲಿ ಹಾರ್ದಿಕ ಸ್ವಾಗತ ದೊರೆಯಿತು. ವೈಸ್ಕೋವಿಚ್ ಮತ್ತು ಜಾಬೋಲೋಟ್ನಿಯವರಿಗೆ ಭಾರತದಲ್ಲಿನ ಪ್ಲೇಗ್ ಸಾಂಕ್ರಾಮಿಕದ ಸ್ವಭಾವ, ಅನುಸರಿಸುತ್ತಿರುವ ಚಿಕಿತ್ಸಾ ವಿಧಾನಗಳು ಮತ್ತು ತೆಗೆದುಕೊಳ್ಳುತ್ತಿರುವ ತಡೆಗಟ್ಟುವ ಕ್ರಮಗಳ

ಬಗೆಗೆ ಎಲ್ಲಾ ಮಾಹಿತಿಗಳನ್ನು ಒದಗಿಸ ಲಾಯಿತು. ಅವರು ಪ್ಲೇಗ್ ವ್ಯಾಕ್ಸೀನಿನ ಸತ್ವವನ್ನು ಪರೀಕ್ಷಿಸುವ ಇಂಗಿತವನ್ನು ವ್ಯಕ್ತಪಡಿಸಿದಾಗ ಮುಂಬಯಿಯ ಅತಿ ದೊಡ್ಡ ಹಾಗೂ ಆಧುನಿಕ ಆಸ್ಪತ್ರೆಯೊಂದರಲ್ಲಿ ಅದು ಜರುಗುವ ಏರ್ಪಾಡು ಮಾಡಿದರು.

ಸ್ವದೇಶ ಬಾಂಧವನ ಮೇಲೆ ಒಳ್ಳೆಯ ಸ್ನೇಹಮಯ ಭಾವನೆಗಳಿದ್ದರೂ ರಷ್ಯಾದ ಪ್ಲೇಗ್ ಪರಿಣಿತರು ವ್ಯಾಕ್ಸೀನಿನ ಬಗೆಗೆ ತಮಗಿದ್ದ ಅನುಮಾನಗಳನ್ನು ವ್ಯಕ್ತಪಡಿಸಲು ಹಿಂಜರಿಯಲಿಲ್ಲ. ಅಷ್ಟರಲ್ಲೇ ವ್ಯಾಕ್ಸೀನನ್ನು ''ಹಾಫ್‌ಕಿನ್ನರ ಲಿಂಫ್'' ಎಂದು ಕರೆಯ ಲಾರಂಭಿಸಿದ್ದರು. ಜಾಬೋಲೋಟ್ನಿ ರಷ್ಯಾಕ್ಕೆ ಹಿಂದಿರುಗಿದ ನಂತರ ಏಪ್ರಿಲ್ 30ರಂದು ಬರೆದ ಪತ್ರದಲ್ಲಿ ಹಾಫ್‌ಕಿನ್ನರ ವ್ಯಾಕ್ಸೀನಿನ ಬಗೆಗೆ ಇಂಗ್ಲಿಷ್ ವೈದ್ಯರು ಇನ್ನೂ ಅನುಮಾನ ವ್ಯಕ್ತಪಡಿಸುತ್ತಿದ್ದಾರೆ ಎಂದು ಬರೆದಿದ್ದರು. ಆದರೆ ಮುಂದಿನ ಒಂದು ತಿಂಗಳಲ್ಲಿ ಜರುಗಿದ ಘಟನೆಗಳನ್ನು ನೋಡಿದ ರಷ್ಯಾದಿಂದ ಹೊಸದಾಗಿ ಮತ್ತೊಂದು ತಂಡದ ಪರಿಣತರು ಹಾಗೂ ಇತರರೂ ಸಹಾ ಹಾಫ್‌ಕಿನ್ ವ್ಯಾಕೀನ್ಸನ್ನು ವೈಜ್ಞಾನಿಕವಾಗಿ ಹಾಗೂ ಅದರ ಪ್ರಾಯೋಗಿಕ ಚಟುವಟಿಕೆಗಳ ಬಗೆಗೆ ಮರುಮೌಲ್ಯ ಮಾಪನ ಮಾಡಬೇಕಾದ ಸಂದರ್ಭ ಒದಗಿಬಂದಿತು.

## ದಾಮನ್ ಪ್ರಯೋಗ

ಭಾರತದ ಭೂಭಾಗಗಳಿಂದ ಸುತ್ತುವರಿದಿರುವ ಪುಟ್ಟ ಪೋರ್ಚುಗೀಸ್ ವಸಾಹತಾದ ಡಾಮನ್‌ನಲ್ಲಿ ಪ್ಲೇಗ್ ದಾಳಿ ಮಾಡುತ್ತಿರುವ ಸುದ್ದಿ ಫೆಬ್ರವರಿಯ ಅಂತಿಮ ದಿನಗಳಲ್ಲಿ ಮುಂಬಯಿಯನ್ನು ತಲುಪಿತು; ಮೂರು ಹಳ್ಳಿಗಳಿದ್ದ ಆ ವಸಾಹತಿನ ಯಾವ ಭಾಗವನ್ನೂ ಬಿಡದೆ ಪ್ಲೇಗ್ ವ್ಯಾಪಿಸಿತ್ತು. ಅಲ್ಲಿದ್ದ ಹತ್ತುಸಾವಿರ ಜನರಲ್ಲಿ ಪ್ಲೇಗ್ ವ್ಯಾಧಿ ತಲೆದೋರಿದ ಕೂಡಲೇ ವಸಾಹತನ್ನು ತ್ಯಜಿಸಿ ದಿಕ್ಕಾಪಾಲಾಗಿ ಓಡಿಹೋದರು; ಅದನ್ನರಿತ ಪೋರ್ಚುಗೀಸರು, ಜನರು ವಸಾಹತನ್ನು ಬಿಟ್ಟು ಹೊರಹೋಗದಂತೆ ಅದರ ಸುತ್ತ ಸೈನ್ಯದ ಪಹರೆ ಏರ್ಪಡಿಸಿದರು. ಬ್ರಿಟಿಷರೂ ಈ ದಿಸೆಯಲ್ಲಿ ಹಿಂದೆ ಬೀಳಲಿಲ್ಲ. ಅವರೂ ಸಹ ದಾಮನ್ ಸುತ್ತ ಇನ್ನೂ ಬಿಗಿಯಾದ ಪಹರೆಯನ್ನೇರ್ಪಡಿಸಿ ಭಾರತದ ಇತರ ಭಾಗಗಳಿಗೆ ಪ್ಲೇಗ್ ಹರಡದಂತೆ ಎಚ್ಚರಿಕೆ ವಹಿಸಿದರು. ಈ ರೀತಿಯ ಎರಡು ಸುತ್ತು ಪಹರೆಯಿಂದ ಅಲ್ಲಿ ಉಳಿದಿದ್ದ ಎಂಟು ಸಾವಿರ ಜನರಿಗೆ ಪ್ಲೇಗ್‌ನಿಂದ ಪಾರಾಗುವ ಮಾರ್ಗವೇ ಇರಲಿಲ್ಲ. ಅವರೆಲ್ಲಾ ತಮ್ಮ ಅದೃಷ್ಟದ ಮೇಲೆ ಭಾರ ಹಾಕಿ ಅಲ್ಲೇ ಕಾಲ ಕಳೆಯಬೇಕಾಯಿತು.

ಇಂತಹ ''ಆಕ್ರಮಿತ'' ಪ್ರದೇಶಕ್ಕೆ ಹಾಫ್‌ಕಿನ್ನರು ತಮ್ಮ ನಂಬುಗೆಯ ಎರಡು ಜನ ಕಾರ್ಯಕರ್ತರು ಮತ್ತು ಸಾಕಷ್ಟು ಪ್ರಮಾಣದ ಲಿಂಫ್‌ನ್ನು ಕಳುಹಿಸಿಕೊಟ್ಟರು. ಅವರು ಮುಂದಿನ ಎರಡು ತಿಂಗಳು ಅಲ್ಲಿದ್ದು ಕೊಂಡು ಇನಾಕ್ಯುಲೇಷನ್ ಕಾರ್ಯದಲ್ಲಿ ತೊಡಗಿಸಿಕೊಂಡರು; ಇನಾಕ್ಯುಲೇಷನ್ ಮಾಡಿಸಿಕೊಂಡವರೇ ಅಲ್ಲದೆ ಮಾಡಿಸಿ ಕೊಳ್ಳದವರ ಬಗೆಗೂ ಕರಾರುವಾಕ್ಕಾದ ದಾಖಲೆಗಳನ್ನು ಸಹ ಇರಿಸಿದರು; ಹಾಗೆಯೇ

ಪ್ಲೇಗ್ ತಗುಲಿದವರು ಮತ್ತು ಅದರಿಂದ ಮರಣ ಹೊಂದಿದವರ ಬಗೆಗೂ ದಾಖಲೆ ಇರಿಸಿಕೊಂಡರು. ಮೇ ತಿಂಗಳ (1897) ಸಮಯಕ್ಕೆ ಮುಂಬಯಿಯಯ ಪತ್ರಿಕೆಗಳು ಅಲ್ಲಿ ಜರುಗಿದ ಪವಾಡ ಸದೃಶ ಫಲಿತಾಂಶಗಳ ಬಗೆಗೆ ವರದಿ ಮಾಡಿದವು. ಇನಾಕ್ಯುಲೇಷನ್ ಮಾಡಿಸಿಕೊಳ್ಳಲು ನಿರಾಕರಿಸಿದ 6000 ಜನರ ಪೈಕಿ 1482 ಮಂದಿ ಪ್ಲೇಗಿನಿಂದ ಅಸುನೀಗಿದ್ದರು; ಅದನ್ನು ಮಾಡಿಸಿಕೊಂಡ 2200ರ ಪೈಕಿ ಕೇವಲ 36 ಜನ ಮರಣ ಹೊಂದಿದ್ದರು. ಅಂದರೆ ಇನಾಕ್ಯುಲೇಷನ್ ಮಾಡಿಸಿಕೊಳ್ಳದಿದ್ದವರಲ್ಲಿ ಸಾವಿನ ಪ್ರಮಾಣ ಮಾಡಿಸಿಕೊಂಡವರಿಗಿಂತ ಹದಿನೈದು ಪಟ್ಟು ಜಾಸ್ತಿಯಾಗಿತ್ತು ಎಂದು ಈ ಪ್ರಕರಣದ ಬಗೆಗೆ ರಷ್ಯಾದ ವೈದ್ಯ ಡಾ॥ ವಿಗುರ ಎಂಬುವರು ವರದಿ ಮಾಡಿದ್ದರು; ಅವರು ಮುಂದುವರಿದು, ಸತ್ತವರ ಪ್ರಮಾಣ ಅಷ್ಟೊಂದು ಹೆಚ್ಚಾಗಿದ್ದುದರಿಂದ ಅದೊಂದು ಆಕಸ್ಮಿಕ ಸಂಭವವೆಂದು ಪರಿಗಣಿಸುವಂತಿಲ್ಲವೆಂದು ಹೇಳಿದ್ದರು.

ಉಪಖಂಡದಲ್ಲಿ ಜುಲೈ ಹೊತ್ತಿಗೆ ಪ್ಲೇಗಿನ ಸಾಂಕ್ರಾಮಿಕ ಮತ್ತೊಮ್ಮೆ ತಲೆದೋರಿತು. ಈ ಸಾರಿ ಅದು ಬಹುದೂರದ ಒಳನಾಡಿನ ಲಾನೋಲಿ ಎಂಬ ಹಳ್ಳಿಯೊಂದರಲ್ಲಿ ಕಾಣಿಸಿಕೊಂಡಿತು; ಆ ಹಳ್ಳಿ ದಕ್ಕನ್ ಪ್ರಸ್ಥಭೂಮಿಯ ಅತಿ ಎತ್ತರದ ಗುಡ್ಡಗಾಡಿನಲ್ಲಿತ್ತು. ಹಾಫ್‌ಕಿನ್ ಮತ್ತು ಡಾ॥ ಲೇವಿನ್ ಬೇಸಿಗೆಯ ಕಡು ಬಿಸಿಲು ಮತ್ತು ಅತ್ಯಂತ ನಾದುರಸ್ತಿನ ರಸ್ತೆಗಳಲ್ಲಿ ಸಂಚರಿಸಿ ಆ ಹಳ್ಳಿಯನ್ನು ತಲುಪಿದರು. ಒಡನೆಯೇ ಆ ಪ್ರದೇಶದ ಜನ ಸಮುದಾಯದವರ ಸಾಮಾನ್ಯ ಆರೋಗ್ಯ ತಪಾಸಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು; ಇನಾಕ್ಯುಲೇಷನ್ ಮಾಡಿಸಿಕೊಳ್ಳುವ ಬಗೆಗೆ ಯಾರ ಮೇಲೂ ಒತ್ತಾಯ ಹೊರಿಸಲಿಲ್ಲ. ಜನರು ಬಳಲುತ್ತಿದ್ದ ಕಾಯಿಲೆಗಳ ಬಗೆಗೆ ಮಾಹಿತಿ ನೀಡಿದ ನಂತರ ಪ್ಲೇಗಿನ ವಿರುದ್ಧ ಇನಾಕ್ಯುಲೇಷನ್ ಬಗೆಗೆ ವಿವರಿಸಿ, ಅದನ್ನು ತೆಗೆದುಕೊಳ್ಳುವ ನಿರ್ಧಾರವನ್ನು ಅವರಿಗೇ ಬಿಡುತ್ತಿದ್ದರು. ಆದರೂ ಜನ ಸ್ವಯಂಪ್ರೇರಿತರಾಗಿ ಇನಾಕ್ಯುಲೇಷನ್ ಮಾಡಿಸಿಕೊಳ್ಳಲು ಮುಂದೆ ಬರಲಾರಂಭಿಸಿದರು; ಮೊದಲ ಮೂರು ವಾರದಲ್ಲೇ 487 ಜನರು ಇನಾಕ್ಯುಲೇಷನ್ ಮಾಡಿಸಿಕೊಂಡರು. ಇನಾಕ್ಯುಲೇಷನ್ ಮಾಡಿಸಿಕೊಂಡವರಲ್ಲಿ ಐದು ಮಂದಿಗೆ ಪ್ಲೇಗ್ ತಗುಲಿ, ಅವರಲ್ಲಿ ಮೂರು ಜನರ ಸಾವಿಗೀಡಾದರೆ, ಮಾಡಿಸಿಕೊಳ್ಳದಿದ್ದವರಲ್ಲಿ ಪ್ರತಿ ದಿನ 10-12 ಜನ ಸಾಯುತ್ತಿದ್ದರು; ಅಂದರೆ ಆ ಪ್ರದೇಶದ ಕಾಲು ಭಾಗ ಜನ ಪ್ಲೇಗಿಗೆ ಬಲಿಯಾಗಿದ್ದರು. ಲನೋಲಿಯ ಈ ಅಂಕಿ ಅಂಶಗಳು ದಾಮನ್‌ನ ಫಲಿತಾಂಶ ಸರಿಸಮಾನವಾಗಿದ್ದವೆಂದು ಡಾ॥ಲೇವಿನ್ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು.

ದಾಮನ್ ಮತ್ತು ಲನೋಲಿಯ ಫಲಿತಾಂಶಗಳಿಂದ ಹಾಫ್‌ಕಿನ್ನರ ಲಿಂಫ್‌ನ ಯೋಗ್ಯತೆ ಮತ್ತು ಅಯೋಗ್ಯತೆಗಳು ತಿಳಿದು ಬರುವಂತಾಯಿತು. ಅದರ ನೀಡಿಕೆಯಿಂದ ಎಲ್ಲರಲ್ಲೂ ಪರಿಪೂರ್ಣ ರೋಗ ನಿರೋಧಕ ಸಾಮರ್ಥ್ಯ ಉಂಟಾಗುತ್ತಿರಲಿಲ್ಲವೆಂಬುದು ನಿಜಸಂಗತಿಯಾಗಿತ್ತು; ಆದರೆ ಪ್ಲೇಗ್‌ನ ಸಾಂಕ್ರಾಮಿಕತೆ ಹರಡಿಕೊಂಡಿದ್ದ ವಲಯುಗಳಲ್ಲಿ

ಇನಾಕ್ಯುಲೇಷನ್ ತೆಗೆದುಕೊಂಡವರು ಬಹುಪಾಲು ಪ್ಲೇಗಿನಿಂದ ಮುಕ್ತವಾಗಿರಲು ಅದು ಸಹಾಯ ಮಾಡುತ್ತಿತ್ತೆಂಬುದರಲ್ಲಿ ಸಂದೇಹವಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಅದು ಜನರ ಜೀವ ಉಳಿಯುವಂತೆ ಮಾಡಿತು. ಮೊದಲು ಇಂಜಕ್ಷನ್ ಮಾಡಿಸಿಕೊಂಡವರಲ್ಲಿ ಮರಣ ಪ್ರಮಾಣ ಶೇಕಡಾ 85-90ರಷ್ಟು ಕಡಿಮೆಯಾಯಿತು. ರಷ್ಯಾದಿಂದ ಬಂದಿದ್ದ ವೈದ್ಯರ ತಂಡ ಹಾಫ್‌ಕಿನ್ನರ ಲಿಂಫ್ ಸಾಧಿಸಿದ ವಿಜಯದ ಸುದ್ದಿಯನ್ನು ಸೆಯಿಂಟ್ ಪೀಟರ್ಸ್ ಬರ್ಗ್‌ಗೆ (ರಷ್ಯಾದ ರಾಜಧಾನಿಗೆ) ವರದಿ ಮಾಡಲು ಹಿಂಜರಿಯಲಿಲ್ಲ. ಹಾಫ್‌ಕಿನ್ ವ್ಯಾಕ್ಸೀನಿನ ರೋಗ ಪ್ರತಿಬಂಧಕ ಸಾಮರ್ಥ್ಯ, ಆ ಸಮಯದಲ್ಲಿ ಪ್ಲೇಗಿನ ಚಿಕಿತ್ಸೆಗಾಗಿ ಮುಂಬಯಿಯಲ್ಲಿ ಪ್ರಯೋಗಾರ್ಥವಾಗಿ ಬಳಕೆಯಾಗುತ್ತಿದ್ದ ಹಲವು ಲಸಿಕೆ-ಯೆರ್ಸಿನ್, ಲಂಗ್ ಮತ್ತು ಗೆಲಿಯೋಟ್ಟಿಗಳಿಗಿಂತ ಅತ್ಯುತ್ತಮವಾಗಿತ್ತು; ಅವುಗಳಿಂದ ಯಾರನ್ನೂ ಬದುಕಿಸಲು ಸಾಧ್ಯವಾಗಿರಲಿಲ್ಲ.

## ಜನಾಭಿಪ್ರಾಯದ ಒತ್ತಾಯ

ರಷ್ಯಾದ ವೈದ್ಯ ತಂಡದವರ ಲಿಖಿತ ವರದಿ ಮತ್ತು ಮಾತುಕತೆಗಳು ಲಿಂಫ್ ಮತ್ತು ಅದನ್ನು ಕಂಡು ಹಿಡಿದವರ ಭವಿಷ್ಯವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವು. ಮೊದಲನೆಯದಾಗಿ, ಸೆಯಿಂಟ್‌ಪೀಟರ್ಸ್ ಬರ್ಗ್‌ನಿಂದ ವ್ಯಾಕ್ಸೀನನ್ನು ತಯಾರಿಸುವ ಬಗೆಗೆ ವಿವರಗಳನ್ನು ತಿಳಿಸುವಂತೆ ಕೋರಿಕೆ ಬಂದಿತು; ಎರಡನೆಯದಾಗಿ, ಮುಂಬಯಿಯ ಜನ ಸಮುದಾಯವೆ ಬ್ರಿ.ಜ. ಗಟಾಕ್ರೆ ಗೊತ್ತುಗುರಿಯಿಲ್ಲದೆ, ಜನರ ಮೇಲೆ ಹೇರುತ್ತಿದ್ದ ''ಆರೋಗ್ಯದ'' ನಿಯಮಗಳನ್ನು ಸಡಿಲಿಸಿ, ಹಾಫ್‌ಕಿನ್ನರ ವ್ಯಾಕ್ಸೀನೇಷನ್ ಪದ್ಧತಿಯನ್ನು ವ್ಯಾಪಕವಾಗಿ ಜಾರಿಗೆ ತರಬೇಕೆಂದು ಒತ್ತಾಯಮಾಡುವಂತಾಯಿತು; ಈ ಒತ್ತಾಯಕ್ಕೆ ಒಂದು ಪ್ರಬಲ ಕಾರಣವೂ ಇತ್ತು. ಆ ಚಳಿಗಾಲದ ಸಮಯದಲ್ಲಿ (1898) ಪ್ಲೇಗ್‌ನಿಂದ ಸಾಯುತ್ತಿದ್ದವರ ಸಂಖ್ಯೆ ಅತಿ ಹೆಚ್ಚಾಗಿರುತ್ತಿದ್ದದು ಸರ್ಕಾರದವರ ಗಮನಕ್ಕೆ ಬರುವಂತಾಯಿತು. ಪ್ರತಿವಾರವೂ ನೂರಾರು ಜನರು ಸಾಯುತ್ತಿದ್ದರು; ಎಲ್ಲೆಲ್ಲಿ ನೋಡಿದರೂ ಶವಯಾತ್ರೆಯ ಮೆರವಣಿಗೆಗಳು ಕಣ್ಣಿಗೆ ರಾಚುವಂತಿರುತ್ತಿದ್ದವು. ಅವು ವಾಸ್ತವವಾಗಿ ಪ್ಲೇಗಿನಿಂದ ಸತ್ತವರ ಹೆಣಗಳೋ ಅಲ್ಲವೋ ಎಂಬುದನ್ನು ಖಾತರಿ ಮಾಡಿಕೊಳ್ಳಲು ಅಂತಹ ಶವಯಾತ್ರೆಗಳನ್ನು ನಿಲ್ಲಿಸಿ, ಪ್ಲೇಗಿನಿಂದ ಸತ್ತಿದ್ದಕ್ಕೆ ವೈದ್ಯರಿಂದ ದೃಢೀಕರಣ ಪತ್ರ ಹಾಜರು ಪಡಿಸಬೇಕೆಂದು ಆಗ್ರಹ ಪಡಿಸುತ್ತಿದ್ದರು. ಕೆಲವು ಸಲ ಕ್ರಿಶ್ಚಿಯನ್, ಹಿಂದೂ ಹಾಗೂ ಪಾರ್ಸಿ ರುದ್ರಭೂಮಿಗಳಲ್ಲಿ ಪೊಲೀಸರಿಗೂ, ಜನ ಸಮುದಾಯದವರಿಗೂ ಘರ್ಷಣೆಗಳಾಗುತ್ತಿದವು. ಪತ್ರಿಕೆಗಳಲ್ಲಿ ಆ ಬಗೆಗೆ ಕಟುವಾದ ಪತ್ರಗಳೂ ಸಹ ಪ್ರಕಟವಾದವು. ಜನವರಿ ೯ರಂದು **''ಬಾಂಬೇ ಗೆಜೆಟ್''** ನಲ್ಲಿ ಪ್ರಕಟವಾದ ಪತ್ರವೊಂದರಲ್ಲಿ ಓದುಗರೊಬ್ಬರು ಸರ್ಕಾರ ಹಾಫ್‌ಕಿನ್ನರ ವ್ಯಾಕ್ಸೀನ್ ಬಗೆಗೆ ಗಮನ ಕೊಡಬೇಕೆಂದು ಒತ್ತಾಯ ಪೂರ್ವಕವಾಗಿ ಬರೆದಿದ್ದರು. ಅದರ ಸಾರಾಂಶ:

''ಸ್ವಾಮಿ,

ಬಹುಜನ ನಾಗರಿಕರ ಅಭಿಪ್ರಾಯವನ್ನು ಪ್ರತಿಬಿಂಬಿಸಿ ಈ ಪ್ರಶ್ನೆಯನ್ನು ಎತ್ತಬಯಸುತ್ತೇನೆ; ಪ್ಲೇಗ್ ಮಾರಿಯನ್ನು ಹೊರದಬ್ಬುವ ಸಲುವಾಗಿ ಸರ್ಕಾರ ನೇಮಿಸಿರುವ ಸಮಿತಿಯವರು ಸೂಕ್ತವಾದ ಎಲ್ಲಾ ಕ್ರಮಗಳನ್ನು ಜರುಗಿಸುತ್ತಿದ್ದಾರೆಯೆ?.... ಮುಂಬಯಿಗೆ ಹೊರಗಡೆಯಿಂದ ಬರುವವರನ್ನು ''ಬೇರ್ಪಡಿಸುವ'' ಶಿಬಿರಗಳಲ್ಲಿಡಿಸಿ ಅಪಾರ ಮೊತ್ತದ ಧನ ಮತ್ತು ಜನ ಬಲವನ್ನು ವ್ಯಯ ಮಾಡುತ್ತಿದ್ದಾರೆ. ಮುಂಬಯಿ ನಗರವೇ ಕೊಳೆತು ಜನರು ಪ್ಲೇಗಿನಿಂದ ಸತ್ತವರ ಹೆಣಗಳಿಂದ ತುಂಬಿಕೊಂಡಿರುವ ಈ ಸಮಯದಲ್ಲಿ ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುವಂತಾಗಿದೆ: ಈ ಸಂದರ್ಭದಲ್ಲಿ ಮುಂಬಯಿಗೆ ಬರುವವರನ್ನು ತಡೆಹಿಡಿದು ಶಿಬಿರಗಳಲ್ಲಿ ಕೂಡಿ ಹಾಕುವುದರಿಂದ ಅದೇನು ಪ್ರಯೋಜನವಾಗಬಹುದು. ಮುಂಬಯಿಗೆ ಹೊರಗಡೆಯಿಂದ ಬರುವವರು ಅದ್ಹೇಗೆ ನಮ್ಮ ಸುರಕ್ಷತೆಗೆ ಧಕ್ಕೆ ತರಲು ಸಾಧ್ಯವಿದೆ? ಕಡೆಯದಾಗಿ ನಾನು ಕೇಳಬಯಸುವ ಈ ಪ್ರಶ್ನೆ ಬಹುಮುಖ್ಯವಾದುದು. ಹಾಫ್‌ಕಿನ್ನರ ವ್ಯಾಕ್ಸೀನಿನಿಂದ ಪ್ಲೇಗನ್ನು ನಿಗ್ರಹಿಸಲು ಯಾವ ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ? ಈ ಪ್ರಶ್ನೆಗೆ ಯಾವ ಉತ್ತರವೂ ಇಲ್ಲವೆಂದೇ ಹೇಳಬೇಕಲ್ಲವೆ. ಹಾಫ್‌ಕಿನ್ನರ ಇನಾಕ್ಯುಲೇಷನ್ ಪದ್ಧತಿ ಈಗ ತುಂಬಾ ಪರಿಣಾಮ ಬೀರುತ್ತದೆಂದು ಸಾಬೀತಾಗಿದೆ; ಪ್ರತಿಯೊಬ್ಬರಿಗೂ ಅದನ್ನು ನೀಡುವುದರಿಂದ ಪ್ಲೇಗ್ ಮಾರಿಯೇ ತಕ್ಷಣ ತನ್ನ ಅಂತ್ಯವನ್ನು ಕಂಡುಕೊಳ್ಳುವುದರಲ್ಲಿ ಸಂದೇಹವಿಲ್ಲ. ಪೂನಾ, ಶೋಲಾಪುರ, ಸೂರತ್ ಮತ್ತು ಮುಂಬಯಿ ನಗರಗಳಲ್ಲಿ ರೊಚ್ಚಿಗೆದ್ದು ಹರಡುತ್ತಿರುವಾಗ ಸಂಬಂಧಪಟ್ಟವರು ಇನಾಕ್ಯುಲೇಷನ್ ಪದ್ದತಿಯ ಸಹಾಯ ಪಡೆಯಲು ಏನಾದರೂ ಮಾಡುತ್ತಿರುವರೇ? ಈ ಪ್ರಶ್ನೆಯನ್ನು ಉತ್ತರಿಸಲು ಸಾರ್ವಜನಿಕರಿಗೆ ಬಿಡುತ್ತೇನೆ. ಇದು ಬರೆ ಹಣಕಾಸುಗಳನ್ನು ಖರ್ಚು ಮಾಡುವ ಪ್ರಶ್ನೆಯಲ್ಲ. ಪರಿಸ್ಥಿತಿ ಹೀಗೇ ಮುಂದುವರಿಯಲು ಬಿಟ್ಟು ವೃಥಾ ಕಾಲಹರಣದಲ್ಲಿ ತೊಡಗಿದರೆ ಮುಂದೆ ಲಕ್ಷಾಂತರ ರೂಪಾಯಿಗಳ ಖರ್ಚನ್ನು ಭರಿಸಬೇಕಾಗಬಹುದು. ..... ಪ್ರತಿಯೊಂದು ಗಲ್ಲಿಗಲ್ಲಿಯಲ್ಲೂ ಇನಾಕ್ಯುಲೇಷನ್ ಕೇಂದ್ರಗಳನ್ನು ಸ್ಥಾಪಿಸಬೇಕು. ಬಡಬಗ್ಗರು ಇನಾಕ್ಯುಲೇಷನ್ ನಂತರ ಅಸ್ವಸ್ಥರಾಗಬಹುದಾದುದರಿಂದ ಅವರ ಹೊಟ್ಟೆಪಾಡಿಗೆ ಅಲ್ಪಸ್ವಲ್ಪ ಹಣ ಸಹಾಯವನ್ನೂ ನೀಡಬೇಕಾಗುತ್ತದೆ. ಸ್ಥಳೀಯ ಭಾಷೆ ಬಲ್ಲವರಿಂದ ಕೆಲವು ಕಡೆ ಇನಾಕ್ಯುಲೇಷನ್‌ನ ಉಪಯುಕ್ತತೆಯ ಬಗೆಗೆ ಪ್ರಚಾರ ಭಾಷಣಗಳನ್ನೇರ್ಪಡಿಸಬೇಕು; ಕರಪತ್ರಗಳನ್ನು ಹಂಚಬೇಕು. ವೈದ್ಯಕೀಯ ಸಿಬ್ಬಂದಿಯವರು ಮನೆ ಮನೆಗೂ ಹೋಗಿ ಇನಾಕ್ಯುಲೇಷನ್ ಮಾಡುತ್ತಿರಬೇಕು. ಪ್ರೊ.:ಹಾಫ್‌ಕಿನ್ನರ ಕಡೆ ತೀವ್ರ ಗಮನ ಹರಿಸುವ ಕಾಲ ಈಗ ಒದಗಿ ಬಂದಿದೆ. ಈ ಸದ್ಗೃಹಸ್ಥನಿಗೆ ಮುಂಬಯಿ ತುಂಬಾ ಋಣಿಯಾಗಿರ ಬೇಕು. ಮುಂದೆ ಮುಂಬಯಿಯ ''ಕೀರ್ತಿ ವಂತರ ಸುರುಳಿ'' (scroll of fame) ನಲ್ಲಿ ಅವರ ನಾಮಾಂಕಿತ ಅತಿದೊಡ್ಡ ಅಕ್ಷರಗಳಲ್ಲಿ ದಾಖಲಾಗಲಿದೆ''.

ವಿದೇಶಗಳಿಂದ ಬಂದ ವೈದ್ಯ ತಂಡದವರು ಹಾಫ್‌ಕಿನ್ನರ ವ್ಯಾಕ್ಸೀನಿನ ಕಾರ್ಯ ದಕ್ಷತೆಯನ್ನು ಶ್ರುತಪಡಿಸಿದ್ದು ಹಾಗೂ ದಾಮನ್ ಮತ್ತು ಲಸೋಲಿಗಳಲ್ಲಿ ದೊರೆತ ಫಲಿತಾಂಶಗಳಿಂದ ಭಾರತೀಯರಲ್ಲಿ ಹಾಫ್‌ಕಿನ್‌ರ ಬಗೆಗೆ ಘನತೆ ಗೌರವಗಳು ಹೆಚ್ಚುವಂತಾಯಿತು.

ಮಹಾ ವಿಜ್ಞಾನಿ ಲೂಯಿ ಪ್ಯಾಶ್ಚರ್‌ರ ಸಿದ್ಧಾಂತಗಳನ್ನು ಭಾರತದಲ್ಲಿ ಜಾರಿಗೆ ತರುವ ಪ್ರಯತ್ನಗಳಾದಾಗಲೆಲ್ಲಾ ಮುಂಬಯಿಯ ಅತ್ಯಂತ ಹಿರಿಯ ಹಾಗೂ ಗೌರವಾನ್ವಿತ ವೈದ್ಯ ಡಾ॥ಬಹಾದೂರ್‌ಜಿ ಕಟುವಾಗಿ ವಿರೋಧಿಸುತ್ತಿದ್ದವರು. ದಿನಾಂಕ 13 ಜನವರಿ 1998ರಂದು ಮುಂಬಯಿಯ ಪುರಸಭೆಯು ಪ್ಲೇಗ್ ಸಮಸ್ಯೆಯನ್ನು ಚರ್ಚಿಸಲು ಒಂದು ಸಭೆಯನ್ನು ಏರ್ಪಡಿಸಿತ್ತು. ಆ ಸಭೆಗೆ ಮುಂಬಯಿಯ ಖ್ಯಾತ ವೈದ್ಯರು ಮತ್ತು ಗಣ್ಯ ಮಹನೀಯರು ಹಾಗೂ ಸಂಬಂಧಪಟ್ಟ ಅಧಿಕಾರಿಗಳನ್ನು ಆಹ್ವಾನಿಸಲಾಗಿತ್ತು. ಅವರೆಲಲ್ಲರ ನಡುವೆ ಅತ್ಯಂತ ಬಿರುಸಿನ ವಾಗ್ಯುದ್ಧಗಳು ನಡೆದವೆನ್ನಲಾಗಿದೆ; ಪ್ಲೇಗನ್ನು ತಡೆಗಟ್ಟುವಲ್ಲಿ ಹಾಫ್‌ಕಿನ್ನರ ನಿರೋಧಕ ಇನಾಕ್ಯುಲೇಷನ್ ಪ್ಧಧತಿಯನ್ನು ಜಾರಿಗೆ ತರುವಲ್ಲಿ ಯಾವುದೇ ವಿರೋಧ ವ್ಯಕ್ತಪಡಲಿಲ್ಲ; ಡಾ॥ ಬಹದೂರ್‌ಜೀಯವರ ಅಭಿಪ್ರಾಯಗಳೂ ಬದಲಾ ದಂತಿದ್ದವು. ಇನಾಕ್ಯುಲೇಷನ್ ಪದ್ಧತಿಯನ್ನು ಜಾರಿಗೆ ತರುವ ವಿಷಯದಲ್ಲಿ ಅವರು ಅಪಸ್ವರ ಎತ್ತಲಿಲ್ಲ; ಆದರೆ ಅಧಿಕಾರಿಗಳು ಆ ಬಗೆಗೆ ಒಂದು ರೀತಿಯ ಅನುಮಾನ ಪ್ರವೃತ್ತಿಯಿಂದ ಆಗಾಗ್ಗೆ ಬಿಟ್ಟುಬಿಟ್ಟು ಕಾರ್ಯೋನ್ಮುಖರಾಗುತ್ತಿರುವುದು ಅವರಿಗೆ ಸರಿ ಕಾಣಲಿಲ್ಲ. ವ್ಯಾಕ್ಸೀನಿನ ಸಾಮರ್ಥ್ಯದ ಬಗೆಗೆ ಅವರಿಗೆ ವಿಶ್ವಾಸವಿರದಿದ್ದಲ್ಲಿ ಅದನ್ನು ಬಹಿರಂಗವಾಗಿ ವಿರೋಧಿಸಬಹುದು; ಇಲ್ಲವೆ ಅದರ ಬಗೆಗೆ ಸದಭಿಪ್ರಾಯವಿದ್ದು, ಅದು ಯಾವ ತೊಂದರೆಯನ್ನೂ ಉಂಟುಮಾಡುವುದಿಲ್ಲವೆಂಬ ನಂಬಿಕೆಯಿದ್ದು, ಜನರಿಗೆ ಅದನ್ನು ನೀಡುವುದರಿಂದ ಒಳಿತಾಗುತ್ತದೆನಿಸಿದ್ದರೆ, ಅಧಿಕಾರಿಗಳು ಅನುಸರಿಸುತ್ತಿರುವ ರೀತಿ ನೀತಿಗಳು ಸರಿಯಾದುವಲ್ಲ. ಪ್ಲೇಗ್ ನಿರೋಧದ ವ್ಯಾಕ್ಸೀನೇಷನ್ ಪದ್ದತಿಯನ್ನು ವ್ಯಾಪಕವಾಗಿ ಜಾರಿಗೆ ತಂದರೆ ಎರಡು ವಾರಗಳಲ್ಲಿ ಪ್ಲೇಗನ್ನು ನಿರ್ನಾಮ ಮಾಡಲು ಸಾಧ್ಯವೆಂದು ಬಿರುಸಿನಿಂದ ವಾದಿಸಿದರು.

ಈ ವಾದ ಸರಣಿಯನ್ನನುಸರಿಸಿ ಪುರಸಭೆಯ ಸದಸ್ಯರೂ ಹಾಗೂ ಸ್ವತಃ ವೈದ್ಯರೂ ಆದ ಕವಾಸ್‌ಜೀ, ಖುರ್ಮೂಸ್, ಕತ್ರಾಕ್ ಮತ್ತು ವಿಸ್ರಾಮ್ ಹಾಗೂ ಹಲವರು ಅವಿರೋಧ ವಾಗಿ ನಗರದಾದ್ಯಂತ ಸಾಧ್ಯವಾದಷ್ಟು ಹೆಚ್ಚು ಸಂಖ್ಯೆಯಲ್ಲಿ ಇನಾಕ್ಯುಲೇಷನ್ ಕೇಂದ್ರಗಳನ್ನು ತೆರೆಯಬೇಕೆಂದು ತಮ್ಮೆಲ್ಲರ ಬೆಂಬಲ ನೀಡಿದರು. ಸಭೆಯು ಅಲ್ಲಿ ಹಾಜರಿದ್ದ ಸರ್ಕಾರಿ ಪ್ರತಿನಿಧಿಗೆ ಜನ ಸಮುದಾಯದ ಬಳಕೆಗೆ ಸಾಕಷ್ಟು ಪ್ರಮಾಣದಲ್ಲಿ ವ್ಯಾಕ್ಸೀನ್ ಲಸಿಕೆಯನ್ನು ಒದಗಿಸಬೇಕೆಂದು ಮನವಿ ಮಾಡಿತು; ಅಲ್ಲದೆ ಮುಂಬಯಿಯ ಎಲ್ಲಾ ವೈದ್ಯರಿಗೂ ಸುತ್ತೋಲೆಗಳನ್ನು ಕಳುಹಿಸಿ, ಅವರೆಲ್ಲಾ ಸಾಧ್ಯವಾಗುವಷ್ಟು ರೀತಿಯಲ್ಲಿ ಹಾಫ್‌ಕಿನ್ನರ ವ್ಯಾಕ್ಸೀನನ್ನು ವ್ಯಾಪಕವಾಗಿ ಬಳಸುವುದಕ್ಕೆ ಉತ್ತೇಜನ ಕೊಡುವಂತೆ

ಮಾಡಬೇಕು; ಹಾಗೂ ಜನರಾಡುವ ಸ್ಥಳೀಯ ಭಾಷೆಗಳಲ್ಲಿ ಈ ತನಕ ಹಾಫ್‌ಕಿನ್ನರ ವ್ಯಾಕ್ಸೀನಿನ ಬಳಕೆಯಿಂದ ಲಭಿಸಿದ ಫಲಿತಾಂಶಗಳನ್ನು ತಿಳಿಸುವ ಪ್ರಯತ್ನ ಮಾಡ ಬೇಕೆಂದೂ ಅಂದಿನಸಭೆಯಲ್ಲಿ ತೀರ್ಮಾನಗಳಾದವು.

## ಸರಳ ವ್ಯಕ್ತಿತ್ವ

ಕಳೆದ ಹನ್ನೆರಡು ತಿಂಗಳುಗಳಲ್ಲಿ ಹಾಫ್‌ಕಿನ್ನರು ಸಾಕ್ಷಾತ್ ಪ್ಲೇಗಿನ ವಿರುದ್ಧವೇ ಅಲ್ಲದೆ, ಮಾನವ ಸಹಜ ಪೂರ್ವ ಗ್ರಹೀತ ಅಭಿಪ್ರಾಯಗಳ ವಿರುದ್ಧ ಸೆಣಸಿದ ಪ್ರತಿಫಲವಾಗಿ ವೃತ್ತಪತ್ರಿಕೆಗಳು, ಅಧಿಕೃತ ಪ್ರಕಟಣೆ ಮುಂತಾದವುಗಳೇ ಸಾಕ್ಷಿಗಳಾದವು. ಅವರ ನಿರಂತರ ಹಾಗೂ ನಿಸ್ವಾರ್ಥ ಶ್ರಮದ ಯಶೋಗಾಥೆಯನ್ನು ದಾಖಲಿಸಲು ಪುರಸಭೆಯ ನಡಾವಳಿಗಳನ್ನು ವಿವರವಾಗಿ ಉಲ್ಲೇಖಿಸಬೇಕಾಯಿತು. ದೂರದ ಪರದೇಶದಿಂದ ಬಂದಿದ್ದ ತರುಣ ವಿಜ್ಞಾನಿ ನಾನಾ ಜಾತಿ, ವಿಜಾತಿ, ವಿವಿಧ ಭಾಷೆ ಹಾಗೂ ನಂಬುಗೆಗಳಿಗೆ ಬದ್ಧರಾಗಿದ್ದ ಒಂದು ದಶಲಕ್ಷಕ್ಕೂ ಹೆಚ್ಚು ಜನರಿದ್ದ ಮುಂಬಯಿ ವಾಸಿಗಳ ಮನಸ್ಸನ್ನು ತಮ್ಮೆಡೆಗೆ ಸೆಳೆದು ಕೊಳ್ಳುವುದು ಅಷ್ಟೇನೂ ಸುಲಭದ ಕೆಲಸವಾಗಿರಲಿಲ್ಲ. ಅಲ್ಲಿದ್ದ ರಾಜಕೀಯ ಆರ್ಥಿಕ ಮತ್ತು ಮತೀಯವಾಗಿ ಹಾಸು ಹೊಕ್ಕಾಗಿ ಬೆಸೆದುಕೊಂಡಿದ್ದ ವಿರೋಧಾಭಾಸಗಳ ಕಗ್ಗಂಟನ್ನು ಬಿಡಿಸುವುದಕ್ಕೆ ಹಲವಾರು ವರ್ಷಗಳೇ ಹಿಡಿಯ ಬಹುದೆನಿಸಿತ್ತು. ಆದರೂ ಹಾಫ್‌ಕಿನ್ನರು ಪ್ರಕ್ಷುಬ್ಧ ಸಮುದ್ರದ ಸುಳಿಯಂಥ ವಾತಾವರಣದಲ್ಲೂ ಈಜಿ ಸಹಸ್ರಾರು ಜನರ ಪ್ರೀತ್ಯಾದರಗಳನ್ನು ಗೆಲ್ಲುವಲ್ಲಿ ಯಶಸ್ವಿ ಯಾದರೆಂದೇ ಹೇಳಬೇಕು. ಅವರೇನು ರಾಜಕಾರಿಣಿಗಳ ವಾಕ್ಚಾತುರ್ಯದ ಉಪನ್ಯಾಸಗಳನ್ನು ಮಾಡಿರಲಿಲ್ಲ; ಲಂಚಗಾರಿಕೆಯಂತ ಆಮಿಷ ತೋರಿರಲಿಲ್ಲ; ಇಲ್ಲವೇ ಬೂಟಾಟಿಕೆ ಅಥವಾ ಮೋಹದ ವರ್ತನೆ ಅವರಿಗಿರಲಿಲ್ಲ. ಅವರ ಕಸುವಿನ ಸದ್ಗುಣ, ದೃಢಸಂಕಲ್ಪ ಮತ್ತು ವೈಜ್ಞಾನಿಕ ತತ್ವಗಳಿಗೆ ಅವರ ಸ್ಥಿರವಾದ ಬದ್ಧತೆಗಳಿಂದಲೇ ಭಾರತದ ಜನಸಮೂಹದ ಪ್ರೀತ್ಯಾದರಗಳನ್ನು ಗೆಲ್ಲಲು ಸಾಧ್ಯವಾದುದು. ಜನ ಸಾಮಾನ್ಯರಿಗೆ ಅವರು ಅತ್ಯಮೂಲ್ಯ ವೆಂದು ಪರಿಗಣಿಸಿದ ಜೀವದಾನವನ್ನು ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿದರು. ಸರ್ಕಾರದವರು ರಾಷ್ಟ್ರದ ಮಿಣಜೀವಿ ಶಾಸ್ತ್ರಜ್ಞನೆಂಬ ಹುದ್ದೆಗೆ ನೇಮಕ ಮಾಡಿ ವಸತಿ, ಸಂಚಾರ ಮತ್ತಿತರ ಸೌಲಭ್ಯಗಲನ್ನು ಒದಗಿಸಿದ್ದರೂ, ಅವರು ಮುಂಬಯಿ ಕಾಲೇಜಿನ ಪುಟ್ಟ ಪ್ರಯೋಗಾಲಯದ ಹಿಂದಿದ್ದ ಕೊಠಡಿಯಲ್ಲೇ ಉಳಿದುಕೊಂಡಿದ್ದರು; ಅವರ ಸಂಚಾರಕ್ಕಾಗಿ ಒದಗಿಸಿದ ಕುದುರೆಗಾಡಿಯನ್ನು ಪ್ರಯೋಗಾಲಯದ ಸಾಮಾನು ಸರಂಜಾಮು, ಸಾಗಿಸುವುದಕ್ಕೂ, ಸಿಬ್ಬಂದಿಗಳ ಉಪಯೋಗಕ್ಕೂ ಬಿಟ್ಟುಕೊಟ್ಟು ಬಹುಪಾಲು ನಡೆದುಕೊಂಡೇ ಹೋಗುತ್ತಿದ್ದರು.

ಗ್ರ್ಯಾಂಟ್ ಮೆಡಿಕಲ್ ಕಾಲೇಜಿನಲ್ಲಿ 1896ರ ಅಕ್ಟೋಬರ್‌ನಲ್ಲಿ ತಾತ್ಕಾಲಿಕವಾಗಿ ಆರಂಭಿಸಿದ್ದ ಆ ಪುಟ್ಟ ಪ್ರಯೋಲಯ 1898ರ ಅಂತ್ಯದ ಸಮಯಕ್ಕೆ ಕಷ್ಟ ಕಾರ್ಪಣ್ಯಗಳ

ನಡುವೆಯೂ ಯಥಾ ಯೋಗ್ಯ ವಿಜಯವನ್ನು ಗಳಿಸುವಲ್ಲಿ ಯಶಸ್ವಿಯಾಗಿತ್ತು. ಆದರೆ ''ಪುಟ್ಟ'' ಎಂಬ ಪದ ವಿಶೇಷಣೆ ಬಹಳ ಕಾಲ ಮುಂದುವರಿಯಲಿಲ್ಲ. ಹಾಫ್‌ಕಿನ್ನರ ವ್ಯಾಕ್ಸೀನಿನ ಮಹತ್ವವನ್ನರಿತ ಶ್ರೀಮಂತ ಭಾರತೀಯರೊಬ್ಬರು ಅವರ ಒಂದು ವಿಶಾಲ ಹಾಗೂ ಭವ್ಯವಾದ ಬಂಗಲೆಯನ್ನೇ ಪ್ರಯೋಗಾಲಯಕ್ಕಾಗಿ ಬಿಟ್ಟುಕೊಟ್ಟರು; ಮುಂಬಯಿಯಲ್ಲಿ ಪ್ಲೇಗ್ ಸಾಂಕ್ರಾಮಿಕ ಅತ್ಯುಗ್ರವಾಗಿ ಹರಡುತ್ತಿದ್ದಾಗ ಆ ಸದ್ಗೃಹಸ್ಥನ ಆರುನೂರು ಜನ ಆಳುಗಳಿಗೆ ಹಾಫ್‌ಕಿನ್ನರು ಇನಾಕ್ಯುಲೇಷನ್ ಮಾಡಿದ್ದರ ಉಪಕಾರಸ್ಮರಣೆ ಅದಾಗಿತ್ತು.

ಪ್ಲೇಗ್ ಕಂಟ್ರೋಲ್ ಕಮಿಟಿ ಜುಲೈ ತಿಂಗಳ ಹೊತ್ತಿಗೆ ಶೀಘ್ರವಾಗಿ ಬದಲಾಗುತ್ತಿದ್ದ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಅನಿವಾರ್ಯವಾಯಿತು. ಬ್ರಿ.ಜ.ಗಟಾಕ್ರೆ ಅವರಿಗೆ ಸರಿಹೊಂದುವಂಥ ತಮ್ಮ ಹಿಂದಿನ ಹುದ್ದೆಗೆ ಬಂದ ದಾರಿಗೆ ಸುಂಕವಿಲ್ಲದಂತೆ ಹಿಂದಿರುಗಬೇಕಾಯಿತು. ಮುಂಬಯಿ ನಗರದಲ್ಲಿ ಒಂದಾದ ಮೇಲೊಂದರಂತೆ ಇನಾಕ್ಯುಲೇಷನ್ ಕೇಂದ್ರಗಳು ತೆರೆಯಲ್ಪಟ್ಟ ವು; ಅರ್ಧ ವರ್ಷ ಮುಗಿಯುವಷ್ಟರಲ್ಲೇ 50 ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದವು. ಹಾಫ್‌ಕಿನ್ನರು ಭಾರತೀಯ ಹಾಗೂ ಇಂಗ್ಲಿಷ್ ಪತ್ರಿಕೆಗಳಲ್ಲಿ ಪ್ಲೇಗ್ ವ್ಯಾಕ್ಸೀನಿನ ಉಪಯುಕ್ತತೆಯ ಬಗೆಗೆ ಬರೆಯುತ್ತಿದ್ದ ಲೇಖನಗಳು ಜನರ ಕುತೂಹಲ ಕೆರಳಿಸುತ್ತಿದ್ದವು. ಅಷ್ಟರಲ್ಲೇ ಸುಮಾರು 82,000 ಇನಾಕ್ಯುಲೇಷನ್‌ಗಳನ್ನು ನೀಡಿದ್ದಾಗಿತ್ತು. ಆ ಪದ್ಧತಿ ಆರಂಭವಾದಾಗಿನಿಂದಲೂ ಒಂದೇ ಸಾರಿ ಅಷ್ಟೊಂದು ಜನರಿಗೆ ಇನಾಕ್ಯುಲೇಷನ್ ಮಾಡಿ ಅಪಾರ ಜನಸಮುದಾಯಕ್ಕೆ ಸಹಾಯ ಮಾಡಲು ಬೇರಾರಿಗೂ ಸಾಧ್ಯವಾಗಿರಲಾರದು.

ಪ್ಲೇಗ್ ಸಾಂಕ್ರಾಮಿಕದ ಹಾವಳಿಯೇನೋ ಹಿಂಜರಿಯಲಾರಂಭಿಸಿತ್ತು. ಆದರೂ ಅದು ಅಲ್ಲೊಂದು ಇಲ್ಲೊಂದು ಆಹುತಿಗಳನ್ನು ತೆಗೆದುಕೊಳ್ಳುವುದು ನಿಂತಿರಲ್ಲಿ. ಮುಂಬಯಿಯಲ್ಲಿ ಡಾ||ಮನ್‌ಷೇರ್ ಎಂಬವರು ನ್ಯೂಮೊನಿಕ್ ಪ್ಲೇಗಿಗೆ ಬಲಿಯಾದ ರಲ್ಲದೆ ಅವರ ಸಂಗಡ ಕಾರ್ಯನಿರ್ವಹಿಸುತ್ತಿದ್ದ ದಾದಿಗೂ ತಗುಲಿ ಆಕೆಯೂ ಸಾಯುವಂತಾಯಿತು. ವಿಯೆನ್ನಾದಲ್ಲಿ ಪ್ಲೇಗ್ ಸಂಶೋಧನೆ ಜರುಗಿಸುತ್ತಿದ್ದ ಪ್ರಯೋಗಾಲ ಯದಲ್ಲಿ ಕಾರ್ಯನಿರತನಾಗಿದ್ದ ಬ್ಯಾರಿಷ್ ಎಂಬ ಉದ್ಯೋಗಿಯೊಬ್ಬರು ಪ್ಲೇಗ್ ತಗುಲಿ ಸಾವನ್ನಪ್ಪಿದರು. ಅವರನ್ನು ಚಿಕಿತ್ಸೆ ಮಾಡುತ್ತಿದ್ದ ಡಾ|| ಮುಲ್ಲರ್ ಮತ್ತು ಅವರ ದಾದಿಯೂ ಸಹ ಅದರಿಂದಲೇ ಮೃತ್ಯುವನ್ನಪ್ಪಿದರು. ಲಿಸ್ಬನ್‌ನಲ್ಲಿ ಡಾ|| ಕಮಾರ ಪೆಸ್ಟಾನ್ ಎಂಬವರು ಪ್ಲೇಗಿನಿಂದ ಸತ್ತವನ ಶವಪರೀಕ್ಷೆ ಮಾಡುತ್ತಿದ್ದಾಗ ಪ್ಲೇಗನ್ನು ಅಂಟಿಸಿಕೊಂಡು ಸಾಯು ವಂತಾಯಿತು.

ಅತ್ಯಂತ ಮಾರಕ ವ್ಯಾಧಿಪ್ಲೇಗ್‌ನೊಂದಿಗೆ ಮುಖಾಮುಖಿಯಾಗಿ ಹಗಲುರಾತ್ರಿ ಗಳೆನ್ನದೆ ಅದನ್ನು ಪಳಗಿಸಲು ಸೆಣಸುತ್ತಿದ್ದ ಹಾಫ್‌ಕಿನ್ ಬೇರೆಲ್ಲರಿಗಿಂತ ಹೆಚ್ಚಿನ ಅಪಾಯದ ಸ್ಥಿತಿಯಲ್ಲಿದ್ದರು. ಅದು ತಗುಲಿದ್ದ ಇಬ್ಬರಲ್ಲಿ ಒಬ್ಬನು ಬಲಿಯಾಗುವ ಸ್ಥಿತಿ ಇದ್ದಿತಾದರೂ

ಅವರು ಯಾವುದೇ ಭಯಭೀತಿ ಇಲ್ಲದೆ ಅದರ ಬಗೆಗೆ ಸಂಶೋಧನೆ ಹಾಗೂ ವ್ಯಾಕ್ಸೀನ್ ತಯಾರಿಸುವ ದಂಧೆಯಲ್ಲಿ ತೊಡಗಿಸಿಕೊಂಡಿರುತ್ತಿದ್ದರು. ಅವರೇ ತಯಾರಿಸುತ್ತಿದ್ದ ವ್ಯಾಕ್ಸೀನು ರೋಗ ಪ್ರತಿಬಂಧಕ ಸಾಮರ್ಥ್ಯವನ್ನು ಹೊಂದಿರುತ್ತದೆಂಬ ಅಚಲ ನಂಬಿಕೆಯೇ ಅವರಿಗೆ ಸ್ಫೂರ್ತಿಯಾಗಿತ್ತು. ಮುಂದಿನ ವರ್ಷ ಅವರು ಲಂಡನ್ನಿಗೆ ಭೇಟಿ ನೀಡಿದಾಗ **ನ್ಯೂಸ್ ಕ್ರಾನಿಕಲ್** ಪತ್ರಿಕೆಗೆ ನೀಡಿದ ಸಂದರ್ಭರ್ಶನವನ್ನು ಇಲ್ಲಿ ಉಲ್ಲೇಖಿಸಬಹುದು.

''ಇಷ್ಟೆಲ್ಲಾ ಮಾಡುತ್ತಿದ್ದರೂ ನಿಮಗೆ ಪ್ಲೇಗ್ ತಗಲಿಲ್ಲವೇ?''

''ನನ್ನ ದುಗ್ಧಗ್ರಂಥಿಗಳು ಒಂದು ಸಾರಿ ಊದಿಕೊಂಡಿರುತ್ತಿದ್ದವು; ಆದರೆ ಅದು ಬಹಳ ದಿನ ಮುಂದುವರಿಯಲಿಲ್ಲ'' ಎಂದು ಹಾಫ್‌ಕಿನ್ ಒಪ್ಪಿಕೊಂಡರು.

''ಅಂದರೆ ನೀವು ಕಾಯಿಲೆಗೆ ಬಲಿಯಾಗದಿದ್ದುದಕ್ಕೆ ವ್ಯಾಕ್ಸಿನೇಷನ್ ಕಾರಣ ವೆನ್ನುತ್ತೀರಾ'' ಮುಗುಳು ನಗುತ್ತಾ ಹಾಫ್ಕಿನ್ ಮುಂದುವರಿದು ''ಯಾವುದನ್ನೂ ಹೇಳು ವಂತಿಲ್ಲ...'' ಸ್ವಲ್ಪ ನಿಲ್ಲಿಸಿ ಮತ್ತೆ ''ಅದು ಹಾಗೆಯೇ ಇರಬೇಕೆಂದು ಭಾವಿಸುತ್ತೇನೆ ಮುಂಬಯಿಯಲ್ಲಿ ನಾವು ಇನಾಕ್ಯುಲೇಷನ್ ಮಾಡಿದಯಾರೊಬ್ಬ ಯುರೋಪಿಯನ್ನನೂ ಪ್ಲೇಗಿನಿಂದ ಸತ್ತಿರಲಿಲ್ಲ.''

ಮುಂಬಯಿಯ ಮೆಡಿಕಲ್ ಅಸೋಷಿಯೇಷನ್ 1898 ಶರತ್ಕಾಲದಲ್ಲಿ ಹಾಫ್‌ಕಿನ್ನರ ಚಟುವಟಿಕೆಗಳನ್ನು ಕುರಿತು ಚರ್ಚಾಘೋಷ್ಠಿಯನ್ನು ಏರ್ಪಡಿಸಿತ್ತು. ಅದಕ್ಕೆ ನೂರಾರು ಮಂದಿ ವೈದ್ಯರು ಸದಸ್ಯರಾಗಿದ್ದರು. ಅದರ ಬಹುಪಾಲು ಸದಸ್ಯರು ಮೊದಲಿ ನಿಂದಲೂ ಇನಾಕ್ಯುಲೇಅನ್ ಪದ್ಧತಿಯ ಆಚರಣೆಯಿಂದ ಲಭಿಸುತ್ತಿದ್ದ ಫಲಿತಾಂಶಗಳನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತಿದ್ದರು. ಕೆಲವರಂತೂ ತಮ್ಮ ರೋಗಿಗಳು ಅವರ ದೇಹಗಳನ್ನು ''ಇಂಗ್ಲಿಷ್‌ವಿಷ''ದಿಂದ ಕೆಡಿಸಿಕೊಳ್ಳಬಾರದೆಂದು ಹೇಳಿ, ಅವರೆಲ್ಲಾ ಇನಾಕ್ಯುಲೇಷನ್ ಮಾಡಿಸಿಕೊಳ್ಳದಂತೆ ಸಲಹೆ ನೀಡುತ್ತಿದ್ದರು. ನಿಜ ಹೇಳಬೇಕೆಂದರೆ ಆ ಸಮಯದ ಭಾರತೀಯ ವೈದ್ಯರಲ್ಲನೇಕರು ಅವರನ್ನು ತಮ್ಮ ಪ್ರತಿಸ್ಪರ್ಧಿಯೆಂದೇ ಭಾವಿಸುತ್ತಿದ್ದರು. ಆದರೂ ಅಂತಹ ಒಂದು ರೋಗ ನಿರೋಧಕ ವ್ಯಾಕ್ಸೀನು ತಯಾರಾದ ನಂತರ (ಯಜುರ್ವೇದದ ಕಾಲದಿಂದಲೂ ಪ್ಲೇಗಿಗೆ ಯಾವುದೇ ಮದ್ದು ಲಭ್ಯವಿರದಿದ್ದು ರಿಂದ) ಅದನ್ನು ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಅವರಲ್ಲುಂಟಾಯಿತು. ಅದರಿಂದ ಮೆಡಿಕಲ್ ಅಸೋಸಿಯೇಷನ್‌ನವರು ಅದರ ಪರವಾಗಿ ಒಂದು ನಿರ್ಣಯ ಮಾಡಬೇಕಾಯಿತು. ಹಾಫ್‌ಕಿನ್ ತಯಾರಿಸುತ್ತಿರುವ ವ್ಯಾಕ್ಸೀನಿನ ಬಳಕೆಯಿಂದ ಉಪಯುಕ್ತವೆನ್ನಬಹುದಾದ ವರದಿಗಳಿರುವುದರಿಂದ ವ್ಯಾಕ್ಸೀನಿನ ಬಳಕೆಯಿಂದ ಮುಂಬಯಿಯ ವೈದ್ಯರೆಲ್ಲರೂ ಪ್ಲೇಗನ್ನು ತಡೆಗಟ್ಟುವ ಸಲುವಾಗಿ ಬಳಸಬಹುದೆಂದು ಸರ್ವಾನುಮತದ ನಿರ್ಣಯವಾಯಿತು. ಅದರಿಂದ ಹಾಫ್‌ಕಿನ್ನರ ಪದ್ಧತಿಯ ವಿರುದ್ಧ ಇದ್ದ ಕಟ್ಟಕಡೆಯ ವಿರೋಧಿಗಳೂ ಶರಣಾದಂತಾಯಿತು.

ಈ ನಡುವೆ ಹಾಫ್‌ಕಿನ್ ಮತ್ತು ಅವರ ಸಹಾಯ ಸಿಬ್ಬಂದಿಗಳು ಯಾವ ಪ್ರದೇಶಗಳಲ್ಲಿ ಪ್ಲೇಗಿನ ಹಾವಳಿ ಹೆಚ್ಚಾಗಿ ಉದ್ಭವಿಸುತ್ತಿವೆಯೆಂಬ ಪ್ರತಿ ವಾರದ

ವರದಿಗಳನ್ನು ಗಮನಿಸುತ್ತಿದ್ದರು. ಅಂತಹ ಜಾಗಗಳಿಗೆ ಅವರೆಲ್ಲಾ ತಕ್ಷಣ ಧಾವಿಸಿ ಇನಾಕ್ಯುಲೇಷನ್‌ಗಳನ್ನು ಜರುಗಿಸಿ ಆ ವ್ಯಾಧಿ ಅಲ್ಲಿಗೆ ಸೀಮಿತವಾಗುವಂತೆ ನೋಡಿಕೊಳ್ಳು ತ್ತಿದ್ದರು. ಈ ಉದ್ದೇಶಕ್ಕಾಗಿ ಪೂನಾದಲ್ಲಿದ್ದ ಮುಂಬಯಿ ಗೌವರ್ನರ್‌ರ ಬೇಸಿಗೆ ನಿವಾಸದ ಆಜುಬಾಜು ಪ್ರದೇಶಗಳು, ಬರೋಡಾದ ಕೆಲವು ಹಳ್ಳಿಗಳೂ ಹಾಗೂ ಧಾರವಾಡದ ಜೈಲುಗಳಿಗೆಲ್ಲಾ ಹೋಗಬೇಕಾಯಿತು. ವ್ಲಾದಿಮಿರ್ ಹಾಫ್‌ಕಿನ್ನರು ಕಾಲರಾ ವಿರುದ್ಧ ರೂಪಿಸಿದ್ದ ವ್ಯಾಕ್ಸೀನ್ ಮತ್ತು ಪ್ಲೇಗ್ ನಿರೋಧಕ ವ್ಯಾಕ್ಸೀನ್‌ಗಳೆರಡೂ ಈಗ ಬಡವ-ಬಲ್ಲಿದ, ಹೆಂಗಸು-ಗಂಡಸು, ಕೈದಿಗಳು-ರೈತಾಪಿ ಜನರು, ಸಿಪಾಯಿ-ಜನರಲ್‌ಗಳು ಹೀಗೆ ಎಲ್ಲಾ ವರ್ಗದವರಿಗೂ ಯಾವುದೇ ಭೇಧಬಾವವಿಲ್ಲದೆ ದೊರೆಯುವಂತಾಗಿತ್ತು.

## ವಿಜಯಪತಾಕೆ

ಡಿಸೆಂಬರ್ ಹೊತ್ತಿಗೆ ಹಾಫ್‌ಕಿನ್ನರ ವ್ಯಾಕ್ಸೀನು ಇನ್ನೂ ಅಳಿದುಳಿದ ಅಡೆತಡೆಗಳನ್ನು ನಿವಾರಿಸಿಕೊಂಡು ವಿಜಯಪತಾಕೆಯನ್ನು ಹಾರಿಸಿದಂತಾಯಿತು. ಪ್ರತಿವಾರ ವ್ಯಾಕ್ಸೀನಿನ ಸಾವಿರಾರು ಡೋಸುಗಳು ಮುಂಬಯಿಯಿಂದ ಇಂಗ್ಲೆಂಡ್, ಫ್ರಾನ್ಸ್, ಪೋರ್ಚುಗಲ್ ಮುಂತಾದ ವಿದೇಶಗಳಿಗೆ ಹಡಗುಗಳ ಮೂಲಕ ರವಾನಿಸಲ್ಪಡುತ್ತಿತ್ತು. ಲಿಸ್ಬನ್, ಮರ್ಸೇಲಿಸ್, ಓಪೋರ್ಟೋ ಮುಂತಾದ ಕಡೆಗಳಲ್ಲಿ ಪ್ಲೇಗ್ ಆಗಿಂದಾಗ್ಗೆ ತಲೆ ಎತ್ತುತ್ತಲೇ ಇತ್ತು. ಈಗ ಹಾಫ್‌ಕಿನ್ ಲಿಂಫ್ ಇಂಜಕ್ಷನ್ ಟ್ಯೂಬ್‌ಗಳಲ್ಲಿ ಲಭ್ಯವಾಗುತ್ತಿದ್ದು ಖಾಸಗಿ ವೈದ್ಯರಿಗೂ ಅವುಗಳನ್ನು ಪೂರೈಸಲಾಗುತ್ತಿತ್ತು; ಹೀಗೆ ವ್ಯಾಪಕವಾಗಿ ವ್ಯಾಕ್ಸೀನ್ ದೊರೆಯುತ್ತಿದ್ದುದರಿಂದ ಆಗಾಗ್ಗೆ ತಲೆದೋರುತ್ತಿದ್ದ ''ಕರಾಳ ಸಾವಿನ'' ಸಾಂಕ್ರಾಮಿಕದ ಬಗೆಗಿನ ಆತಂಕ ಜನರಲ್ಲಿ ಕಡಿಮೆಯಾಗತೊಡಗಿತ್ತು. ''ಹಾಫ್‌ಕೀನಿಕರಿಸು'' ಎಂಬ ಹೊಸದೊಂದು ಪದವು ಬ್ರಿಟಿಷ್ ಮೆಡಿಕಲ್ ಪತ್ರಿಕೆಗಳಲ್ಲಿ ಕಾಣಸಿಕೊಳ್ಳತೊಡಗಿತು. ಮುಂಬಯಿಯ ಪುರಸಭೆ ಹಾಫ್‌ಕಿನ್ನರಿಗೆ ತನ್ನ ಆಭಾರಮನ್ನಣೆಯ ಬಗೆಗೆ ನಿರ್ಣಯ ಮಾಡಿ ಗೌರವ ಸೂಚಿಸಿತು. ಬ್ರಿಟನ್ನಿನ ವಿಕ್ಟೋರಿಯಾ ಮಹಾರಾಣಿ, ಕಂಪ್ಯಾನಿಯನ್ ಆಫ್‌ದ ಆರ್ಡರ್ ಆಫ್ ಇಂಡಿಯನ್ ಎಂಪೈರ್ (C.I.E) ಸನ್ನದನ್ನು ದಯಪಾಲಿಸತು. ಅವೆಲ್ಲಕ್ಕಿಂತಲೂ ಹಾಫ್‌ಕಿನ್ನರಿಗೆ ಮಹಾದಾನಂದಕರ ಘಟನೆಯೊಂದು 1898ರ ಕೊನೆಯ ದಿನದಲ್ಲಿ ಕಾಯ್ದು ಕೊಂಡಿತ್ತು.

ಮುಂಬಯಿಯಯಲ್ಲಿ ಆತನಕ ಇದ್ದ ಡಾ॥ ಲೇವಿನ್ ಮತ್ತು ಡಾ॥ ವಿಗುರ ಅವರು ಸ್ವದೇಶಕ್ಕೆ ಹಿಂದಿರುಗಿದರು; ಅವರ ಸ್ಥಾನದಲ್ಲಿ ಡಾ॥ ಕಸ್ಕಡಮೋವ್ ಎಂಬವರು ಬಂದರು. ಅವರು ಮುಂಬಯಿಗೆ ಬರುವ ಕೆಲವು ತಿಂಗಳ ಮೊದಲೇ ಭಾರತದಲ್ಲಿದ್ದ ಸ್ವದೇಶ ಬಾಂಧವ ಹಾಫ್‌ಕಿನ್ನರೊಡನೆ ಆತ್ಮೀಯ ಸ್ನೇಹಸಂಬಂಧ ಬೆಳೆದಿತ್ತು. ರಷ್ಯಾದ ಆಸ್ಪತ್ರೆಯ ವೈದ್ಯಕೀಯ ಪತ್ರಿಕೆಗಳಲ್ಲಿ ಪ್ರತಿವಾರ ಅವರು ಪ್ರಕಟಿಸುತ್ತಿದ್ದ ''ಮುಂಬಯಿ ಪತ್ರಗಳು'' ಎಂಬ ಲೇಖನ ಮಾಲೆಯಲ್ಲಿ ಹಾಫ್‌ಕಿನ್ ಮತ್ತು ಅವರ ಅವರ

ಸಂಶೋಧನೆಗಳ ಬಗೆಗೆ ಒಂದಲ್ಲ ಒಂದು ಪ್ರಸ್ತಾಪಗಳಿರುತ್ತಿದ್ದವು. ಕಸ್ಕಡಮೋವ್ ಮುಂಬಯಿಗೆ ಆಗಮಿಸಿದ ಒಂದೆರಡು ದಿನಗಳಲ್ಲೇ-ಡಿಸೆಂಬರ್ 31 (1898)ರ ಸಾಯಂಕಾಲ ಹಾಫ್‌ಕಿನ್ನರಿಗೆ ರಷ್ಯಾದ ಸುದ್ದಿ ಸಮಾಚಾರಗಳ ಬಗೆಗೆ ಟೆಲಿಫೋನ್‌ನಲ್ಲಿ ಸಂಭಾಷಣೆ ನಡೆಸಿದರು. ರಷ್ಯಾಕ್ಕೆ ಹಿಂದಿರುಗಿದ ಡಾ॥ವಿಗುರ ಅವರಿಂದ ಆ ದಿನವೇ ಪತ್ರೊವೊಂದು ಬಂದಿತ್ತು. ಇತರ ಹಲವಾರು ವಿಷಯಗಳ ಜೊತೆಗೇ ರಷ್ಯಾ ಸರ್ಕಾರದ ವತಿಯಿಂದ ಸೇಯಿಂಟ್ ಪೀಟರ್ಸ್ ಬರ್ಗ್‌ನ ಇನ್ಸಿಟಿಟ್ಯೂಟ್ ಆಫ್ ಎಕ್ಸ್‌ಪಿರಿಮೆಂಟಲ್ ಮೆಡಿಸಿನ್ ಪ್ಲೇಗ್‌ಗೆ ಸಂಬಂಧಿಸಿದ ಪ್ರಯೋಗಾಲಯವೊಂದನ್ನು ಸ್ಥಾಪಿಸಿದ ವಿಷಯವನ್ನು ಬರೆದಿದ್ದರು. ಪ್ರಯೋಗಾಲಯವು ಫೋರ್ಟ್ ಅಲೆಗ್ಸಾಂಡರ್ ಎಂಬ ಹಿಂದಿನ ಕೋಟೆಯ ಆವರಣದಲ್ಲಿತ್ತು. ಕೋಟೆಯು ಕ್ರೊನ್ಸಟಾಡಟ್ ಎಂಬ ಪುಟ್ಟ ದ್ವೀಪದಲ್ಲಿದ್ದು ಹಿಂದೆ ಬಂದೂಕುಗಳ ಉಗ್ರಾಣವಾಗಿತ್ತಂತೆ. ಅದರಲ್ಲೀಗ ಪ್ಲೇಗ್ ವ್ಯಾಧಿಯ ಚಿಕಿತ್ಸೆಗೆ ಬಳಸುತ್ತಿದ್ದ ''ಪ್ಲೇಗ್ ಲಸಿಕೆ'' ಮತ್ತು ಅದೇ ರೋಗವನ್ನು ಪ್ರತಿಬಂಧಿಸುವ ವ್ಯಾಕ್ಸೀನನ್ನು ತಯಾರಿಸುವ ಸಲುವಾಗಿಯೂ ಬಳಸಲಾಗುತ್ತಿತ್ತು. ಈ ಎಲ್ಲಾ ಪ್ರಗತಿಗಳಿಂದ ಪ್ಲೇಗ್‌ವಿರುದ್ಧದ ಸಮರದ ಮೊದಲ ಸುತ್ತನ್ನು ಗೆದ್ದಂತಾಗಿತ್ತು. ಆ ವರ್ಷಾಂತ್ಯದೊಳಗೇ ಅನ್‌ಜೋಬ್ ಎಂಬ ಗುಡ್ಡಗಾಡಿನ ಪ್ರದೇಶದಲ್ಲಿ ಪ್ಲೇಗ್ ತಲೆದೋರಿತ್ತು; ಮಧ್ಯ ಏಷ್ಯಾದ ಸಮರ್‌ಖಾಂಡದ ಹತ್ತಿರವಿದ್ದ ಆ ಪ್ರದೇಶಕ್ಕೆ ವೈದ್ಯರು ಧಾವಿಸುವಷ್ಟರಲ್ಲೇ ಅಲ್ಲಿದ್ದ 387 ಜನರ ಪೈಕಿ ಕೇವಲ 150 ಜನ ಬದುಕಿ ಉಳಿದುಕೊಂಡಿದ್ದರು. ಅವರಿಗೆಲ್ಲಾ ಹಾಫ್‌ಕಿನ್ನರ ಲಿಂಫ ಅಲ್ಲದೆ, ಪ್ಲೇಗ್ ಸೀರಮನ್ನೂ (ರಸಿಕೆ) ಸಹ ನೀಡಲಾಯಿತು. ಹಾಗೂ ನೈರ್ಮಲ್ಯದ ಕಾರ್ಯಕ್ರಮಗಳನ್ನೂ ಜಾರಿಗೊಳಿಸಲಾಯಿತು. ಅದರಿಂದ ಸಾವಿನದವಡೆಯಮಲ್ಲಿದ್ದ ಅವರನ್ನೆಲ್ಲಾ ಬದುಕಿಸಿದಂತಾಯಿತು. ಡಾ॥ವಿಗುರ ತಮ್ಮ ಪತ್ರದಲ್ಲಿ ''ಹಾಫ್‌ಕಿನ್ನ ಲಿಂಫ್‌ಗೆ ಮುಂದೆ ಯಾವ ತರಹೆಯ ಭವಿಷ್ಯ ಕಾದಿರಬಹುದಾದರೂ, ಆ ಸೋಲು ಕಾಣದ ಯುವ ವಿಜ್ಞಾನಿಯ ಹೆಸರು ವಿಜ್ಞಾನ ಲೋಕದಲ್ಲಿ ಶಾಶ್ವತವಾಗಿ ಉಳಿದುಕೊಳ್ಳುವುದರಲ್ಲಿ ಸಂದೇಹ ವಿಲ್ಲ'' ಎಂದು ಬರೆದಿದ್ದರು.

## ೧೨

# ''ಕೇಸರಿ'' VS ''ಸಿಂಹ''

### ಮೆಚ್ಚುಗೆ -ಸಂತೃಪ್ತಿ

ಭಾರತದಲ್ಲಿ ಕಾಲರಾ ಮತ್ತು ಪ್ಲೇಗುಗಳಂಥ ಸೋಂಕುಗಳ ವಿರುದ್ಧ ಪ್ರತಿಬಂಧಕ ವ್ಯಾಕ್ಸೀನುಗಳನ್ನು ಆವಿಷ್ಕರಿಸಿ, ಅವರೊಬ್ಬ ನುರಿತ ಮಿಣಜೀವಿ ಶಾಸ್ತ್ರಜ್ಞರೆಂದು ಪ್ರಪಂಚದಾದ್ಯಂತ ಖ್ಯಾತಿ ಪಡೆದಿದ್ದರು. ಸುಮಾರು ಎರಡು ವರ್ಷಗಳಿಗಿಂತಲೂ ಹೆಚ್ಚು ಸಮಯ ಭಾರತದಲ್ಲಿ ಎಡಬಿಡದೆ ಕಾರ್ಯನಿರ್ವಹಿಸಿ ಸ್ವಲ್ಪ ಸಮಯ ವಿಶ್ರಾಂತಿಗಾಗಿ 1899ರ ಬೇಸಿಗೆಯಲ್ಲಿ ಲಂಡನ್ನಿಗೆ ಆಗಮಿಸಿದರು. ಇಂಗ್ಲೆಂಡಿನಲ್ಲಿ ಅವರಾಗಲೇ ಒಬ್ಬ ಪ್ರಖ್ಯಾತ ವಿಜ್ಞಾನಿಯೆಂದು ವೈಜ್ಞಾನಿಕ ಕ್ಷೇತ್ರದಲ್ಲೇ ಅಲ್ಲದೆ ಸಾಮಾಜಿಕ ವಲಯದಲ್ಲೂ ಹೆಸರುವಾಸಿಯಾಗಿದ್ದರು. ಅವರು ಲಂಡನ್ ತಲುಪುವಷ್ಟರಲ್ಲೇ ಅವರ ಸಾಧನೆಗಳ ಬಗೆಗೆ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿದ್ದವು **ದ ಟೈಮ್ಸ್, ನ್ಯೂಸ್ ಕ್ರಾನಿಕಲ್, ದ ಲಿವರ್‌ಪೂಲ್ ಮರ್ಕ್ಯುರಿ, ದ ವೆಸ್ಟ್ ಮಿನಿಸ್ಟರ್ ಗೆಜೆಟ್** ಮುಂತಾದ ಪತ್ರಿಕೆಗಳೆಲ್ಲಾ ತಮ್ಮ ರಾಜಕೀಯ ಹಾಗೂ ಸಾಮಾಜಿಕ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಹಾಫ್‌ಕಿನ್ನರನ್ನು ಹಾಡಿ ಹೊಗಳಿ ಲೇಖನ ಬರೆದಿದ್ದವು. ಭಾರತದಲ್ಲಿದ್ದ ಪ್ಲೇಗಿನ ಸಾಂಕ್ರಾಮಿಕತೆಯ ಭೀಕರತೆ, ಅದರ ವಿರುದ್ಧ ಹಾಫ್‌ಕಿನ್ ಮುಖಾಮುಖಿಯಾಗಿ ಸೆಣಸಿ, ಸಂಶೋಧನೆಗಳನ್ನು ಕೈಗೊಂಡು ಸಾಧಿಸಿದ ಸಾಧನೆಗಳ ಫಲಿತಾಂಶಗಳ ವಿವರಣೆ ಆ ಲೇಖನಗಳ ವಿಷಯವಾಗಿದ್ದವು. ಪ್ಲೇಗ್ ವ್ಯಾಕ್ಸೀನನ್ನು ಕಂಡುಹಿಡಿದಿದ್ದ ಹಾಫ್‌ಕಿನ್‌ರೊಬ್ಬ ಮಾನವ ಕುಲರಕ್ಷಕ, ಲೋಕೋಪಕಾರಿ ಎಂದೆಲ್ಲಾ ಹೊಗಳಿದ್ದವು. ಅವರ ವೈಯಕ್ತಿಕ ಗುಣ ವಿಶೇಷಗಳನ್ನೇ ಅಲ್ಲದೆ ವೈಜ್ಞಾನಿಕವಾಗಿ ಅವರ ಸಾಧನೆಗಳ ಬಗೆಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದವು.

''ಪ್ರಸ್ತುತ ಕಾಲವನ್ನು ಯುವ ಜನರಯುಗವೆನ್ನಬಹುದು. ಇನ್ನೂ ನಲವತ್ತು ವರ್ಷಗಳನ್ನು ದಾಟದ ಡಾ|| ಹಾಫ್‌ಕಿನ್ ಮಾನವಕುಲದ ಭೀಕರ ಪಿಡುಗೆನಿಸಿದ ಪ್ಲೇಗ್ ವ್ಯಾಧಿಯನ್ನು ನಿಯಂತ್ರಿಸುವಲ್ಲಿ ಅವರ ಸಾಧನೆ ಮಹತ್ತರವಾದುದು. ಮಧ್ಯಮ ಎತ್ತರದ, ಸಣಕಲು ದೇಹದ ಸುಂದರವದನದ ಹಾಫ್‌ಕಿನ್ ಅವರಿಗಾಗಿರುವ ವಯಸ್ಸಿಗಿಂತಲೂ ಕಿರಿಯವರಂತೆ ಕಾಣಿಸುತ್ತಾರೆ. ಅವರ ಮುಖದಲ್ಲಿ ''ಸಿಮಿಟಿಕ್'' (Semitic) ಜನಾಂಗದ ವರಲಕ್ಷಣಗಳನ್ನು ಗುರುತಿಸುವುದು ಸಾಧ್ಯ; ಅವರೊಬ್ಬರಷ್ಯನ್ ಯೆಹೂದಿಯೆಂದು ಹೇಳುವುದು ಸಹಾ ತೀರ ಅಸಂಭವವೆನಿಸುತ್ತಿತ್ತು. ಬಿಟ್ಟುಬಿಟ್ಟು ಹಿಡಿದು ಮಾತಾಡುವಂತಿ

ದ್ದರೂ, (ತಾಯ್ನುಡಿಯಿಂದ ಅನುವಾದಿಸಿ ಮಾತಾಡುವಂತೆ) ಅವರಾಡುತ್ತಿದ್ದ ಇಂಗ್ಲಿಷ್ ಉತ್ಕೃಷ್ಟ ಶೈಲಿಯದಾಗಿರುತ್ತದೆ; ಅವರದು ಗಂಭೀರ ಹಾಗೂ ಶಾಂತ ಸ್ವಭಾವ; ಅವರ ವಿನಯ ಶೀಲತೆ ನಿಜವಾದ ಮಹಾಪುರಷರಲ್ಲಿ ಕಾಣಬಹುದಾದ ಚೊಕ್ಕಲಕ್ಷಣದಂತಿದೆ'' ಎಂದೆಲ್ಲಾ ಒಂದು ಪತ್ರಿಕೆ ಅವರ ನೈಜ ಚಿತ್ರಣವನ್ನು ನೀಡಿತ್ತು. ಅವರೊಬ್ಬ ಅತಿ ಬುದ್ಧಿವಂತನೆಂಬುದನ್ನು ಅವರ ಮುಖ ಮುದ್ರೆಯಿಂದಲೇ ಗ್ರಹಿಸಬಹುದಾಗಿತ್ತು ಎಂದು ಇನ್ನೊಂದುಪತ್ರಿಕೆ ಬರೆದಿತ್ತು.

ಅವರಲ್ಲಿ ಇಂಗ್ಲಿಷ್ ಜನರಿಗಿದ್ದ ಸದ್ಭಾವನೆ ಕೆಲವರು ಬರೆಯುತ್ತಿದ್ದ ಪತ್ರಿಕಾ ಲೇಖನಗಳಲ್ಲಿ ವ್ಯಕ್ತಪಡುತ್ತಿತ್ತು. ಅವುಗಳಲ್ಲಿ ಹಾಫ್‌ಕಿನ್ನರ ಸಾಹಸ ಕಾರ್ಯಗಳಿಗೆ ತಮ್ಮ ಮೆಚ್ಚುಗೆ ಮತ್ತು ಕೃತಜ್ಞತೆಗಳನ್ನು ಸಲ್ಲಿಸಿರುತ್ತಿದ್ದರು. ವೈದ್ಯಕೀಯ ಪತ್ರಿಕೆಗಳೂ ಸಹಾ ಈ ದಿಸೆಯಲ್ಲಿ ಹಿಂದೆ ಬೀಳಲ್ಲಿ; **ಲ್ಯಾನ್ಸೆಟ್ ಮತ್ತು ಬ್ರಿಟಿಷ್ ಮೆಡಿಕಲ್ ಜರ್ನಲ್** ಪತ್ರಿಕೆಗಳಲ್ಲಿ ಹಲವು ಮಿಣಜೀವಿ ಶಾಸ್ತ್ರಜ್ಞರು ಕಾಲರಾ ಮತ್ತು ಪ್ಲೇಗ್ ವ್ಯಾಧಿಗಳ ಬಗೆಗೆ ಹಾಫ್‌ಕಿನ್ ಸಂಶೋಧನಾ ಫಲಿತಾಂಶಗಳ ಬಗೆಗೆ ತಮ್ಮ ತೃಪ್ತಿಯನ್ನು ವ್ಯಕ್ತಪಡಿಸಿದ್ದರು.

ಹಾಫ್‌ಕಿನ್ನರ ವೈಯಕ್ತಿಕ ಯೋಗ್ಯತೆಯ ಬಗೆಗೆ ಒಂದು ಕಡೆ ಮೆಚ್ಚುಗೆಗಳು ವ್ಯಕ್ತವಾಗುತ್ತಿರುವಂತೆಯೇ ಅವರ ವ್ಯಾಕ್ಸೀನಿನ ಭವಿಷ್ಯದ ಬಗೆಗೆ ಪತ್ರಿಕೆಗಳಲ್ಲಿ ಗಂಭೀರ ಸ್ವರೂಪದ ಚರ್ಚೆಗಳ ನಡೆಯುತ್ತಿದ್ದವು; ಬಹುಪಾಲುಗಳಲ್ಲಿ ವ್ಯಾಕ್ಸೀನಿನ ಯಶಸ್ಸು ಅದೆಷ್ಟು ಸಂತೃಪ್ತಿಯಾಗಿತ್ತೆಂದರೆ, ಅಂತಹ ಸೋಂಕುರೋಗಗಳನ್ನು ಸಂಪೂರ್ಣವಾಗಿ ನಿರ್ನಾಮ ಮಾಡಲು ಸಾಧ್ಯವಾದಲ್ಲಿ ವಸಾಹತುಗಳಲ್ಲಿ ಬಿಳಿಯರ ಸಾಮ್ರಾಜ್ಯ ನೆಲೆಯೂರಿ ನಿಲ್ಲುವುದಕ್ಕೆ ಅಸ್ತಿಭಾರ ಹಾಕಿದಂತೆಯೇ ಎಂದು ಸಂತೋಷ ಪಡುವವರಿಗೇನೂ ಕಡಿಮೆ ಇರಲಿಲ್ಲವೆಂದು **ದ ವೆಸ್ಟ್‌ಮಿನಿಸ್ಟರ್ ಗೆಜೆಟ್** ಪತ್ರಿಕೆಯಲ್ಲಿ ವ್ಯಕ್ತವಾದರೆ **ದಡೈಲಿ ಕ್ರಾನಿಕಲ್**‌ನಲ್ಲಿ ವಸಾಹತುಗಳಲ್ಲಿರುವ ದೇಶೀಯ ಜನರು, ಬಿಳಿಯ ಜನಾಂಗದವರು ಮಾಡಿದ ಉಪಕಾರಕ್ಕೆ ಎಂದಿಗೂ ಕೃತಜ್ಞರಾಗಿರಬೇಕಾಗುತ್ತದೆಂದು ಬರೆದಿತ್ತು.

ಪತ್ರಿಕೆಗಳಲ್ಲಿ ವ್ಯಕ್ತವಾದ ವಸಾಹತುಶಾಹಿ ದೃಷ್ಟಿ ಕೋನವನ್ನು ಪ್ರತಿಬಿಂಬಿಸುವ ಲೇಖನಗಳು ಹಾಫ್‌ಕಿನ್ನರ ಒಲವು, ಅಭಿರುಚಿಗಳಿಗೆ ಒಗ್ಗುವಂತಹವಾಗಿರಲಿಲ್ಲ. ಮುಂಬಯಿಯ ಅವರ ಪ್ರಯೋಗಾಲಯದಲ್ಲಿ ಯುರೋಪಿಯನ್ ಮತ್ತು ಭಾರತೀಯ ಕೆಲಸಗಾರರೆಲ್ಲಾ ಯಾವುದೇ ತಾರತಮ್ಯವಿಲ್ಲದೆ ಕಾರ್ಯನಿರತರಾಗಿದ್ದರು; ಎಲ್ಲರೂ ಒಂದೇ ಬಗೆಯ ಅಪಾಯವನ್ನು ಎದುರಿಸುವ ಸ್ಥಿತಿಯಲ್ಲಿದ್ದರು; ಅಲ್ಲಿ ಯಾವುದೇ ರೀತಿಯ ಅಸಮಾನತೆಗಳಿಗೆ ಅವಕಾಶಗಳಿರಲಿಲ್ಲ. ಸ್ವತಃ ಹಾಫ್‌ಕಿನ್ನರೇ ಭಾರತೀಯರನ್ನು ಪ್ರೀತ್ಯಾಧಾರಗಳಿಂದ ನೋಡುತ್ತಿದ್ದರು; ಹಾಗಾಗಿ ಮುಂಬಯಿಯ ವಲಯದಲ್ಲಿ ಅದರಲ್ಲೂ ಸ್ಥಳೀಯ ವೈದ್ಯ ಸಮೂಹದವರಲ್ಲಿ ಅವರಿಗೆ ಬಹಳಷ್ಟು ಆತ್ಮೀಯ ಸ್ನೇಹಿತರಿದ್ದರು. ಅವರ ಸಂಬಂಧಿಯೊಬ್ಬರು ಮುಂಬಯಿಯಲ್ಲಿ ಭೇಟಿಯಾದಾಗ ಭಾರತೀಯರು ಬ್ರಿಟಿಷ್ ದುರಾಡಳಿತದ ಕಷ್ಟಕೋಟಲೆಗಳಿಂದ ಬಳಲುವುದನ್ನು ನೋಡಿದಾಗಲೆಲ್ಲಾ

ಝಾರ್ ದೊರೆ ಅಲೆಗ್ಸಾಂಡರ್ ಮತ್ತು ನಿಕ್ಹೋಲಾಸ್ ರ ಆಡಳಿತ ಕಾಲಗಳಲ್ಲಿ ತಮ್ಮ ದೇಶದವರ ಕಷ್ಟಕಾರ್ಪಣ್ಯಗಳ ನೆನಪಾಗುತ್ತದೆಂದು ಹೇಳಿಕೊಂಡಿದ್ದರಂತೆ.

ಬ್ರಿಟಿಷ್ ವಲಯಗಳಲ್ಲಿ ಹಾಫ್‌ಕಿನ್‌ರಿಗೆ ಅವರ ಇನಾಕ್ಯುಲೇಷನ್ ಕಾರ್ಯದಲ್ಲಿ ಭಾರತೀಯರ ಅಸಹಕಾರ ಅಡ್ಡಬರುತ್ತದೆಂಬ ಅಭಿಪ್ರಾಯವಿದ್ದು, ಅದನ್ನೇ ಆಗಾಗ್ಗೆ ಪ್ರಚಾರ ಮಾಡುತ್ತಿದ್ದರು; ಹಾಫ್‌ಕಿನ್ನರು ಈ ಅಭಿಪ್ರಾಯವನ್ನು ಅಲ್ಲಗಳೆಯಲು ಭಾರತೀಯ ಸಮುದಾಯದಲ್ಲಿ ಇಂಗ್ಲೆಂಡಿನಲ್ಲಿ ಅಂತಹ ಪದ್ಧತಿ ಜಾರಿಗೆ ಬರುವುದಕ್ಕಿಂತಲೂ ಹಲವಾರು ಶತಮಾನಗಳ ಹಿಂದೆಯೇ ಪರೋಕ್ಷವಾಗಿ ಜಾರಿಗೊಳಿಸಿದ್ದರೆಂದು ಹೇಳುತ್ತಿದ್ದರು. ಅಲ್ಲದೆ ವಸಾಹತುಗಳಲ್ಲಿದ್ದ ಎಲ್ಲರಿಗೂ ವ್ಯಾಕ್ಸಿನೇಷನ್ ಮಾಡಿಸಬೇಕೆಂಬ ಅಭಿಲಾಷೆಯಿತ್ತು. ವಸಾಹತಿನ ಆರ್ಥಿಕ ವಿಚಾರಗಳ ಬಗೆಗೆ ಬಿಗಿಯಾದ ಹಿಡಿತವಿಟ್ಟುಕೊಂಡಿದ್ದ ಬ್ರಿಟಿಷರು ಮೂವತ್ತು ಕೋಟಿ ಜನರಿಗೆ ಅಂತಹ ಪದ್ಧತಿಯನ್ನು ಜಾರಿಗೆ ತರುವಲ್ಲಿನ ಖರ್ಚುವೆಚ್ಚಗಳನ್ನು ಭರಿಸುವುದಕ್ಕೆ ತಯಾರಿರಲ್ಲಿ. ಅದೊಂದು ರಾಜಕೀಯ ಕುತಂತ್ರದ ನೀತಿಯಾಗತ್ತೆನ್ನುವುದರಲ್ಲಿ ಅನುಮಾನವಿರಲಿಲ್ಲ. ಪ್ಲೇಗ್ ತಗುಲಿದ ಆಜುಬಾಜಿನ ಪ್ರದೇಶಗಳಲ್ಲಿ ಮಾತ್ರ ವ್ಯಾಪಕವಾಗಿ ಇನಾಕ್ಯುಲೇಷನ್ ಮಾಡಬೇಕಾಗಿರುತ್ತಲ್ಲದೆ, ದೇಶದ ಇಡೀ ಜನ ಸಮುದಾಯಕ್ಕಲ್ಲವೆಂಬುದರ ಅರಿವಿದ್ದರೂ ಸಹಾ ಅದನ್ನು ಪರಿಗಣಿಸುವುದು ವಸಾಹತುಷಾಹಿ ಸರ್ಕಾರಕ್ಕೆ ಬೇಕಿರಲಿಲ್ಲ.

ಇಂಗ್ಲೆಂಡಿನ ಪ್ರತಿಷ್ಠಿತ ರಾಯಲ್ ಸೊಸೈಟಿಯವರು 1899ರ ಜೂನ್ 8ರಂದು ಹಾಫ್‌ಕಿನ್ನರ ಭಾಷಣ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಸೋಂಕು ರೋಗಗಳನ್ನು ಪ್ರತಿಬಂದಿಸುವಲ್ಲಿ ಇನಾಕ್ಯುಲೆಷನ್‌ಗಳ ಪಾತ್ರದ ಬಗೆಗೆ ಅವರ ಭಾಷಣವನ್ನು ಕೇಳಲು ಬ್ರಿಟನ್ನಿನ ಎಲ್ಲಾ ಪ್ರಮುಖ ವಿಜ್ಞಾನಿಗಳು ಅಲ್ಲಿ ನೆರೆದಿದ್ದರು. ಹೆಸರಾಂತ ಶಸ್ತ್ರವೈದ್ಯರೂ, ರಾಯಲ್ ಸೊಸೈಟಿಯ ಮುಖ್ಯಸ್ಥರೂ ಆದ ಲಾರ್ಡ್‌ಲಿಸ್ಟರ್ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಕಾಲರಾ ಮತ್ತು ಪ್ಲೇಗು ರೋಗಗಳನ್ನು ಪ್ರತಿಬಂಧಿಸುವಲ್ಲಿ ಅವರು ಸಂಶೋಧನೆಗಳನ್ನು ಜರುಗಿಸಿ ರೋಗ ಪ್ರತಿಬಂದಕ ವ್ಯಾಕ್ಸೀನುಗಳನ್ನು ಆವಿಷ್ಕರಿಸಿದ್ದಲ್ಲದೆ ಅವುಗಳನ್ನು ಜನರ ಮೇಲೆ ಪ್ರಯೋಗಿಸುವ ಮೊದಲೇ ಅವರೇ ಸ್ವತಃ ಬಳಸಿಕೊಂಡಾಗಿನ ಅನುಭವ ಮತ್ತು ನಂತರ ಅವು ವ್ಯಾಪಕವಾಗಿ ಜಾರಿಗೆ ಬಂದಾಗಿನ ಯಶೋಗಾಥೆಯನ್ನು ಸವಿವರವಾಗಿ ತಿಳಿಸಿದರು. ಅವರ ಪ್ರತಿ ಮಾತಿಗೂ ರೋಮಾಂಚನಗೊಳ್ಳುತ್ತಿದ್ದ ವಿಜ್ಞಾನಿಗಳು ನಡು ನಡುವೆ ಕರತಾಡನ ಮಾಡಿ ಪ್ರೋತ್ಸಾಹಿಸುತ್ತಿದ್ದರು. ಅಲ್ಲದೆ ಕೊನೆಯಲ್ಲಿ ಜರುಗಿದ ಚರ್ಚೆಯಲ್ಲಿ ಅಲ್ಲಿ ನೆರೆದಿದ್ದ ವಿಜ್ಞಾನದ ವಿದ್ವಜ್ಜನರು ಹಾಫ್‌ಕಿನ್‌ರು ಸೋಂಕುರೋಗಗಳನ್ನು ಪ್ರತಿಬಂಧಿಸುವಲ್ಲಿ ನಿರೂಪಿಸಿದ ಸಿದ್ಧಾಂತಗಳಿಗೆ ಅವರೆಲ್ಲರ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಲಾರ್ಡ್ ಲಿಸ್ಟರ್, ಭಾರತದಲ್ಲಿ ಯುವ ವಿಜ್ಞಾನಿ ವ್ಲಾದಿಮಿರ್ ಹಾಫ್ ಕಿನ್‌ರು ಕಾಲರಾ, ಪ್ಲೇಗ್‌ಗಳ ಬಗೆಗೆ ಜರುಗಿಸಿದ ಕಾರ್ಯಕ್ರಮಗಳ ಬಗೆಗೆ ಕೊಂಡಾಡಿದರಲ್ಲದೆ, ರಾಯಲ್ ಸೊಸೈಟಿಯ ಸದಸ್ಯರಪರವಾಗಿ ತಮ್ಮ ವಂದನೆಗಳನ್ನು ಸಲ್ಲಿಸಿದರು.

ಹಾಫ್‌ಕಿನ್ನರಿಗೆ 1892ರಲ್ಲಿ ಲಂಡನಿನಲ್ಲಿ ಪರಿಚಿತರೂ ಹಾಗೂ ಕಾಲರಾ ಬಗೆಗೆ ಅವರು ಜರುಗಿಸಿದ ಸಂಶೋಧನೆಗಳನ್ನು ಮೆಚ್ಚಿಕೊಂಡವರಲ್ಲೊಬ್ಬರಾದ ನೆಟ್ಲೆಯ ಮಿಲಿಟರಿ ಅಕಾಡೆಮಿಯ ಜೀವಶಾಸ್ತ್ರಜ್ಞ : ಪ್ರೊ. ಆಲ್ಮರಾಥ್ ರೈಟ್ ಈ ಸಮಯದಲ್ಲಿ ಮಾಡಿದ ಭಾಷಣ ತೀವ್ರ ಗಮನ ಸೆಳೆಯುವಂತಿತ್ತು. ಲಂಡನಿನಲ್ಲಿದ್ದ ಸಮಯದಲ್ಲೇ ರೈಟ್ ಅವರಿಗೆ ಟೈಫಾಯಿಡ್ ಸೋಂಕು ಜ್ವರದ ಬಗೆಗೆ ಆಸಕ್ತಿ ಹುಟ್ಟಿಸಿ, ಅದರ ನಿರೋಧಕ ವ್ಯಾಕ್ಸೀನ್ ತಯಾರಿಸುವ ತತ್ವಗಳ ಬಗೆಗೆ ಮಾಹಿತಿ ನೀಡಿದ್ದರು. ಅವರು ತಯಾರಿಸಿದ ವ್ಯಾಕ್ಸೀನು ಪ್ರಖ್ಯಾತಿಯನ್ನು ಪಡೆಯಿತು. ಆದರೆ ಮುಂದೆ ಅವರಿಬ್ಬರ ನಡುವಿನ ಸಂಬಂಧ ಅಷ್ಟೇನೂ ಹಿತಕರವಾಗಿರಲಿಲ್ಲ. ಆದರೂ 1898-99ರಲ್ಲಿ ಬ್ರಿಟಿಷ್ ಸರ್ಕಾರದವರು ಭಾರತದಲ್ಲಿನ ಪ್ಲೇಗಿನ ಪರಿಸ್ಥಿತಿ ಹಾಗೂ ಹಾಫ್‌ಕಿನ್ನರ ವ್ಯಾಕ್ಸೀನಿನ ಮೌಲ್ಯ ಮಾಪನ ಮಾಡುವ ಸಲುವಾಗಿ ಕಳುಹಿಸಿದ್ದ ಪ್ಲೇಗ್ ಕಮೀಷನ್‌ನ ಸದಸ್ಯರಾಗಿ ಹೋಗಲು ಹಿಂಜರಿದಿರಲಿಲ್ಲ. ಹಾಫ್‌ಕಿನ್ನರ ಜೊತೆ ಅವರ ಸಂಬಂಧ ಒಂದು ರೀತಿಯ ಸಂಕೀರ್ಣತೆಯದಾಗಿದ್ದರೂ, ಈ ಸಮಯ ದಲ್ಲಿ ಅವರು ತುಂಬಾ ನಿಷ್ಪಕ್ಷಪಾತವಾಗಿ ನಡೆದುಕೊಂಡರು. ಅವರು 25 ಜನ ಸಂಶೋಧಕರನ್ನು ಪ್ಲೇಗ್ ವ್ಯಾಕ್ಸೀನಿನ ಬಗೆಗೆ ಅಧ್ಯಯನ ಮಾಡಲು ನೇಮಿಸಿದರು. ಸಂಶೋಧಕರು ಅಧ್ಯಯನ ಮಾಡಲು ವ್ಯಾಕ್ಸೀನಿನ ತಯಾರಿಕಾ ಹಂತದಿಂದ ಪ್ರತಿಯೊಂದು ಮಜಲುಗಳನ್ನೂ ಅಂತಿಮವಾಗಿ ಅದನ್ನು ಬಾಟಲುಗಳೊಳಗೆ ಭರ್ತಿಮಾಡುವವರೆಗೂ ವಿವರವಾಗಿ ಪರಿಶೀಲಿಸಿದರು. ವ್ಯಾಕ್ಸೀನನ್ನು ನೀಡಿದರಲ್ಲೂ ಅದರಿಂದಾಗುವ ಪರಿಣಾಮಗಳ ಬಗೆಗೂ ಪರಿಶೀಲನೆ ನಡೆದಿದ್ದವು. ರೈಟ್ ಅವರಿಗೆ ಈ ಅಧ್ಯಯನದಿಂದ ದೊರೆತ ಮಾಹಿತಿಗಳ ಬಗೆಗೆ ನಿರ್ದಾಕ್ಷಿಣ್ಯವಾಗಿ ಪ್ರಶ್ನಿಸಿದರು. ಅವರು ಕೆಲ ಸಾರಿ ಮೊಂಡುತನ ಪ್ರದರ್ಶಿಸಿದರೆ, ಮತ್ತೆ ಕೆಲ ಸಾರಿ ಮಾರ್ಮಿಕವಾಗಿ ವರ್ತಿಸುತ್ತಿದ್ದರು. ಅವರ ಅಭಿಪ್ರಾಯದಲ್ಲಿ ವ್ಯಾಕ್ಸೀನ್ ಎಲ್ಲರಲ್ಲೂ ಒಂದೇ ಬಗೆಯ ಪರಿಣಾಮ ಬೀರುತ್ತಿಲ್ಲವೆನ್ನುವುದನ್ನು ಹಾಫ್‌ಕಿನ್ನರ ಗಮನಕ್ಕೆ ತಂದರಲ್ಲದೆ, ಅದನ್ನು ಪ್ಲೇಗನ್ನು ತಡೆಗಟ್ಟುವಲ್ಲಿ ಅಡಚಣೆಯಾಗಬಹುದೇನೋ ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದರಂತೆ. ಆದರೂ ಪ್ಲೇಗ್ ಕಮೀಷನ್ ಭಾರತದಲ್ಲಿ ಹಾಫ್‌ಕಿನ್ನರು ನಡೆಸುತ್ತಿದ್ದ ಕಾರ್ಯಕಲಾಪಗಳಲ್ಲಿ ತನ್ನ ಸಂಪೂರ್ಣ ನಂಬಿಕೆಯನ್ನು ವ್ಯಕ್ತಪಡಿಸಿತ್ತು. ಕಮೀಷನ್ ವರದಿ ಮುಂದುವರಿದು, ಹಾಫ್‌ಕಿನ್ನರ ಸಂಶೋಧನೆ ಯಾವುದೇ ಹೊಸ ಸಿದ್ಧಾಂತಗಳನ್ನು ಆಧರಿಸಿ ಜರುಗಿಲ್ಲವಾದರೂ, ಅದಕ್ಕೊಂದು ಕಾರ್ಯಕಾರಿ ಉಪಯುಕ್ತತೆ ಇದೆ ಹಾಗೂ ಅದರಿಂದ ವ್ಯಾಧಿನಿರೋಧಕ ವ್ಯವಸ್ಥೆಯನ್ನು ನಿರೂಪಿಸವಲ್ಲಿ ಸಹಾಯಕವಾಗಿದೆ ಎಂದು ತಿಳಿಸಿತ್ತು.

ರಾಯಲ್ ಸೊಸೈಟಿಯ ಅಂದಿನ ಸಭೆಯಲ್ಲಿ ಪ್ರೊ:ರೈಟ್ ತುಂಬಾ ಸ್ಪಷ್ಟವಾಗಿ ಮಾತಾಡಿದ್ದು ಅಚ್ಚರಿಯನ್ನುಂಟು ಮಾಡುವಂತಿತ್ತು. ''ಇನಾಕ್ಯುಲೇಷನ್ ಸಮಸ್ಯೆಯನ್ನು ನಿವಾರಿಸುವಲ್ಲಿ ಹಾಫ್‌ಕಿನ್ನರು ತುಂಬಾ ಒಳ್ಳೆಯ ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಇನ್ನು ಮುಂದೆ ಯಾವುದೇ ಕಾಯಿಲೆಗೆ ಕಾರಣವಾದ ಮಣಜೀವಿಗಳನ್ನು ಗುರುತಿಸಲು ಸಾಧ್ಯವಾದರೆ ಅವುಗಳ ವಿರುದ್ಧ ಇನಾಕ್ಯುಲೇಷನ್ ಕಂಡು ಹಿಡಿಯಬಹುದು''.

ಆ ಕಾಲದ ಅತ್ಯಂತ ಘನತೆ ಹೊಂದಿದ ಮಿಣಿಜೀವಿ ಶಾಸ್ತ್ರಜ್ಞ ಹಾಗೂ ಇಮ್ಯೂನೊಲಜಿಸ್ಟ್ ಪ್ರೊ: ರೈಟ್ ಅವರಿಂದ ಬಂದ ಈ ಅಭಿಪ್ರಾಯ ಹಾಫ್‌ಕಿನ್ನರು ವಿಜ್ಞಾನಕ್ಕೆ ನೀಡಿದ ಕೊಡುಗೆಯ ಬಗೆಗೆ ತುಂಬಾ ಕರಾರುವಾಕ್ಕಾದ ಮೌಲ್ಯ ಮಾಪನವಾಗಿತ್ತೆಂದರೆ ಅತಿಶಯೋಕ್ತಿಯಲ್ಲ. ಲೂಯಿಪ್ಯಾಶ್ಚರ್ ಬಹಳ ಹಿಂದೆ ಪ್ರತಿಪಾದಿಸಿದ್ದ, ರೋಗಕಾರಕ ಮಿಣಿಜೀವಿಗಳ ಪ್ರತಿಬಂಧನೆಗೆ ನಿರೂಪಿಸಿದ್ದ ತತ್ವಗಳನ್ನು ಇನ್ನೂ ಮುಂದುವರಿಸಿ ಪ್ರತಿಪಾದಿಸಿದ್ದರಷ್ಟೆ; ಮುಂದೆ ಜೀವಿರೋಧ ಮದ್ದುಗಳನ್ನು ಕಂಡು ಹಿಡಿದವರಂತೆ ಹೊಸತಾಗಿ ಬೇರಾವ ತತ್ವವನ್ನೂ ಪ್ರತಿಪಾದಿಸಿರಲಿಲ್ಲ. ಭಾತರತದಲ್ಲಿ ಅವರು ಜರುಗಿಸಿದ ಪ್ರಯೋಗ ಪರೀಕ್ಷೆಗಳು ಹಾಗೂ ಗಳಿಸಿದ ಅನುಭವ ಮುಂದೆ ಇನಾಕ್ಯುಲೇಷನ್ ವಿಧಾನದಿಂದ ಬಹುಪಾಲು ಸೋಂಕು ವ್ಯಾದಿಗಳನ್ನು ಹತೋಟಿಗೆ ತರುವುದಕ್ಕೆ ನಾಂದಿಯಾಯಿತು.

ಈ ಸಾರಿ ಹಾಫ್‌ಕಿನ್ನರು ಆರು ತಿಂಗಳ ಕಾಲ ರಜೆಯಲ್ಲಿ ಕಳೆದರು. ಈ ಸಮಯವನ್ನು ವಿಜ್ಞಾನಿಗಳ ಜತೆ ವಿಚಾರ ವಿನಿಮಯ, ಭಾಷಣ ಮತ್ತು ಹಲವು ವೈಜ್ಞಾನಿಕ ಸಮಾವೇಶಗಳಲ್ಲಿ ಭಾಗವಹಿಸಲು ಉಪಯೋಗಿಸಿಕೊಂಡರು. ಅವರ ಪ್ರತಿಯೊಂದು ಭಾಷಣವೂ ಆಗ ಉದಯವಾಗುತ್ತಿದ್ದ ಮಿಣಿಜೀವಿ ಶಾಸ್ತ್ರದ ಬೆಳವಣಿಗೆಗೆ ಪೂರಕ ವಾಗಿರುತ್ತಿತ್ತು; ಮುಂದೆ ಅದಕ್ಕಿರುವ ಭವಿಷ್ಯದ ಬಗೆಗೆ ಸಾರಿ ಸಾರಿ ಹೇಳುವಂತಿರುತ್ತಿತ್ತು. ಕಾಲರಾ ಮತ್ತು ಪ್ಲೇಗ್ ವ್ಯಾಧಿಗಳನ್ನು ವ್ಯಾಕ್ಸೀನುಗಳ ಮೂಲಕ ಯಶಸ್ವಿಯಾಗಿ ತಡೆಗಟ್ಟಿದ ರೀತಿಗಳನ್ನು ವಿವರವಾಗಿ ತಿಳಿಸಿ, ಟೈಫಸ್ ವ್ಯಾಧಿಯ ವಿರುದ್ಧ ವ್ಯಾಕ್ಸೀನು ತಯಾರಿಸಲು ಸಾಧ್ಯವೆಂಬುದವನ್ನು ಪ್ರತಿಪಾದಿಸುತ್ತಿದ್ದರು; ಅದೇ ಅಲ್ಲದೆ ಇನ್ನುಳಿದ ಎಲ್ಲಾ ಸೋಂಕು ವ್ಯಾಧಿಗಳನ್ನು ಇನಾಕ್ಯುಲೇಷನ್ ಪದ್ದತಿಯ ಆಚರಣೆಯಿಂದ ಹತೋಟಿಗೆ ತರಬಹುದೆಂಬ ಭವಿಷ್ಯವನ್ನೇ ನುಡಿಯುತ್ತಿದ್ದರು.

ಹಾಫ್‌ಕಿನ್ನರ ಗೌರವಾರ್ಥ ಲಂಡನಿನ್ನಲ್ಲಿ ಪ್ರತಿಷ್ಠರಿಂದ ಭೋಜನಕೂಟವೊಂದು ಜರುಗಿತು. ಸ್ವತಃ ಲಾರ್ಡ್ ಲಿಸ್ಟರ್ ಆ ದಿನ ಪ್ರಮುಖ ಭಾಷಣಕಾರರಾಗಿದ್ದರು. ಆವತ್ತಿನ ಸಮಾರಂಭದ ವಿಷಯಗಳಿಗೆ ಪತ್ರಿಕೆಗಳಲ್ಲಿ ಅದರಲ್ಲೂ ವಿಶ್ವದ ಇತರ ಕಡೆಯ ವಾರ್ತಾಪತ್ರಿಕೆಗಳೂ ಆ ದಿನ ಮಾಡಿದ ಭಾಷಣಗಳನ್ನು ವಿವರವಾಗಿ ವರದಿ ಮಾಡಿದ್ದವು. **ಬರ್ಲಿನರ್ ಟೇಜೆಬ್ಲಾಟ್** ಎಂಬ ಪತ್ರಿಕೆಯ ವರದಿಯನ್ನು **ಒಡೆಸ್ಸಾ ನ್ಯೂಸ್** ಪತ್ರಿಕೆ ಮರುಮುದ್ರಣಮಾಡಿತ್ತು; **ದ ಟೈಮ್ಸ್** ಪತ್ರಿಕೆಯಲ್ಲಿನ ಸುದ್ದಿಯನ್ನು **ದ ಬಾಂಬೆ** ಗೆಜೆಟ್ **ಮರುಪ್ರಸಾರ ಮಾಡಿತ್ತು.** ಲಿಸ್ಟರ್ ತಮ್ಮ ಭಾಷಣದಲ್ಲಿ ''ಹಾಫ್‌ಕಿನ್ನರು ಪ್ರತಿಭಾಶಾಲಿಗಳಾಗಿರುವಂತೆಯೇ ವಿನಯವಂತರೂ ಆಗಿದ್ದಾರೆ. ಹಲವು ವರ್ಷಗಳ ಗಳಕಾಲ ಪ್ಲೇಗಿನ ವಿರುದ್ಧ ಶಕ್ತಿಮೀರಿ ತಮ್ಮ ಜೀವದ ಹಂಗು ತೊರೆದು ಧೈರ್ಯ ಸಾಹಸಗಳಿಂದ ಹೋರಾಟ ನಡೆಸಿದ್ದಾರೆ'' ಎಂದಾಗ ನೆರೆದಿದ್ದ ಮಹಾನ್ ವ್ಯಕ್ತಿಗಳೆಲ್ಲಾ ಕರತಾಡನ ಮಾಡಿ ಹರ್ಷೋದ್ಗಾರ ಮಾಡಿದರು. ವೈದ್ಯ ಸಮೂಹದವರು ಪ್ಯಾಶ್ಚರ್‌ರ

ಸಂಶೋಧನೆಗಳನ್ನು ಅರ್ಥಮಾಡಿಕೊಳ್ಳುವ ಮೊದಲೇ ಆಗಿನ ಶಸ್ತ್ರ ಚಿಕಿತ್ಸಾ ವಿಧಾನದ ಗತಿಯನ್ನೆ ಬದಲಾಯಿಸಿದ ಮಹಾ ಪುರುಷ ಲಾರ್ಡ್ ಲಿಸ್ಟರ್‌ರಂಥದವರಿಂದ ಬಂದ ಈ ಹೇಳಿಕೆ ಹಾಫ್‌ಕಿನ್ನರಿಗೆ ಅತ್ಯಾನಂದ ಉಂಟುಮಾಡಿತು; ತಮ್ಮ ಗುರು ಲೂಯಿಪ್ಯಾಶ್ಚರ್‌ರ ಅಭಿಪ್ರಾಯದಷ್ಟೆ ಅವರಿಗೆ ತೃಪ್ತಿಯುಂಟುಮಾಡಿತ್ತು.

## ಹೊಸ ಪ್ರಯೋಗಾಲಯ

ಹಾಫ್‌ಕಿನ್ 1899ರ ಬೇಸಿಗೆಯಲ್ಲಿ ಮುಂಬಯಿಗೆ ಹಿಂತಿರುಗಿದರು. ಅದು ಅವರ ಕೀರ್ತಿ ಉತ್ತುಂಗ ಶಿಖರವೇರಿದ ಕಾಲವಾಯಿತು. ಪರೇಲ್ ವಲಯದಲ್ಲಿ ಹಿಂದೆ ಗೌವರ್ನರ್ ನಿವಾಸವಾಗಿದ್ದ ಬಂಗಲೆಯಲ್ಲಿ ಹಾಫ್‌ಕಿನ್ನರ ಪ್ರಯೋಗಾಲಯ ಅಧಿಕೃತ ವಾಗಿ ಅದ್ದೂರಿಯಿಂದ ಆರಂಭಿಸಲ್ಪಟ್ಟಿತು. ಮುಂಬಯಿಯ ಗೌವರ್ನರ್ ಆದಿಯಾಗಿ ಪ್ರತಿಷ್ಠಿತ ವೈದ್ಯರೆಲ್ಲರೂ ಅದರಲ್ಲಿ ಭಾಗವಹಿಸಿದ್ದರು. ವಿಜೃಂಭಣೆಯಿಂದ ಜರುಗಿದ ಆ ಸಮಾರಂಭದಲ್ಲಿ ಹಾಜರಿದ್ದ ಡಾ॥ ಕಸ್ಕಡಮೊವ್, ಸೇಯಿಂಟ್ ಪೀಟರ್ಸ್ ಬರ್ಗ್‌ಗೆ ಕಳುಹಿಸಿದ ವರದಿಯಲ್ಲಿ ಅಂದು ಆರಂಭವಾದ ಪ್ರಯೋಗಾಲಯದ ಬಗೆಗೆ ವಿವರವಾಗಿ ಬರೆದಿದ್ದರು. ''ಈಗಿನ ಪ್ರಯೋಗಾಲಯದಲ್ಲಿ ಎಂಟು ಜನ ವೈದ್ಯರಿದ್ದಾರೆ; ಹದಿನಾಲ್ಕು ವೈದ್ಯಯಕೀಯ ಸಹಾಯಕರಿದ್ದಾರೆ; ಒಬ್ಬ ಕಾರ್ಯದರ್ಶಿ, ಒಬ್ಬ ವಿಶೇಷ ಇಂಜಿನಿಯರ್ ಹಾಗೂ ಇತರ ಇಪ್ಪತ್ತೊಂದು ಸಿಬ್ಬಂದಿಗಳಿದ್ದಾರೆ. ಅಲ್ಲಿ ತಯಾರಾಗುತ್ತಿದ್ದ ''ಲಿಂಫ್'' ಈಗ ಸಿಲೋನ್ (ಶ್ರೀಲಂಕಾ) ಸೈಪ್ರಸ್, ಜಾಂಜೀಬಾರ್, ಮಡಗಾಸ್ಕರ್, ನೇಟಾಲ್, ಕೇಪ್ ಕಾಲೊನಿ, ಮೊರಿಷಿಸಿಯಸ್ ದ್ವೀಪ, ಹಾಂಗ್‌ಕಾಂಗ್‌ಗಳೇ ಅಲ್ಲದೆ ಭಾರತದ ಮೂಲೆಗಳಿಗೂ ಸರಬರಾಜಾಗುತ್ತಿದೆ; ಸ್ಪೆಯಿನ್, ಇಟಲಿ ಮತ್ತು ಲಂಡನ್‌ಗಳಿಂದಲೂ ಲಿಂಫ್‌ಗೆ ಅಪಾರ ಬೇಡಿಕೆ ಬರುತ್ತಿವೆ. ಪ್ರಯೋಗಾಲಯದಲ್ಲಿ ಪ್ರತಿದಿನ ಹತ್ತುಸಾವಿರ ಡೋಸ್ ಲಿಂಫ್ ತಯರಾಗುವ ಸಾಮರ್ಥ್ಯವಿದೆ. ಪ್ರಪಂಚದ ಎಲ್ಲಾ ಕಡೆಗಳಿಂದಲೂ ಅದಕ್ಕೆ ಬೇಡಿಕೆ ಬರುತ್ತಿರುವುದರಿಂದ ಮಾಡಬೇಕಾದ ಕೆಲಸ ಇನ್ನೂ ಬೇಕಾದಷ್ಟಿದೆ'' ಎಂದು ವರದಿ ಮಾಡಿದ್ದರು.

## ವೈಯಕ್ತಿಕ ಗುಣವಿಶೇಷಗಳು

ಈ ಹಂತದಲ್ಲಿ ಹಾಫ್‌ಕಿನ್ನರ ವ್ಯಕ್ತಿತ್ವ ಮತ್ತು ವೈಯಕ್ತಿಕ ಗುಣವಿಶೇಷಗಳ ಬಗೆಗೆ ಗಮನಹರಿಸುವುದು ಉಚಿತ; ಈ ಸಮಯವು ಅವರ ಅತ್ಯಂತ ಸಂತುಷ್ಟ ಹಾಗೂ ಸುಖದ ಕಾಲವೂ ಆಗಿತ್ತು. ಸದಾ ಮಿತಭಾಷಿಯಾಗಿರುತ್ತಿದ್ದ ಅವರ ಆಧ್ಯಾತ್ಮಿಕ ಜೀವನದ ಬಗೆಗೆ ಏನನ್ನೂ ತಿಳಿದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅವರು ಸಾರ್ವಜನಿಕವಾಗಿ ಮಾತಾಡು ತ್ತಿದ್ದುದೆಲ್ಲಾ ಅವರ ಕಾರ್ಯದ ತಾಂತ್ರಿಕ ವಿಷಯುಗಳ ಸುತ್ತಾ ಕೇಂದ್ರಿಕೃತವಾಗಿರುತ್ತಿದ್ದವು. ಅವರ ಗಾಂಭೀರ್ಯತೆ ಹಾಗೂ ಆತ್ಮ ಸಂಯಮತೆ ಸಾರ್ವಜನಿಕರ ಮೆಚ್ಚುಗೆಗೆ ಪಾತ್ರ ವಾಗಿತ್ತು. ಆ ಕಾಲದ ಅವರ ಭಾವಚಿತ್ರಗಳಲ್ಲಿ ಅವರ ಮುಖಮುದ್ರೆ, ಅಂತರ್ಮುಖಿಯಂತೆ

ತೋರುತ್ತಿದ್ದರೂ ಅವರಲ್ಲೊಂದು ಬಗೆಯ ಉದ್ದಟತನವೂ ಇರಬಹುದೆನಿಸುತ್ತಿತ್ತು. ಹಾಗಾಗಿ ಅವರ ವ್ಯಕ್ತಿತ್ವದಲ್ಲಿ ಅಡಗಿರಬಹುದಾದ ನೈಜ ಭಾವನೆಗಳನ್ನು ಅರ್ಥಮಾಡಿಕೊಳ್ಳುವುದು ಒಂದು ರೀತಿಯಲ್ಲಿ ಅಸಾಧ್ಯವೇ; ಹಾಗೂ ಸಂಶೋಧನಾ ಕ್ಷೇತ್ರದಲ್ಲಿ ಹಲವು ಏಳುಬೀಳುಗಳನ್ನು ಕಂಡು ಒಳ್ಳೆಯ ಯಶಸ್ಸನ್ನೂ ಪಡೆದುಕೊಂಡಿದ್ದ ಈ ವಿಜ್ಞಾನಿಯ ಆಧ್ಯಾತ್ಮಿಕ ನಿಲುವುಗಳೇನಿರಬಹುದೆಂಬುದನ್ನು ತಿಳಿಯುವುದಕ್ಕಾಗುತ್ತಿರಲಿಲ್ಲ.

ಹಾಫ್‌ಕಿನ್ನರ ಒಬ್ಬಂಟಿತನ ಲಂಡನ್ನಿಗರಲ್ಲಿ ಅಚ್ಚರಿಯುಂಟು ಮಾಡಿತ್ತು. ಮೂವತ್ತೊಂಬತ್ತು ವಸಂತಗಳನ್ನು ಕಳೆದಿದ್ದರೂ ಅವರಿನ್ನೂ ಮದುವೆಯಾಗಿರಲಿಲ್ಲ. ರಷ್ಯಾದಲ್ಲಿ ಅವರ ಸಂಬಂಧಿಕರನೇಕರಿದ್ದರೂ, ಅವರು ಸ್ವದೇಶದಿಂದ ಇನ್ನೂ ಬಹಿಷ್ಕೃತರಾಗೇ ಉಳಿದುಕೊಂಡಿದ್ದರು. ಲಂಡನಿನ್ನಲ್ಲಿ ಅವರಿಗಿದ್ದ ಆತ್ಮೀಯ ಸ್ನೇಹಿತರೆಂದರೆ ಪ್ರೊ:ರೈಟ್ ಮತ್ತು ಸಿಂಪ್ಸನ್ ಇಬ್ಬರೇ. ಅವರನ್ನು ನಿಕಟವಾದ ಸ್ನೇಹತರೆನ್ನುವುದಕ್ಕಿಂತ ಸಹ-ವಿಜ್ಞಾನಿಗಳೆಂದೇ ಹೇಳಬಹುದಿತ್ತು. ''ಹಾಫ್‌ಕಿನ್ನರು ಮದುವೆಯಾಗದಿದ್ದುದರಿಂದಲೇ ಬೇರೆಲ್ಲದಕ್ಕಿಂತ ಭಾರತದಲ್ಲಿ ಕಾಲರಾ ಪ್ಲೇಗುಗಳ ವಿರುದ್ಧ ಜಯಶಾಲಿಯಾಗುವುದಕ್ಕೆ ಸಾಧ್ಯವಾಗಿದ್ದೆನಿಸುತ್ತದೆ'' ಎಂದು ಪ್ರೊ:ರೈಟ್ ಒಂದು ಸಾರಿ ಹೇಳಿದ್ದೇ ಹತ್ತಿರ ಹತ್ತಿರ ನಿಜವೆನಿಸುತ್ತದೆ. ಪ್ರೊ:ರೈಟ್ ಅವರೇ ಸ್ವತಃ ಸ್ತ್ರೀದ್ವೇಷಿಗಳಾಗಿದ್ದವರು; ಮಹಿಳೆಯವರಿಗೆ ಮತ ಚಲಾವಣೆ ವಿರೋಧಿಸಿ ಪುಸ್ತಕವನ್ನು ಬರೆದಿದ್ದರಂತೆ. ಮಹಾ ವಿಜ್ಞಾನಿಯೆನ್ನ ಬಹುದಾಗಿದ್ದ ಪ್ರೊ:ರೈಟ್ ಪ್ರೀತಿಯ ಬಗೆಗೆ ಗಂಟೆಗಟ್ಟಲೇ ವಾದಿಸಿ ಕೊನೆಗೆ ಪ್ರೀತಿ ಬ್ಯಾಕ್ಟೀರಿಯಾಗಳು ಟಾಕ್ಸಿನ್ ವಿಷವಸ್ತುಗಳ ಮೂಲದಿಂದ ಉದ್ಭವವಾಗಿರಬೇಕೆಂಬ ನಿರ್ಧಾರಕ್ಕೆ ಬಂದುಬಿಡುತ್ತಿದ್ದರಂತೆ! ಸ್ತ್ರೀಯರ ಬಗೆಗೆ ಪುರಾಣ ಗ್ರಂಥಗಳಿಂದಲೂ ಉದ್ಧರಿಸಿ ಹಗುರವಾಗಿ ಮಾತಾಡುತ್ತಿದ್ದ ಅವರು ಮದುವೆ ವಿಷಯದಲ್ಲಿ ಹೊಂದಿದ್ದ ಅಭಿಪ್ರಾಯಗಳಿಗೆ ಯಾರಿಂದಲೂ ಮನ್ನಣೆ ದೊರೆಯುತ್ತಿರಲಿಲ್ಲ.

ಹಾಗೆ ನೋಡಿದರೆ ಹಾಫ್‌ಕಿನ್ನರ ಮದುವೆಯ ವಿಷಯ ಅವರು 1892ರಲ್ಲಿ ಪ್ಯಾಶ್ಚರ್ ಇನ್ಸಿಟಟ್ಯೂಟ್‌ನಲ್ಲಿ ಕಾರ್ಯನಿರತರಾಗಿರುವಾಗ ಅಲೆಗ್ಸಾಂಡರ್ ಹಾಸ್ಟ್ ಎಂಬವರು ಯಾಕೆ ಮದುವೆಯಾಗುವ ಮನಸ್ಸು ಮಾಡಿಲ್ಲವೆಂದು ವಿಚಾರಿಸಿದ್ದರಂತೆ. ಹಾಫ್‌ಕಿನ್‌ರು ಆ ಸಮಯದಲ್ಲಿ ಕಾಲರಾ ವ್ಯಾಕ್ಸೀನಿನ ತಯಾರಿಸುವಲ್ಲಿ ಮಗ್ನರಾಗಿದ್ದು, ಅದನ್ನ ತಮ್ಮ ಮೇಲೆಯೇ ಪ್ರಯೋಗಿಸಿಕೊಳ್ಳುವ ಹಂತದಲ್ಲಿದ್ದರು. ಅವರಾಗ ನಿರತರಾಗಿದ್ದ ವೈಜ್ಞಾನಿಕ ಸಂಶೋಧನೆಗಳಿಗೆ ಮದುವೆ ಮಾಡಿಕೊಳ್ಳುವುದರಿಂದ ಅಡಚಣೆಯಾಗುತ್ತದೆಂದು ಹಾಸ್ಟ್‌ರಿಗೆ ಉತ್ತರಿಸಿದ್ದರಂತೆ. ಮುಂದೊಂದು ಸಾರಿ 1923-25ರಲ್ಲಿ ರೊಮೇನಿಯಾದ ವೈದ್ಯ ಹಾಲ್‌ವೀಯವರ ಸಹಯೋಗ ಉಂಟಾಗಿತ್ತು. ಆ ಸಮಯದಲ್ಲಿ ಹಾಫ್‌ಕಿನ್ನರಿಗೆ ಒರ್ವ ಯುವತಿಯ ಬಗೆಗೆ ಒಲವು ಇರುವುದರ ಸುಳಿವು ಹಾಲ್‌ವೀಯವರ ಗಮನಕ್ಕೆ ಬಂದಿತ್ತು; ಆದರೆ ಅವರಿಬ್ಬರ ನಡುವೆ ಮದುವೆಯಾಗಲಿಲ್ಲ. ಆ ಬಗೆಗೆ ಹಾಪ್‌ಕಿನ್ನರನ್ನು ವಿಚಾರಿಸಿದಾಗ, ಸದಾ ವೈಜ್ಞಾನಿಕ ಸಂಶೋಧನೆಗಳಲ್ಲಿ ಮುಳುಗಿದ್ದು, ಆಗಾಗ್ಗೆ ದೂರದ ವಸಾಹತು ಪ್ರದೇಶಗಳಲ್ಲಿ ಕಾಲಕಳೆಯಬೇಕಾದ ಅವರು ಮುಗ್ಧ

ಯುವತಿಯೊಬ್ಬಳನ್ನು ಅಂತಹ ಪ್ರದೇಶಗಳ ಕಷ್ಟಕಾರ್ಪಣ್ಯಗಳಿಗೊಡ್ಡಿ ಪ್ರತಿಕ್ಷಣದಲ್ಲೂ ವಿಧವೆಯಾಗಬಹುದಾದ ಆತಂಕಕ್ಕೆ ಗುರಿಮಾಡುವ ಉದ್ದೇಶ ಹೊಂದಿಲ್ಲವೆಂದು ಮಾರ್ಮಿಕವಾಗಿ ತಿಳಿಸಿದ್ದರಂತೆ. ಈ ಎರಡು ಉಲ್ಲೇಖಗಳಿಂದ ಹಾಫ್‌ಕಿನ್ನರು ಆಧ್ಯಾತ್ಮಿಕ ವಿಷಯಗಳ ಬಗೆಗೆ ತಾಳಿದ್ದ ನಿಲುವನ್ನು ಅರ್ಥಮಾಡಿಕೊಳ್ಳದವರಿಗೆ ಉತ್ತರ ಸಿಗಬಹುದು. ವಿಜ್ಞಾನವೊಂದೇ ಅವರ ನಿಜವಾದ ಜೀವನಾಸಕ್ತಿಯಾಗಿತ್ತು; ಅವರ ಹೃದಯ ಪ್ರೀತಿ ವಿಶ್ವಾಸಗಳಿಗೆ ಸ್ಪಂದಿಸುವಂತಿದ್ದರೂ, ಅದನ್ನು ಪರಿತ್ಯಾಗ ಮಾಡುವಂಥ ಧಾರ್ಷ್ಟ್ಯವೂ ಅವರಲ್ಲಿದ್ದುದು ಒಂದು ವಿಶೇಷವೆಂದೇ ಹೇಳಬಹುದು.

ಜನಜಂಗುಳಿಯ ನಡುವೆಯೂ ಏಕಾಂಗಿಯಂತಿರುವ ಅವರ ಸ್ವಭಾವ ಕೆಲಸಾರಿ ಅವರ ನಿಕಟವರ್ತಿಗಳೂ ಸಹಾ ಅಪಾರ್ಥಗೊಳ್ಳುವಂತೆ ಮಾಡುವ ಸಂದರ್ಭಗಳೆಷ್ಟೋ ಇರುತ್ತಿದ್ದವು. ಒಂದು ಸಾರಿ ಒಡೆಸ್ಸಾದಿಂದ ಅವರ ಸೋದರಳಿಯ ಮುಂಬಯಿಗೆ ಬಂದಿದ್ದರು. ಹಾಫ್‌ಕಿನ್ನರು ಒಂದು ಸಭೆಯಲ್ಲಿ ಚರ್ಚಾನಿರತರಾಗಿದ್ದರು. ಬಾಗಿಲು ಕಾಯುವವರು ಒಡನೆಯೇ ಅವರನ್ನು ಒಳಗೆ ಬಿಡಲಿಲ್ಲ. ಅದಕ್ಕಾಗಿ ಅವರು ಗುಪ್ತನಾಮವನ್ನಿಟ್ಟುಕೊಂಡು ರಷ್ಯಾದಿಂದ ಬಂದ ಡಾ॥ವಿಸ್ನೇವ್‌ಸ್ಕಿ ಎಂಬ ಹೆಸರಿನ ಚೀಟಿಯನ್ನು ಒಳಗಡೆ ಕಳುಹಿಸಿದರು. ತಕ್ಷಣ ಅವರಿಗೆ ಒಳ ಹೋಗಲು ಅನುಮತಿಯೇನೋ ದೊರೆಯಿತು; ಆದರೆ ದೀರ್ಘ ಚರ್ಚೆಯಲ್ಲಿ ಮಗ್ನರಾಗಿದ್ದ ಅವರ ಸೋದರ ಮಾವ ಅವರನ್ನು ನೋಡಿದರೂ ಹೆಚ್ಚಿನ ಗಮನಕ್ಕೆ ತೆಗೆದುಕೊಂಡಂತೆ ಕಾಣಲಿಲ್ಲ. ಅವರು ಬಹುಶಃ ತಮ್ಮನ್ನು ಗುರುತು ಹಚ್ಚಲಿಲ್ಲವೇನೋ ಅಂದುಕೊಂಡು ಒಂದು ಕಡೆ ಸುಮ್ಮನೆ ಕುಳಿತರು. ಸಭೆ ಬಹಳ ದೀರ್ಘಕಾಲ ನಡೆದ ನಂತರ ಅಲ್ಲಿ ಸೇರಿದ್ದವರೆಲ್ಲಾ ಹೊರ ಹೋದರು. ಆಗಲೇ ಹಾಫ್‌ಕಿನ್ ಅವರತ್ತ ತಿರುಗಿ, ''ಎಲ್ಲಿ ಇಳಿದುಕೊಂಡಿದ್ದೀ'' ಎಂದು ರಷ್ಯನ್ ಭಾಷೆಯಲ್ಲಿ ಕೇಳಿದರಷ್ಟೆ. ಅವರು ವಿಳಾಸವನ್ನು ಹೇಳಿದಾಕ್ಷಣ ಜವಾನನೊಬ್ಬನ್ನು ಕರೆದು ಅವರನ್ನು ತಮ್ಮ ಮನೆಯಲ್ಲಿ ಬಿಟ್ಟು ಅವರು ತಂಗುವುದಕ್ಕೆ ಒಂದು ಕೊಠಡಿಯಲ್ಲಿ ಏರ್ಪಾಡು ಮಾಡಿ, ಊಟೋಪಚಾರ ನೀಡಬೇಕೆಂದು ಹೇಳಿದರು. ಹಾಗೂ ಅವರು ನೀಡಿದ ಹೋಟೆಲಿನ ವಿಳಾಸ ಹೇಳಿ ಅಲ್ಲಿಂದ ಅವರ ಸಾಮಾನುಗಳನ್ನು ಮನೆಗೆ ತಂದಿಡಬೇಕಾಗಿಯೂ ಹೇಳಿಕಳುಹಿಸಿದರು. ''ಡಾ॥ವಿಸ್ನೇವ್‌ಸ್ಕಿ''ಯವರು ಮನೆಯಲ್ಲಿ ತಂಗಿದ್ದಾಯಿತು, ಊಟೋಪಚಾರಗಳೂ ನಡೆದವು; ರಾತ್ರಿ ಭೋಜನವೂ ಆಯಿತು; ಆದರೆ ಸೋದರ ಮಾವ ಮಾತ್ರ ಪತ್ತೆ ಇಲ್ಲ!

ಕೊನೆಗೆ ನಡುರಾತ್ರಿಯ ಸಮಯಕ್ಕೆ ಹಾಫ್‌ಕಿನ್ ಮನೆಗೆ ಬಂದರು. ಅಷ್ಟರಲ್ಲೇ ಅವರ ನಡತೆಯಲ್ಲಿ ಬದಲಾವಣೆಯಾಗಿದ್ದು ಗೋಚರಿಸುವಂತಿತ್ತು. ರಾತ್ರಿ ಪೋಷಾಕು ಧರಿಸಿ ತುಂಬಾ ಸರಳರಾಗಿರುವಂತೆ ಕಂಡು ಬಂದರು. ಅವರ ಸೋದರಳಿಯ ಹಗಲಲ್ಲಿ ಅವರಲ್ಲಿ ಕಂಡಿದ್ದ ಒಬ್ಬಂಟಿತನದ ಮುಖವಾಡ ಕಳಚಿಬಿದ್ದಂತಾಗಿತ್ತು; ಅವರು ಬೇರೊಬ್ಬ ವ್ಯಕ್ತಿಯೇಯಾಗಿ ಬಿಟ್ಟಿದ್ದರು. ಅಂದು ಬೆಳಿಗ್ಗೆ ಅವನೊಡನೆ ವರ್ತಿಸಿದ ಬಗೆಗೆ ಕ್ಷಮೆ

ಯಾಚಿಸಿದರು. ಭಾವಾವೇಷ ತುಂಬಿ ಬಂದು ಅವರ ಕಣ್ಣುಗಳಲ್ಲಿ ನೀರಾಡಿತು. ಸ್ವದೇಶದಲ್ಲಿ ಅವರ ಅಣ್ಣತಮ್ಮಂದಿರು ಮತ್ತು ತಂಗಿಯ ಆರೋಗ್ಯದ ಬಗೆಗೆ ವಿಚಾರಿಸಿದರು. ತಾಯ್ನಾಡಿನ ಆಗಿನ ಸ್ಥಿತಿಗತಿಗಳ ಬಗೆಗೆ ವಿವರಗಳನ್ನು ಕೇಳಿ ತಿಳಿದುಕೊಂಡರು. ಮರುದಿನ ಬೆಳಿಗ್ಗೆ ನಾಷ್ಟ ಮಾಡುವ ಹೊತ್ತಿಗೆ ಹಿಂದಿನ ಅಧಿಕಾರಿತನದ ನಡವಳಿಕೆ ಹಿಂದಿರುಗಿತ್ತು; ಯಾವುದೇ ರೀತಿಯ ಸಲುಗೆಯ ವರ್ತನೆಗೆ ಎಡೆ ಮಾಡಿಕೊಡು ವಂತಿರಲಿಲ್ಲ!

ವ್ಲಾದಿಮಿರ್ ಹಾಫ್‌ಕಿನ್ ಇದೇ ಮೊದಲ ಸಾರಿ ಯಶಸ್ಸಿನ ಹಾದಿಯಲ್ಲಿ ಬಹುದೂರ ಪಯಣಿಸಿ ಹಾಯಾಗಿರಬಹುದಾದ ಸಮಯವಾದಂತಿತ್ತು. ಸದಾ ವಿರೋಧ ಗಳ ಸುಳಿಯಲ್ಲೇ ಸುತ್ತಾಡುತ್ತಿದ್ದ ಅವರಿಗೆ ಮತ್ತೊಂದು ಅಪಘಾತ 1902 ಶರತ್ಕಾಲದ ಸಮಯದಲ್ಲಿ ಕಾದುಕೊಂಡಿತ್ತು. ಅದೇನು ಹಠಾತ್ತಾಗಿ ಸಂಭವಿಸಿದ್ದೇನೂ ಅಲ್ಲ; ಅದರ ಕಾರ್ಮೋಡಗಳು ಕೆಲಕಾಲದಿಂದ ಆಕಾಶದಲ್ಲಿ ಒಂದನ್ನೊಂದು ಸೇರುತ್ತಲೇ ಇದ್ದವೆಂದು ಮುಂದಿನ ದಿನಗಳಲ್ಲಿ ಗೋಚರವಾಗತೊಡಗಿತು.

ಹಾಫ್‌ಕಿನ್ 1899ರಲ್ಲಿ ರಜೆಯಿಂದ ಭಾರತಕ್ಕೆ ಹಿಂದಿರುಗಿ ಬಂದಾಗ ಇಲ್ಲಿಯ ಜನ ಸಮುದಾಯ ಅತ್ಯಂತ ಸಡಗರದಿಂದ ಅವರನ್ನು ಸ್ವಾಗತಿಸಿದ್ದರು. ಅಂತಹ ಸಡಗರಕ್ಕೆ ಅವರಿಗೊಂದು ಕಾರಣವೂ ಇತ್ತು. ಆ ಸಮಯದಲ್ಲಿ ಬ್ರಿ.ಜ.ಗೆಟಾಕ್ರೆಯವರ ಸ್ಥಾನಕ್ಕೆ ಬಂದಿದ್ದ ಜನರಲ್ ರಾಡ್ಜರ್ಸ್ ಎಂಬವರು ಬಂದಿದ್ದರು. ಹಿಂದೆ ಇದ್ದವರಿಗಿಂತಲೂ ರಾಡ್ಜರ್ಸ್ ಪ್ಲೇಗನ್ನು ತಡೆಯುವ ಸಲುವಾಗಿ ಸ್ಯಾನಿಟರಿ ಕಾರ್ಯಕ್ರಮಗಳನ್ನು ಅತ್ಯಂತ ಬಿಗಿಯಾಗಿ ಜಾರಿಗೊಳಿಸುವುದಕ್ಕಾರಂಭಿಸಿದ್ದರು. ಜನರು ವಾಸಿಸುವುದಕ್ಕೆ ಏನೂ ಸೂಕ್ತವಾಗಿರದ ಗುಡಿಸಲುಗಳಲ್ಲಿ ಒತ್ತಾಯದಿಂದ ಕೂಡಿಹಾಕುವ ಕಾರ್ಯ ಮತ್ತೆ ಶುರು ವಾಗಿತ್ತು. ಕಡ್ಡಾಯವಾಗಿ ನಲವತ್ತು ದಿನ ಅಲ್ಲಿದ್ದನಂತರ ಜನರು ಅವರವರ ಮನೆಗಳಿಗೆ ಹಿಂದಿರುಗಿದಾಗ ಅವರಿಗೆ ಮತ್ತೊಂದು  ಆಘಾತ ಕಾಯ್ದಿತ್ತು. ಬಹುಪಾಲು ಮನೆಗಳನ್ನು ರಕ್ಷಣಾಪಡೆಯವರು ಸ್ಫೋಟಕಗಳನ್ನುಪಯೋಗಿಸಿ ಧ್ವಂಸಗೊಳಿಸಿದ್ದರು. ಮತ್ತೆ ಕೆಲವನ್ನು ಸುಟ್ಟು ಹಾಕಿದ್ದರು; ಇಲ್ಲವೆ ಕಾರ್ಬಾಲಿಕ್ ಆಸಿಡ್‌ನ ಹೊಳೆಯನ್ನು ಹರಿಸಿ ಅವುಗಳಲ್ಲಾರೂ ಉಳಿದುಕೊಳ್ಳದ ಸ್ಥಿತಿಗೆ ತಂದಿದ್ದರು. ಮುಂಬಯಿ ಒಂದು ಜಿಲ್ಲೆಯ ಪುಟ್ಟಹಳ್ಳಿಯೊಂದರ ಸುಮಾರು 150 ಮನೆಗಳಿಗೆ ಮೂವತ್ತು ಲಕ್ಷ ಗ್ಯಾಲನ್ ಕಾರ್ಬಾಲಿಕ್ ಆಸಿಡ್‌ನಿಂದ ಸಂಪೂರ್ಣವಾಗಿ ತೋಯ್ಸಿಬಿಟ್ಟಿದ್ದರು! ಇಂತಹ ದೌರ್ಜನ್ಯವನ್ನು ಪ್ರತಿಭಟಿಸಿ ಜನ ದಂಗೆಯೇಳಲಾರಂಭಿಸಿದರು.

## ಮತ್ತೆ ಅಪಸ್ವರ

ಆಶ್ಚರ್ಯದ ಸಂಗತಿಯೆಂದರೆ ಜನರ ಈ ಪ್ರತಿಭಟನೆಗೆ ಹಾಫ್‌ಕಿನ್ನರೇ ಕಾರಣ ರೆಂದು ರಾಡ್ಜರ್ಸ್ ದೂಷಿಸಲಾರಂಭಿಸಿದರು. ಅವರು ಸ್ಯಾನಿಟರಿ ಕಾರ್ಯಕ್ರಮಗಳ ಬಗೆಗೆ

ಉತ್ತೇಜನ ಕೊಡದೆ ಬರೇ ಇನಾಕ್ಯುಲೇಷನ್ ಪದ್ದತಿಗೇ ಹೆಚ್ಚಿನ ಪ್ರಚಾರ ನೀಡುತ್ತಿರುವುದು ಜನರಲ್ಲರ ಕಾರ್ಯಕ್ಕೆ ಅಡ್ಡಿಯಾಗುತ್ತದೆಂದು ವಾದಿಸತೊಡಗಿದರು. ಈ ದಿಸೆಯಲ್ಲಿ ಜನರಲ್‌ರು ಲಂಡನ್ನಿನ **ದ ಟೈಮ್ಸ್** ಪತ್ರಿಕೆಗೆ ಪತ್ರ ಬರೆದು ''ಹಾಫ್‌ಕಿನ್‌ರು ಸರ್ಕಾರದವರು ಕೈಗೊಳ್ಳುತ್ತಿರುವ ಸ್ಯಾನಿಟರಿ ವ್ಯವಸ್ಥೆಗಳಿಗೆ ಅಡ್ಡಿಪಡಿಸುತ್ತಿದ್ದಾರೆ; ಅವರ ಈ ನಡತೆ ತುಂಬಾ ಅಪಾಯಕಾರಿಯಾದುದು; ಹಾಗೂ ಘೋರವಾದ ಪರಿಣಾಮಗಳಿಗೆ ಎಡೆಮಾಡಬಹುದು'' ಎಂದು ದೂರಿದ್ದರು. ಹಾಫ್‌ಕಿನ್ನರುಅದೇ ಪತ್ರಿಕೆಗೆ ಸಭ್ಯರೀತಿ ಯಿಂದಲೇ ಉತ್ತರ ಬರೆದಿದ್ದರು. ''ರೋಗದ ಸಾಂಕ್ರಾಮಿಕ ವಿಶಾಲ ಪ್ರದೇಶವನ್ನಾವರಿಸಿಕೊಂಡಿದೆ; ಅದರ ಮೂಲ ಇನ್ನೂ ತಿಳಿಯದಾಗಿದೆ; ಅಂತಹ ಸಮಯದಿಲ್ಲ ಲಭ್ಯವಿರುವ ಸಿಬ್ಬಂದಿ ಮತ್ತು ಹಣಕಾಸುಗಳನ್ನು ಸ್ಯಾನಿಟರಿ ಕಾರ್ಯಗಳಿಗೆ ಬಳಸುವುದರಿಂದ ಯಾರಿಗೂ ಪ್ರಯೋಜನವಾಗಲಾರದು; ಆದುದರಿಂದ ಅಪಾಯದ ಸ್ಥಿತಿಯಲ್ಲಿರುವ ಜನರಿಗೆಲ್ಲಾ ಇನಾಕ್ಯುಲೇಷನ್ ಮಾಡಿಸಿ ವೈಯಕ್ತಿಕವಾಗಿಅವರೆಲ್ಲರೂ ಪ್ಲೇಗ್ ಬ್ಯಾಸಿಲೈ ವಿರುದ್ಧ ಹೋರಾಡುವಂತೆ ಮಾಡುವುದೇ ಸರಿಯಾದ ಕ್ರಮ'' ಎಂದು ತಮ್ಮ ವಾದವನ್ನು ಅತ್ಯಂತ ವಿನಯದಿಂದ ಮಂಡಿಸಿದ್ದರು.

ಇಂಗ್ಲೆಂಡಿನಲ್ಲಿ ಈ ಬಗೆಗೆ ಹೆಚ್ಚಿನ ವಾದ-ವಿವಾದಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಲಿಲ್ಲ. ಆದರೆ ಭಾರತದಲ್ಲಿ ಪತ್ರಿಕೆಗಳು ಇನಾಕ್ಯುಲೇಷನ್ ಪದ್ಧತಿ ಮತ್ತು ಅದರ ಜನಕನ ರಕ್ಷಣೆಗೆ ಮುಂದಾದವು. ಅವೆಲ್ಲಾ ಜನರಲ್ ರಾಡ್ಜರ್ಸ್ ಪ್ಲೇಗಿನ ಹತೋಟಿಗೆ ಜಾರಿಗೊಳಿಸುತ್ತಿದ್ದ ಕ್ರಮಗಳನ್ನು ವಿರೋಧಿಸಿ ಲೇಖನಗಳನ್ನು ಬರೆಯಲಾರಂಭಿಸಿದರು. ಮಿಕ್ಕೆಲ್ಲಾ ಪ್ರತಿಕೆಗಳಿಗಿಂತ ಪೂನದಿಂದ ಪ್ರಕಟವಾಗುತ್ತಿದ್ದ **''ಕೇಸರಿ''** ಪತ್ರಿಕೆಯಲ್ಲಿ ಹೆಚ್ಚಿನ ಪ್ರಾಶಸ್ತ್ಯ ಪಡೆಯಿತು. ಅದನ್ನು ಭಾರತ ವಿಮೋಚನಾ ಚಳವಳಿಯ ಮುಂಚೂಣಿ ನಾಯಕರಾಗಿದ್ದ ಬಾಲಗಂಗಾಧರ ತಿಲಕರು (1856-1920) ಪ್ರಕಟಿಸುತ್ತಿದ್ದರು. ವಾಮಪಂಥೀಯ ಪ್ರಜಾಪ್ರಭುತ್ವವಾದಿ ತಿಲಕರಿಗೆ ವಸಾಹತುಶಾಹಿಗಳ ವಿರುದ್ಧ ಸೆಣಸುವುದಕ್ಕೆ ಯಾವ ''ಆಯುಧ'' ವಾದರೂ ಸ್ವೀಕಾರಾರ್ಹ. ಅಂತಹ ಹೋರಾಟ ನಡೆಸುವುದಕ್ಕೆ ''ಕೇಸರಿ'' ಆಕಾಲದಲ್ಲಿ ಪ್ರಖ್ಯಾತಿ ಪಡೆದಿತ್ತು. ರಷ್ಯಾದಲ್ಲಿ 1905ರಲ್ಲಿ ಜರುಗಿದ ಕ್ರಾಂತಿ ಅವರಿಗೆ ಮೆಚ್ಚುಗೆಯಾಗಿತ್ತು. ಭಾರತೀಯರೂ ಸಹ ಬ್ರಿಟಿಷ್ ಸಂಕೋಲೆಯಿಂದ ಬಿಡಿಸಿಕೊಳ್ಳಲು ಅಂತಹ ಮಾರ್ಗಗಳನ್ನು ಅನುಸರಿಸಬೇಕೆಂದು ಅವರು ವಾದಿಸುತ್ತಿದ್ದರು. ತಿಲಕರಿಗೆ ಹಾಫ್‌ಕಿನ್ನರು ವೈಯಕ್ತಿಕವಾಗಿ ಪರಿಚಯವಿದ್ದರೋ, ಇಲ್ಲವೋ ತಿಳಿಯದು. ಆದರೆ ಪ್ಲೇಗ್ ವ್ಯಾಕ್ಸಿನೇಷನ್ 1998ರ ಹೊತ್ತಿಗೆ ಯಶಸ್ವಿಯಾಗುತ್ತಿರುವುದನ್ನು ತಿಳಿದ ನಂತರ ಆ ಪದ್ಧತಿಯನ್ನು ಭಾರತದಲ್ಲಿ ಪ್ಲೇಗ್ ತಲೆಯೆತ್ತುತ್ತಿರುವ ಪ್ರದೇಶಗಳಲ್ಲೆಲ್ಲಾ ವ್ಯಾಪಕ ಇನಾಕ್ಯುಲೇಷನ್ ಕಾರ್ಯವನ್ನು ಜಾರಿಗೆ ತರಬೇಕೆಂದೇ **'ಕೇಸರಿ'** ಮೂಲಕ ಪ್ರತಿಪಾದಿಸತೊಡಗಿದ್ದರು. ''ದಂಗೆ ಕೋರ''ರೆಂದು ಖ್ಯಾತಿ ಪಡೆದಿದ್ದ ತಿಲಕರು, ಹಾಫ್‌ಕಿನ್ನರ ಪದ್ಧತಿಗೆ ಬೆಂಬಲ ನೀಡುತ್ತಾರೆಂಬುದು ತಿಳಿದ ಮೇಲೆ ಭಾರತದಲ್ಲಿನ ಬ್ರಿಟಿಷ್ ವಲಯದಲ್ಲಿ ಹಾಫ್‌ಕಿನ್ನರಿಗೆ ಬಹಳಷ್ಟು ವೈರಿಗಳು ಹುಟ್ಟಿಕೊಂಡಿದ್ದರಲ್ಲಿ ಅಚ್ಚರಿಯೇನಿಲ್ಲ.

ಭಾರತದಲ್ಲಿದ್ದ ಬ್ರಿಟಿಷ್ ವಸಾಹತುಶಾಹಿ ಅಧಿಕಾರವರ್ಗದವರು ಮತ್ತು ಹಾಪ್‌ಕಿನ್ಸರ ನಡುವಿನ ಸಂಬಂಧ ಹದಗೆಡುವುದಕ್ಕೆ ಇನ್ನೂ ಒಂದು ಕಾರಣವಿತ್ತು. ಭಾರತದ ಉತ್ತರದ ಗಡಿರಾಜ್ಯಗಳಲ್ಲಿ 1890ರ ಹೊತ್ತಿಗೆ ಬ್ರಿಟಿಷರ ವಿರುದ್ಧ ಒಂದಲ್ಲ ಒಂದು ಕಾರಣದಿಂದ ಆಂದೋಲನಗಳು ನಡೆಯುತ್ತಲೇ ಇದ್ದವು. ಅಧಿಕಾರಿಗಳು ಬಂದೂಕಿನ ತುದಿಯಿಂದ ಉತ್ತರ ನೀಡಿ ಅಂತಹ ಗಲಭೆಗಳನ್ನು ಹತ್ತಿಕ್ಕುತ್ತಿದ್ದರಾದರೂ ಜನ ಸಮೂಹದಲ್ಲಿ ಅತೃಪ್ತಿ ಹೊಗೆಯಾಡುತ್ತಲೇ ಇರತ್ತಿತ್ತು. ಬಂಗಾಳದಲ್ಲೊಂದು ಅತಿ ದೊಡ್ಡ ಆಂದೋಲನ 1890ರ ಸಮಯದಲ್ಲಿ ಜರುಗುತ್ತಲೇ ಇರುತ್ತಿತ್ತು. ಸುಮಾರು ನಲವತ್ತು ಸಾವಿರ ಜನರು ಬ್ರಿಟಿಷ್ ಸೇನೆಯೊಡನೆ ಸೆಣಸಾಡುವ ಕದನದ ಪರಿಸ್ಥಿತಿಯೇ ಉಂಟಾಗಿತ್ತು. ಲಾರ್ಡ್ ಕರ್ಜನ್‌ರು ವೈಸ್‌ರಾಯ್ ಆಗಿದ್ದ 1899-1905ರ ಅವಧಿಯಲ್ಲಿ ಅವರೆಲ್ಲಾ ಸಮಯ ಉತ್ತರದ ಕದನಗಳನ್ನು ಹತ್ತಿಕ್ಕುವುದರಲ್ಲೇ ಬಹುಪಾಲು ಕಳೆಯಿತೆನ್ನಬಹುದು. ಈ ಗಲಭೆಗಳೆಲ್ಲಾ ರಷ್ಯಾದವರ ಪ್ರಚೋದನೆಗಳಿಂದಲೇ ನಡೆಯುತ್ತಿವೆಯೆಂದು ನಂಬಿದವರೂ ಇದ್ದರು; ರಷ್ಯಾದ ವಿರುದ್ಧ ಊಹಾಪೋಹದ ಪ್ರಚಾರಗಳನ್ನು ಮಾಡತೊಡಗಿದರು. ರಷ್ಯಾದವರು ಭಾರತದ ಮೇಲೆ ದಂಡೆತ್ತಿಬರಲು ಸನ್ನಾಹವೊಡ್ಡುತ್ತಿದ್ದಾರೆಂಬ ಹುಯಿಲೆಬ್ಬಿಸಿದರು. ರಷ್ಯಾದ ಬಗೆ ವಿರೋಧ ಭಾವನೆ ಕಲ್ಕತ್ತಾವನ್ನೇ ಅಲ್ಲದೆ ಲಂಡನನ್ನು ಆವರಿಸಿಕೊಂಡಿತು. ಭಾರತದಲ್ಲಿ ರಷ್ಯಾದ ರಾಯಭಾರಿಯಾಗಿದ್ದ ಲೆಸ್ಸಾರ್ ಎಂಬವರು ''ರಷ್ಯಾಕ್ಕೆ ಸಂಬಂಧಿಸಿದ ವಿಷಯಗಳಿಗೆಲ್ಲ ಇಲ್ಲಿ ವಿರೋಧದ ವಾತಾವರಣವಿದೆ. ಸಿಕ್ಕಿದ ಅವಕಾಶಗಳಲೆಲ್ಲಾ ಅಡೆತಡೆಗಳನ್ನುಂಟು ಮಾಡುತ್ತಾರೆ. ಸಕ್ಕರೆಯ ಆಮದನ್ನು ಹೆಚ್ಚಿಸುವ ದೃಷ್ಟಿಯಿಂದ ಹೊಸ ಕೌನ್ಸಲರ್ ಅಧಿಕಾರಿಗಳನ್ನು ನೇಮಕ ಮಾಡುವಾಗ ಅದರಿಂದ ಸ್ಯಾನಿಟರಿ ಕಾರ್ಯಕ್ರಮಗಳಿಗೆ ಅಡಚಣೆಯಾಗುತ್ತದೆಂದು ವಿರೋಧಿಸಿದರು; ಅದೇ ರೀತಿಯ ಅಡಚಣೆಯನ್ನು ರಷ್ಯಾದಿಂದ ಜಾನುವಾರುಗಳನ್ನು ಆಮದು ಮಾಡಿಕೊಳ್ಳುವ ಪ್ರಶ್ನೆಗಳು ಬಂದಾಗಲೂ ಸಲ್ಲದ ಅಡಚಣೆಗಳನ್ನೊಡ್ಡಿ ಅದನ್ನು ಸ್ಥಗಿತಗೊಳಿಸುತ್ತಾರೆ.'' ಡಾ|| ಕಸ್ಕಡಮೋವ್ ಸಹ ಅದೇ ರೀತಿಯಲ್ಲಿ ಸ್ವದೇಶದ ಸರ್ಕಾರಕ್ಕೆ ವರದಿ ಮಾಡುತ್ತಿದ್ದರು. ಹಾಫ್‌ಕಿನ್ನ ವ್ಯಾಕ್ಸೀನನ್ನು ಲಾಹೋರ್‌ನಲ್ಲಿ ಪ್ರಯೋಗ ಪರೀಕ್ಷೆಗೊಳಪಡಿಸಲು ರಷ್ಯಾ ಗುಂಪಿನವರಿಗೆ ಅವಕಾಶ ನೀಡುತ್ತಿರಲಿಲ್ಲ. ಅಲ್ಲಿಯ ಅಧಿಕಾರಿ ವರ್ಗದವರು ರಷ್ಯನ್ನರ ಹತ್ತಿರ ಮಾತಾಡುವಾಗ ಅವರೆಲ್ಲಾ ರಷ್ಯಾದ ಗೂಢಚಾರರೆಂಬಂತೆ ಅನುಮಾನಿಸುತ್ತಿದ್ದ ರಂತೆ.

ರಷ್ಯಾ ವಿರುದ್ಧದ ಚಳವಳಿಯನ್ನು ಪ್ರಚೋದಿಸುತ್ತಿದ್ದವರು ಅವರ ಉದ್ದೇಶಗಳಿಗೆ ಬೆಂಬಲ ನೀಡಬಹುದಾದ ವಿಚಾರಗಳನ್ನು ಹುಡುಕಿ ಹುಡುಕಿ ಗೊಂದಲಮಯ ವಾತಾವರಣ ಸೃಷ್ಟಿ ಮಾಡಲು ಹವಣಿಸುತ್ತಿದ್ದರು. ಅದಕ್ಕೆ ಸರಿಯಾಗಿ ಕೆಲವು ಆಂಗ್ಲೋ ಇಂಡಿಯನ್ ಪತ್ರಿಕೆಗಳು ಮುಂಬಯಿಯಲ್ಲಿರುವ ರಷ್ಯಾಸಂಜಾತ ಹಾಫ್‌ಕಿನ್ನರ ಚಲನವಲನಗಳ ಮೇಲೆ ಎಚ್ಚರವಹಿಸಿಬೇಕೆಂದು ಬರೆಯಲಾರಂಭಿಸಿದವು. ನಿಜಹೇಳ

ಬೇಕೆಂದರೆ ಹಾಫ್‌ಕಿನ್ನರು ತಮ್ಮ ರಷ್ಯಾ ರಾಷ್ಟ್ರೀಯತೆಯನ್ನೂ ಯಾವತ್ತೂ ಮರೆಮಾಚಲು ಪ್ರಯತ್ನ ಮಾಡಿರಲೇ ಇಲ್ಲ; ಮತ್ತು ಮುಂಬಯಿಗೆ ಆಗಾಗ್ಗ ಬರುತ್ತಿದ್ದ ರಷ್ಯಾದವರೊಡನೆ ಸ್ನೇಹಯುತವಾಗಿ ನಡೆದುಕೊಳ್ಳುವುದನ್ನೂ ಮುಚ್ಚುಮರೆ ಮಾಡುತ್ತಿರಲಿಲ್ಲ. ಅವರು ರಷ್ಯಾದಿಂದ ಬರುತ್ತಿದ್ದವರ ಒಡನಾಟ ಮಾಡುತ್ತಿದ್ದು ಒಂದು ಅಪರಾಧವೆಂಬಂತೆ ಕಂಡಿತು. ಅದಕ್ಕಾಗಿ ಅಪರಾಧದ ಸರಣಿಗಳನ್ನು ಸೃಷ್ಟಿಸತೊಡಗಿದರು. ಅವುಗಳಲ್ಲಿ ಹಾಫ್‌ಕಿನ್ ರಷ್ಯಾದ ಪ್ರಜೆ; ಆದುದರಿಂದ ಅವು ಭಾರತೀಯರ ವಿಷಕರವಾಗಿ ಪರಿಣಮಿಸಬಹುದಾದ ಇಂಜಕ್ಷನ್ ನೀಡುವಲ್ಲಿ ತೊಡಗಿಸಿಕೊಂಡಿದ್ದಾರೆ; ಅದರಿಂದ ಭಾರತೀಯರಲ್ಲಿ ಇಂಗ್ಲೀಷ್ ಸರ್ಕಾರದ ಬಗೆಗೆ ಅಪನಂಬಿಕೆ ಹುಟ್ಟುವಂತೆ ಮಾಡುತ್ತಿದ್ದಾರೆ; ಭಾರತೀಯರ ಸ್ವಾಸ್ಥವನ್ನು ಹಾಳುಮಾಡಿ, ಅವರ ಜನಸಂಖ್ಯೆಯನ್ನೇ ಕಡಿಮೆ ಮಾಡುವುದಲ್ಲದೆ, ರಷ್ಯಾದವರು ಭಾರತವನ್ನು ವಶಪಡಿಸಿಕೊಳ್ಳುವುದಕ್ಕೆ ಹುನ್ನಾರ ಮಾಡುತ್ತಿದ್ದರೆಂದು ಸಹಾ ಪ್ರಚಾರಗಳಾಗುತ್ತಿದ್ದವು.

ಬೇಕಂತಲೇ ಮಾಡಿದ ಎರಡನೆಯ ಆರೋಪದ ಪ್ರಚಾರ ಸಫಲವಾಗಲಿಲ್ಲ. (ಮೊದಲನೆಯ ಆರೋಪ ಹಾಫ್‌ಕಿನ್ನರು ಕಲ್ಕತ್ತಾದಲ್ಲಿ ಕಾಲರಾ ವ್ಯಾಕ್ಸೀನ್ ಬಗೆಗೆ ಸಂಶೋಧನೆ ಮಾಡಿ ಭಾರತದ ಉತ್ತರದ ಪ್ರದೇಶಗಳಲ್ಲಿ ಇನಾಕ್ಯುಲೇಷನ್ ಕಾರ್ಯದಲ್ಲಿ ಮಗ್ನರಾಗಿದ್ದಾಗ ಅಲ್ಲಿಯ ಕೆಲವು ಪತ್ರಿಕೆಗಳು ''ಬಯಲುಮಾಡಿದ ಕಾಣ್ಕೆ''ಗಳಾಗಿದ್ದವು) ಭಾರತೀಯ ಜನಸಮುದಾಯಕ್ಕೆ ಹಾಫ್‌ಕಿನ್ನರು ಮಾಡಿದ್ದ ಉಪಕಾರ ಎಲ್ಲರಿಗೂ ತಿಳಿದ ವಿಷಯವಾಗಿದ್ದು ಅವರ ಬಗೆಗಿದ್ದ ಪಿತೂರಿಯ ಆರೋಪಗಳಿಗೆ ಸೊಪ್ಪು ಹಾಕಲಿಲ್ಲ. ಪ್ಲೇಗ್ ವ್ಯಾಕ್ಸೀನಿನ ಬಗೆಗೂ ಒತ್ತೊಟ್ಟು ಆಗಲೂ ಕೆಲವು ಪತ್ರಿಕೆಗಳು ಅದೇ ರೀತಿಯ ಅಪಪ್ರಚಾರದ ಲೇಖನಗಳನ್ನು ಬರೆಯುತ್ತಲೇ ಇದ್ದವು. ಜನರಲ್ಲಿ ಸುಪ್ತವಾಗಿರಬಹುದಾದ ಕಾಯಿಲೆಗಳು ಇನಾಕ್ಯುಲೇಷನ್ ನೀಡಿಕೆಯಿಂದ ಚುರುಕುಗೊಳ್ಳುತ್ತವೆ; ಟಿ.ಬಿ., ಕೀಲುವಾತ, ಮತ್ತು ಸಿಫಿಲಿಸ್‌ನಂಥ ಮೇಹ ರೋಗದ ಪ್ರಭಾವವನ್ನು ಹೆಚ್ಚಿಸುತ್ತವೆಂತಲೂ ಲೇಕನಗಳನ್ನು ಪ್ರಕಟಿಸುತ್ತಿದ್ದವು. ಅಂತಹುಗಳಿಗೆಲ್ಲಾ ರಾಜಕೀಯ ದೃಷ್ಟಿಕೋನಗಳು ಇರುತ್ತಿದ್ದವು. ಸರ್ಕಾರದವರು ಅಧಿಕೃತವಾಗಿ ಜಾರಿಗೊಳಿಸುತ್ತಿರುವ ಧೋರಣೆಗಳನ್ನು ಯಾರೊಬ್ಬರೂ ವಿರೋಧಿಸುವಂತಿಲ್ಲ ಎಂಬ ಉದ್ದೇಶದಿಂದ ಮಾಡಿದವು. ನಿಜಸ್ಥಿತಿಯೆಂದರೆ ಸರ್ಕಾರದ ಧೋರಣೆಗಳನ್ನು ವಿರೋಧಿಸುವವರು ಆಗ ಭಾರತದಲ್ಲಿ ಯಾರೂ ಇದ್ದಂತಿರಲಿಲ್ಲ. ಭಾರತದಲ್ಲಿದ್ದ ರಷ್ಯಾದ ಪ್ರತಿನಿಧಿಯವರು ವರದಿಯೊಂದರಲ್ಲಿ ''ದೇಶೀಯ ಪತ್ರಿಕೆಗಳನ್ನು ನಿಯಂತ್ರಿಸಲು ಹೊಸದಾಗಿ ಹೊರಡಿಸಿದ ಕಾನೂನಿನಂತೆ ಕ್ರಾಂತಿಕಾರಿ ಎನ್ನಬಹುದಾದ ಯಾವುದೇ ಕಾರ್ಯಕ್ರಮ ಹುಟ್ಟಿಕೊಳ್ಳದಂತೆ ಅವುಗಳನ್ನು ಹತ್ತಿಕ್ಕಲಾಗುತ್ತಿದೆ'' ಎಂದು ತಿಳಿಸಿದ್ದರು.

ತನಗೆ ಸರಿಯೆನಿಸಿದ ವಿಷಯಗಳನ್ನು ಪ್ರತಿಪಾದಿಸುವ ತನ್ನ ಧೋರಣೆಯನ್ನು ಪೂನಾದ ''ಕೇಸರಿ'' ಮತ್ತೊಮ್ಮೆ ಪ್ರದರ್ಶಿಸುವ ಸಂದರ್ಭ ಒದಗಿಬಂದಿತು. ಹಾಫ್‌ಕಿನ್ನರು

ನಡೆಸುತ್ತಿದ್ದ ಒಳ್ಳೆಯ ಕಾರ್ಯಕ್ರಮಗಳನ್ನು ವಿರೋಧಿಸುತ್ತಿರುವ ಪ್ರವೃತ್ತಿಯನ್ನು ಎದುರಿಸಲು ಸೆಟೆದು ಎದ್ದುನಿಂತಿತ್ತು. ''ಕೇಸರಿ'' ಪತ್ರಿಕೆಯನ್ನು ನಡೆಸುವವರು ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದರು ತಿಲಕರು ಮುಂಬಯಿಯ ಪ್ರಖ್ಯಾತ ಹಾಗೂ ಪ್ರತಿಭಾವಂತ ವೈದ್ಯರಾದ ಡಾ॥ಬಿ.ಕೃಷ್ಣ ಎಂಬವರಿಗೆ ಒಂದು ಪ್ರಶ್ನಾವಳಿಯನ್ನು ಕಳುಹಿಸಿ ಅವುಗಳಿಗೆ ಸಾಧ್ಯವಿರುವ ಹಾಗೂ ಪರಿಪೂರ್ಣ ರೀತಿಯಲ್ಲಿ ಉತ್ತರಿಸಬೇಕೆಂದು ಕೋರಿದರು. ಡಾ॥ ಕೃಷ್ಣ ಅವರೂ ಸಹ ಇನ್ನೂ ಕೆಲವು ಅನುಭವೀ ವೈದ್ಯರು ಮತ್ತು ಪ್ರಮುಖ ಅಧಿಕಾರಿಗಳನ್ನು ಈ ದಿಸೆಯಲ್ಲಿ ತಮಗೆ ನೆರವು ನೀಡಬೇಕೆಂದು ಮನವಿ ಮಾಡಿದರು. ಅವರೆಲ್ಲರೂ ಸಹ ತಮಗೆ ಲಭ್ಯವಿದ್ದ ಮಾಹಿತಿಗಳನ್ನು ಒದಗಿಸಿದರು. ಈ ತನಿಖೆಯ ಆಧಾರದ ಮೇಲೆ ಡಾ॥ ಕೃಷ್ಣ ಪ್ರಶ್ನಾವಳಿಗೆ ಉತ್ತರಿಸಿ ವರದಿಯೊಂದನ್ನು ಕಳುಹಿಸಿದರು.

ವಿಚಾರಣೆಯಲ್ಲಿ ಭಾಗವಹಿಸಿದವರ ಅಭಿಪ್ರಾಯಗಳು ತುಂಬಾ ಕರಾರುವಾಕ್ಕಾಗಿದ್ದವು. ಸುಮಾರು ಒಂದೂಕಾಲು ಲಕ್ಷದಷ್ಟು ಇನಾಕ್ಯುಲೇಷನ್ ಮಾಡಿಕೊಂಡವರಲ್ಲಾದ ಪರಿಣಾಮಗಳನ್ನು ಪರಿಶೀಲಿಸಲಾಗಿತ್ತು. ಅವರಲ್ಲಿ ಇನಾಕ್ಯುಲೇಷನ್‌ನಿಂದಾಗಿರಬಹುದಾದ ಅಡ್ಡಪರಿಣಾಮಗಳು ಮತ್ತು ಸಂಭವಿಸಿದ ಸಾವುಗಳು ಕ್ರಮವಾಗಿ 7 ಮತ್ತ 10 ಪಟ್ಟು ಇನಾಕ್ಯುಲೇಷನ್ ಮಾಡಿಸಿಕೊಳ್ಳದವರಿಗಿಂತ ಕಡಿಮೆಯಾಗಿತ್ತು. ಇಂಜಕ್ಷನ್ ನೀಡಿದ ಕೆಲವರಲ್ಲಿ ಆ ಜಾಗದಲ್ಲಿ ಕೀವುಗಟ್ಟುವಂತಹ ಅಡ್ಡಪರಿಣಾಮಗಳಾಗಿದ್ದುಂಟು; ಆದರೆ ಅಷ್ಟೊಂದು ಅಗಾಧ ಸಂಖ್ಯೆಯಲ್ಲಿ ಜರುಗಿದ ಇನಾಕ್ಯುಲೇಷನ್‌ಗಳನ್ನು ಗಣನೆಗೆ ತೆಗೆದುಕೊಂಡಾಗ ಈ ಪ್ರಕರಣಗಳು ತೀರಾ ಕಡಿಮೆಯೆಂದೇ ಹೇಳಬಹುದು. ವರದಿಯ ಅಂತಿಮ ತೀರ್ಮಾನ ಹೀಗಿತ್ತು:

''ಭಾರತವು ಪ್ಲೇಗಿನಿಂದ ಮುಕ್ತವಾಗಬೇಕಾದರೆ ಜನಸಮುದಾಯಕ್ಕೆ ಸಾರ್ವತ್ರಿಕವಾಗಿ ಇನಾಕ್ಯುಲೇಷನ್ ಮಾಡಿಸುವುದೊಂದೇ ಸರಿಯಾದ ಮಾರ್ಗ' ಎಂದು ಸಾರಲಾಗಿತ್ತು. ಇದರಿಂದಾಗಿ ಹಾಫ್‌ಕಿನ್ ಅವರು ಹಾಗೂ ಪ್ಲೇಗಿನಿಂದ ರಕ್ಷಿಸಲು ಪಣತೊಟ್ಟು ಕಾರ್ಯನಿರ್ವಹಿಸುತ್ತಿದ್ದ ಜನ ಸಮುದಾಯದವರ ನಡುವೆ ಅಸಮಾಧಾನ ವಾತಾವರಣ ಉಂಟುಮಾಡಬೇಕೆಂದಿದ್ದವರ ಉದ್ದೇಶಪೂರ್ವಕ ಪ್ರಚಾರಗಳೆಲ್ಲ ವಿಫಲವಾದವು. ಪೂನಾದ ''ಕೇಸರಿ'' ಬ್ರಿಟಿಷರ ''ಸಿಂಹ''ಕ್ಕಿಂತಲೂ ಶಕ್ತಿಶಾಲಿಯೆಂಬುದು ಇದರಿಂದ ವ್ಯಕ್ತಪಟ್ಟಿತು.

೧೩

# ಅನಿರೀಕ್ಷಿತ ಆಘಾತ

ಹಾಫ್‌ಕಿನ್ ತಯಾರಿಸಿದ್ದ ಪ್ಲೇಗಿನ ವ್ಯಾಕ್ಸೀನು ಮತ್ತು ಅವರ ರಾಷ್ಟ್ರೀಯತೆ ಮುಂತಾದವುಗಳ ಬಗೆಗೆ ಎದ್ದಿದ್ದ ಬಿರುಗಾಳಿ ಸ್ವಲ್ಪ ಮಟ್ಟಿಗೆ ತಹಬಂದಿಗೆ ಬಂದಾಗಿತ್ತು. ಅವರನ್ನು ವಿರೋಧಿಸುತ್ತಿದ್ದ ಬಣದವರ ಚಟುವಟಿಕೆಗಳು ಸ್ವಲ್ಪ ಕಾಲ ಅಡಗಿ ಹೋದಂತಿದ್ದವು; ಶಾಂತ ಪರಿಸ್ಥಿತಿ ನೆಲೆಯಾದಂತ್ತಿತ್ತು . ಆದರೆ ಅದೊಂದು ತೋರ್ಗಾಣಿಕೆಯ ಪ್ರಶಾಂತ ಪರಿಸ್ಥಿತಿಯೇ ಹೊರತು, ನೈಜವಾದುದಲ್ಲ; ಮುಂದಿನ ಎರಡು ವರ್ಷಗಳೊಳಗೇ ಮತ್ತೆ ಪ್ರಕ್ಷುಬ್ಧ ಪರಿಸ್ಥಿತಿ ತಲೆಯೆತಿತ್ತು. ಅಲ್ಲಿಯ ತನಕ ಭಾರತಾದ್ಯಂತ ಸುಮಾರು ನಲವತ್ತು ಲಕ್ಷ ಜನರಿಗೆ ಪ್ಲೇಗ್ ವಿರುದ್ಧ ಇನಾಕ್ಯುಲೇಷನ್ ಮಾಡಿಯಾಗಿತ್ತು; ದೇಶದ ಮೂಲೆಮೂಲೆಗಳಲ್ಲಿ ಅದರ ವ್ಯಾಪ್ತಿ ಹರಡಿತ್ತು. ವ್ಯಾಕ್ಸೀನನ್ನು ಆವಿಷ್ಕರಿಸಿದ ಹಾಫಖಿನ್ನರೇ ಸ್ವತಃ ಅಷ್ಟೊಂದು ಅಗಾಧ ಸಂಖ್ಯೆ ಇನಾಕ್ಯುಲೇಅನ್ ಮಾಡುವುದಾಗಲೀ ಅಥವಾ ಆ ಕಾರ್ಯದಲ್ಲಿ ತೊಡಗಿದ ತಂಡದವರ ಮೇಲ್ವಿಚಾರಣೆ ಮಾಡುವುದಾಗಲೀ ಅಸಾಧ್ಯದ ಕೆಲಸವೇ ಸರಿ. ಬಹುಶಃ ಈ ಕಾರಣಗಳಿಂದಲೇ ಇನಾಕ್ಯುಲೇಷನ್ ಕಾರ್ಯಕ್ರಮಗಳಲ್ಲಿ ಸ್ವಲ್ಪ ಲೋಪದೋಷಗಳು ನುಸುಳುವುದು ಸ್ವಾಭಾವಿಕವೇ ಎನ್ನಬಹುದು.

ಪಂಜಾಬ್ ಪ್ರಾಂತ್ಯದ ಮಾಲ್ಕೊವಲ್ ಎಂಬ ಹಳ್ಳಿಯಲ್ಲಿಯ ದುರ್ದೈವದ ಘಟನೆಯೊಂದು 1902ರ ಅಕ್ಟೋಬರ್ 10ರಂದು ಜರುಗಿತು. ಅಲ್ಲಿ ಇನಾಕ್ಯುಲೇಷನ್ ಮಾಡಿದ 107 ಹಳ್ಳಿಗರಲ್ಲಿ 19 ಜನರಲ್ಲಿ ಧನುರ್ವಾಯು ತಗುಲಿ, ಅವರೆಲ್ಲಾ ಅಸುನೀಗಿದರು. ಆ ದುರಂತದ ಬಗೆಗೆ ತನಿಖೆಯೂ ನಡೆಯಿತು. ಸ್ವಲ್ಪ ದಿನಗಳ ನಂತರ ಸರ್ಕಾರದವರು ಆ ಬಗೆಗೆ ವಿಚಾರಣೆ ಮಾಡಲು ಒಂದು ಅಧಿಕೃತ ಕಮೀಷನ್‌ನನ್ನು ನೇಮಿಸಿದರು. ಕಮೀಷನ್‌ನಲ್ಲಿ ಬಹುಪಾಲು ಕಲ್ಕತ್ತಾ ಆಡಳಿತಕ್ಕೆ ಸೇರಿದ ಅಧಿಕಾರಿಗಳೇ ಇದ್ದರು. ಅವರಲ್ಲಾರೂ ಜೀವಶಾಸ್ತ್ರದ ವಿಷಯಗಳಲ್ಲಿ ಪರಿಣಿತಿ ಪಡೆದವರಿರಲಿಲ್ಲ. ವಿಚಾರಣೆಯ ಸಮಯದಲ್ಲಿ ವ್ಯಾಕ್ಸೀನ್ ತಯಾರಿಕೆಯ ವಿವಿಧ ಹಂತಗಳ ಬಗೆಗೆ ಹಾಫ್‌ಕಿನ್ ನೀಡುತ್ತಿದ್ದ ವಿವರಣೆಗಳನ್ನು ಕೇಳಿ ಅರ್ಥಮಾಡಿಕೊಳ್ಳಲು ಅವರಿಗೆ ವ್ಯವಧಾನವೂ ಇದ್ದಂತಿರಲ್ಲಿ. ಅವರು ಮೊದಲೇ ಒಂದು ರೀತಿಯ ನಿರ್ಧಾರವನ್ನು ಮಾಡಲು ಪೂರ್ವಾಲೋಚನೆ ಮಾಡಿಕೊಂಡೇ ಬಂದ ಹಾಗಿತ್ತು. ಆ ಹಳ್ಳಿಗಳಿಗೆ ಇನಾಕ್ಯುಲೇಷನ್

ಲಸಿಕೆಗಳನ್ನು ಪ್ರಯೋಗಾಲಯದಲ್ಲಿ ತಯಾರಿಸಿ ಫ್ಲಾಸ್ಕ್‌ಗಳಿಗೆ ಭರ್ತಿಮಾಡುವಾಗಲೇ ಟೆಟನಸ್ ಬ್ಯಾಸಿಲೈಗಳು ಸೇರಿಕೊಂಡಿರಬೇಕೆಂಬುದು ಕಮೀಷನ್‌ನವರ ಅಭಿಪ್ರಾಯ ವಾದಂತೆ ತೋರುತ್ತಿತ್ತು. ಪ್ರಯೋಗಾಲಯದಲ್ಲಿ ಹಾಗೆ ಟೆಟನಸ್ ಬ್ಯಾಸಿಲೈ ಗಳು ವ್ಯಾಕ್ಸೀನಿನೊಡನೆ ಕಲುಷಿತವಾಗಲು ಸಾಧ್ಯವಾಗುವುದಿಲ್ಲವೆಂದು ವಿವರಿಸಿದ್ದು ಅವರ ಮುಂದೆ ಅರಣ್ಯರೋಧನದಂತಾಯಿತು. ಜೊತೆಗೆ ಮಾಲ್ಕೋವನಲ್ಲಿ ಇಂಜಕ್ಷನ್ ಮಾಡಿದ ಡಾ॥ ಇಲಿಯಟ್‌ರು ಇನಾಕ್ಯುಲೇಷನ್ ಲಸಿಕೆ ಇದ್ದ ಬಾಟಲಿಯ ಬಿರಡೆ ಹಲವುಬಾರಿ ಕೈತಪ್ಪಿಕೆಳಗಡೆ ಬಿದ್ದಿದ್ದಲ್ಲದೆ ಅದನ್ನೇ ಮತ್ತೆ ಮುಚ್ಚಿಡಲು ಉಪಯೋಗಿಸಿದ್ದ ವಿಷಯವನ್ನು ಹೇಳಿದರೂ ಸಹಾ ಆ ಬಗೆಗೆ ಕಮೀಷನ್ ಗಮನಹರಿಸಲಿಲ್ಲ. ಡಾ॥ ಇಲಿಯಟ್‌ರು ಬಯಲು ಮಾಡಿದ ಸಂಗತಿ ಮಾಲ್ಕೋವಲ್ ದುರಂತಕ್ಕೆ ಸರಳ ರೀತಿಯಲ್ಲಿ ಕಾರಣನೀಡುವಂತಿದ್ದರೂ ಕಮೀಷನ್‌ನವರು ನಿಜ ಸ್ಥಿತಿಯನ್ನು ಅರಿತುಕೊಳ್ಳಲು ಸಿದ್ಧರಿರದಿದ್ದಾಗ ಯಾರೇನೂ ಮಾಡುವಂತಿರಲಿಲ್ಲ. ಅವರು ಮೊದಲು ಮಾಡಿಕೊಂಡು ಬಂದಿದ್ದ ನಿರ್ಧಾರಕ್ಕೇ ಅಂಟಿಕೊಂಡು ತಮ್ಮ ವರದಿ ತಯಾರು ಮಾಡಿದರು. ದುರಂತಕ್ಕೆ ಹಾಫ್‌ಕಿನ್ನರಲ್ಲಿ ದೋಷಾಸ್ಪದವಾಗುವಂಥ ನಿರ್ಲಕ್ಷ್ಯದ ನಡೆವಳಿಕೆ ಗಳಿಗೆ ಆಧಾರಗಳಿವೆ; ವ್ಯಾಕ್ಸೀನಿನ ತಯಾರಿಕೆಯಲ್ಲಿ ಕಾರ್ಬಾಲಿಕ್ ಆಸಿಡ್ಡನ್ನು ಬಳಸದಿರುವುದು ಒಂದು ಪ್ರಮುಖ ಅನಾದರಣೆಯೆಂದೇ ಹೇಳಬೇಕಾಗುತ್ತದೆ. ಅದರಿಂದ ಮುಂಬಯಿ ಪ್ರಯೋಗಾಲಯದ ನಿರ್ದೇಶಕರೇ ಈ ದುರಂತಕ್ಕೆ ಹೊಣೆಯಾಗಿರುತ್ತಾರೆ, ಎಂದು ವರದಿ ಸಲ್ಲಿಸಿದರು.

ವಿಚಾರಣೆ ಇನ್ನೂ ಮುಂದುವರಿಯುತ್ತಲೇ ಇದ್ದಾಗಲೇ ಸರ್ಕಾರ ಹಾಫ್‌ಕಿನ್ನರನ್ನು ಪ್ರಯೋಗಾಲಯದ ನಿರ್ದೇಶಕರ ಹುದ್ದೆಯಿಂದ ಅಮಾನತ್ತು ಮಾಡಿತು. ಅವರು ಮತ್ತೊಮ್ಮೆ ವ್ಯಾಕ್ಸೀನ್ ತಯಾರಿಕೆಯ ವಿವಿಧ ಹಂತಗಳನ್ನು ನಿಷ್ಪಕ್ಷಪಾತವಾಗಿ ಅಭ್ಯಸಿಸಿ ಎಲ್ಲಿ ತಪ್ಪುಗಳಾಗಿವೆಯೆಂಬುದನ್ನು ತಿಳಿಯಲು ಪ್ರಯತ್ನಿಸಬೇಕೆಂದು ಒಂದು ವರ್ಷಕಾಲ ವಿಧವಿಧವಾಗಿ ಕೇಳಿಕೊಂಡರು. ಅವರು ಮೇಲಧಿಕಾರಿಗಳಿಗೆ ಬರೆಯುತ್ತಿದ್ದ ಪತ್ರಗಳನ್ನು ಓದುವ ಪ್ರಯತ್ನವನ್ನೂ ಯಾರೂ ಮಾಡಿದಂತಿರಲಿಲ್ಲ. ಈ ಪ್ರಕರಣದ ಬಗೆಗೆ ಅಭಿಪ್ರಾಯ ನೀಡಲು ಲಂಡನ್ನಿನ ಒಂದು ವಿಜ್ಞಾನ ಮಂಡಳಿಗೂ ಕಳುಹಿಸಲಾಯಿತು; ಅವರು ಹಾಫ್‌ಕಿನ್ ವಿರುದ್ಧ ತೀರ್ಪು ನೀಡಬಹುದೆಂಬುದು ಅಧಿಕಾರಶಾಹಿಯ ನಿರೀಕ್ಷೆಯಾಗಿತ್ತು. ಅದನ್ನು ಪರಿಶೀಲಿಸಿದ ಲಿಸ್ಟರ್ ಇನ್ಸ್ಟಿಟ್ಯೂಟ್‌ನವರು ವಿಷಯವನ್ನು ಹೆಚ್ಚಿನ ಗಣನೆಗೆ ತೆಗೆದುಕೊಳ್ಳಲಿಲ್ಲ. ಅವರು ಹಾಫ್‌ಕಿನ್ನರು ಮಾಲ್ಕೋವಲ್‌ನ 19 ಮರಣಗಳಿಗೆ ಅಪರಾಧಿಯಾಗಿದ್ದಾರೆಂದು ತೀರ್ಮಾನಿಸಲಿಲ್ಲವಾದರೂ, ಅವರು ಜವಾಬ್ದಾರರಲ್ಲವೆಂದು ನೇರವಾಗಿ ಹೇಳಲೂ ತಯಾರಿರಲಿಲ್ಲ!

ಇಷ್ಟಾದರೂ ಹಾಫ್‌ಕಿನ್ ತಮ್ಮ ಹೋರಾಟವನ್ನು ಮುಂದುವರಿಸುತ್ತಲೇ ಇದ್ದರು. ಅವರಿಗೆ ಸಾಕಷ್ಟು ಮಾನಸಿಕ ಒತ್ತಡ ಉಂಟಾಗುತ್ತಿದ್ದರೂ ಅವರೆಂದೂ ಎದೆಗುಂದಿ ಹತಾಶರಾಗಿರಲಿಲ್ಲ. ಆದರೂ ಅವರ ಹುದ್ದೆಯ ಬಗೆಗೆ ಉಂಟಾಗಿದ್ದ ಅನಿಶ್ಚಿತತೆ ಅವರನ್ನು

ಸಾಕಷ್ಟು ತೊಂದರೆಯಲ್ಲಿ ಸಿಲುಕಿಸಿತ್ತು. ಅಂತಿಮವಾಗಿ ಸರ್ಕಾರ ಅವರನ್ನು 1904ರಲ್ಲಿ ಹುದ್ದೆಯಿಂದಲೇ ವಜಾ ಮಾಡಿತು. ಅವರೀಗ ಜೀವನ ಸಾಗಿಸಲು ಯಾವುದೇ ಹುದ್ದೆಯಿಲ್ಲದೆ ನಿರುದ್ಯೋಗಿಯಾದರು. ಭಾರತವನ್ನು ತಮ್ಮ ಸೇವಾಕ್ಷೇತ್ರವೆಂದು ಆಯ್ಕೆಮಾಡಿಕೊಂಡು ಸ್ವಯಿಚ್ಛೆಯಿಂದ ಹನ್ನೊಂದು ವರ್ಷಗಳ ಹಿಂದೆ ಬಂದಿದ್ದರು; ಅವರು ಗಳಿಸಿದ ಅಪಾರ ಯಶಸ್ಸಿನ ನಂತರ ಅವರಿಗೆ ದೊರೆತ ಅವಮಾನ ಮತ್ತು ಎದೆಗುಂದಿಸುವ ಪರಿಸ್ಥಿತಿ ಮಾತ್ರ. ಅದನ್ನು ಸಹಿಸಲಾರದೆ ಮೇ ತಿಂಗಳಲ್ಲಿ ಲಂಡನ್ನಿಗೆ ಹಿಂತಿರುಗಿದರು; ಅವರ ವೈರಿಗಳಿಗೆ ಅದರಿಂದ ತುಂಬಾ ಸಂತೃಪ್ತಿಯುಂಟಾಗಿರಬೇಕು.

ಲಂಡನ್ನಿನಲ್ಲಿ ಹಾಫ್‌ಕಿನ್ನರು ಇದ್ದ ಮುಂದಿನ ಮೂರು ವರ್ಷಗಳು ಅವರ ಜೀವನ ಕ್ರಮಗಳ ಬಗೆಗೆ ಹೆಚ್ಚೇನು ತಿಳಿದುಬರಲಿಲ್ಲ. ಆ ಸಮಯದಲ್ಲಿ ಇಂಗ್ಲೆಂಡ್ ಮತ್ತು ಯುರೋಪಿನ ಪ್ರಯೋಗಾಲಯಗಳಿಗೆ ಭೇಟಿ ನೀಡಿದರು; ಭಾರತದಲ್ಲಾದ ಪ್ರಕರಣದ ಬಗೆಗೆ ತಾವು ಭೇಟಿ ಮಾಡಿದ ನಿಷ್ಪಕ್ಷಪಾತ ವಿಜ್ಞಾನಿಗಳು ಹಾಗೂ ಖ್ಯಾತ ಮಿಣಜೀವಿ ಶಾಸ್ತ್ರಜ್ಞರೊಡನೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು; ಹಾಫ್‌ಕಿನ್ನರು ಈ ಪ್ರಕರಣದಲ್ಲಿ ದೋಷಮುಕ್ತರೆಂದು ಒಕ್ಕೊರಲ್ಲಿನಿಂದ ಅವರೆಲ್ಲಾ ಹೇಳುತ್ತಿದ್ದರು.

ಆ ಕಾಲದಲ್ಲಿ ವಿಶ್ವದ ವಿವಿಧ ಭಾಗಗಳಲ್ಲಿ ಹಾಫ್‌ಕಿನ್ನರ ಬಗೆಗೆ ಯಾವ ಬೆಳವಣಿಗೆಗಳು ಡೆಯುತ್ತಿದ್ದವೆಂಬುದನ್ನು ಊಹಿಸುವುದು ಸುಲಭವಲ್ಲ. ಆದರೆ ಅಂದಿನ ಕೆಲವು ವರ್ತಮಾನ ಪತ್ರಿಕೆಗಳನ್ನು ತಿರುವಿ ಹಾಕಿದರೆ ಹಲವು ಅಂಶಗಳು ಬೆಳಕಿಗೆ ಬರುತ್ತವೆ. **ಲಂಡನಿನ್ನ ದ ಟೈಮ್ಸ್, ದ ಲಾನ್ಸೆಟ್**, ಭಾರತದ **ಟೈಮ್ಸ್ ಆಫ್ ಇಂಡಿಯಾ** ಮತ್ತು ಕೆಲವು ಫ್ರೆಂಚ್ ಪತ್ರಿಕೆಗಳ 1906 ಮತ್ತು 1907ರ ಸಂಚಿಕೆಗಳಲ್ಲಿ ಈ ಬಗೆಗೆ ಹಲವಾರು ಉಲ್ಲೇಖಗಳನ್ನು ನೋಡಬಹುದು. ಅವನ್ನೆಲ್ಲಾ ಗಮನಿಸಿದಾಗ ಹಾಫ್‌ಕಿನ್ನರು ಎದುರಿಸುತ್ತಿದ್ದ ಪರಿಸ್ಥಿತಿಯಲ್ಲಿ ಅವರೇನು ಒಬ್ಬಂಟಿಯಾಗಿರಲ್ಲವೆಂಬುದು ವೇದ್ಯವಾಗುತ್ತದೆ. ಅವರೂ ಸಹಾ ಅಂತಹ ಸಮಯದಲ್ಲೂ ತಾವು ಗಳಿಸಿಕೊಂಡಿದ್ದ ಖ್ಯಾತಿ ಮತ್ತು ವಿಜ್ಞಾನ ಕ್ಷೇತ್ರದಲ್ಲಿ ಅವರಿಗಿದ್ದ ಘನತೆ, ಗೌರವಗಳ ಪ್ರಭಾವದಿಂದಲೇ ತಮ್ಮ ಹೋರಾಟವನ್ನು ಮುಂದುವರಿಸುತ್ತಲೇ ಇದ್ದರು; ಬಹಳಷ್ಟು ಜನ ಪ್ರಾಮಾಣಿಕ ವಿಜ್ಞಾನಿಗಳ ಬೆಂಬಲವೂ ಇತ್ತು.

**ಟೈಮ್ಸ್ ಆಫ್ ಇಂಡಿಯಾ** ಪತ್ರಿಕೆಯ ನವೆಂಬರ್ 17ರ (1906) ವಾರದ ಪುರವಣಿಯಲ್ಲಿ ಅನಾಮಧೇಯರೊಬ್ಬರ ಪತ್ರ ಪ್ರಕಟವಾಗಿತ್ತು.

''ವ್ಲಾದಿಮಿರ್ ಹಾಫ್‌ಕಿನ್ನರು ರೋಗಗಳನ್ನು ಪ್ರತಿಬಂಧಿಸುವಲ್ಲಿ ವ್ಯಾಕ್ಸೀನುಗಳ ವಿಸ್ಮಯಕರ ಪಾತ್ರವನ್ನು ಸಾದರ ಪಡಿಸಿದಾಗಿನಿಂದ ಆ ವಿಧಾನಗಳಿಂದ ಮಾತ್ರ ಕಾಯಿಲೆ ಕಸಾಲೆಗಳ ಬಾಧೆಯಿಂದ ಮುಕ್ತವಾಗಿರಲು ಸಾಧ್ಯ. ಕಾಲ ಕಳೆದಂತೆಲ್ಲಾ ಅವುಗಳ ಸಾಮರ್ಥ್ಯದ ಬಗೆಗೆ ಪುರಾವೆಗಳು ಹೆಚ್ಚಾಗುತ್ತಲೇ ಇವೆ. ಕೆಲವು ದಿನಗಳ ಹಿಂದೆ ರೋಗ ಪ್ರತಿಬಂಧಕ ವ್ಯಾಕ್ಸೀನುಗಳನ್ನು ಕರಾಚಿಯಲ್ಲಿ ಬಳಸಿದಾಗ ಅಲ್ಲಿ ಸೋಂಕು ರೋಗಗಳಿಂದ ಸಾಯುವವರ ಸಂಖ್ಯೆ ಶೇ.96ರಷ್ಟು ಕಡಿಮೆಯಾಯಿತು. ಮುಂಬಯಿ ಕಾರ್ಪೊರೇಷನ್

ವಲಯದಲ್ಲಿ ಹಿಂದಿನ ವರ್ಷಗಳಲ್ಲಿ ಪ್ಲೇಗಿನ ವಿರುದ್ಧ ಇನಾಕ್ಯುಲೇಷನ್ ಮಾಡಿದ್ದರಿಂದ ಮುಂದಿನ ದಿನಗಳಲ್ಲಿ ಪ್ಲೇಗ್‌ನಿಂದ ನರಳುವವರ ಪ್ರಮಾಣ ಬಹಳಷ್ಟು ಕಡಿಮೆಯಾಗಿತ್ತು. ಈ ಬಗೆಗೆ ಕೇವಲ ಅಜ್ಞಾನ ಇಲ್ಲವೆ ಪೂರ್ವಗ್ರಹ ಪೀಡಿತರನ್ನು ಹೊರತುಪಡಿಸಿದರೆ ಉಳಿದವರಾರೂ ಈಗ ಲಭ್ಯವಿರುವ ಸಾಕ್ಷ್ಯ ಪುರಾವೆಗಳನ್ನು ನಿರಾಕರಿಸಲಾರರು. ಅಲ್ಲದೆ ಇನಾಕ್ಯುಲೇಷನ್‌ಗಳ ಬಗೆಗೆ ಜನಾಭಿಪ್ರಾಯ ಉತ್ತುಂಗತೆಯ ಮಟ್ಟದಲ್ಲಿರುವಾಗ, ಅದನ್ನೇ ಮತ್ತೆ ಬೋಧಿಸುವುದು ಅರಣ್ಯರೋಧ ದಂತಾಗುತ್ತದೆ; ಅದನ್ನೀಗ ಕಣ್ಣಿದ್ದವರು ಕಾಣಬಹುದು, ಕಿವಿ ಇದ್ದವರು ಕೇಳಬಹುದು ಅಷ್ಟೊಂದು ಸರಳವಾಗಿ ಸಾಧಿಸಲ್ಪಟ್ಟಂತಾಗಿದೆ....'' ಎಂದು ತಮ್ಮ ಪತ್ರದಲ್ಲಿ ಬರೆದಿದ್ದರು.

ನಿಜಕ್ಕಾಗಿ ಹೋರಾಡುವವರು ಲಂಡನ್ನಿನಲ್ಲಿ ಮುಂದಿನ ಕೆಲವೇ ದಿನಗಳಲ್ಲಿ ಸೆಟೆದು ನಿಂತರು. ಅವರಲ್ಲೆಲ್ಲಾ ತುಂಬಾ ಉತ್ಸಾಹಶಾಲಿ ಹಾಗೂ ಎಂದೂ ರಾಜಿಯಾಗದವರೆಂದು ಹೆಸರಾದ ಮತ್ತು ನೋಬೆಲ್‌ಪ್ರಶಸ್ತಿ ವಿಜೇತರೂ ಆದ ಪ್ರೊ:ರೋನಾಲ್ಡ್ ರಾಸ್ ಪ್ರಮುಖರು; ಸ್ವತಃ ಅವರೇ 1897ರಲ್ಲಿ ಮಲೇರಿಯಾ ವ್ಯಾಧಿಯ ವಾಹಕವನ್ನು ಕಂಡು ಹಿಡಿದಿದ್ದರು; ಕಾಕತಾಳೀಯವೋಯೆಂಬಂತೆ ವ್ಲಾದಿಮಿರ್ ಹಾಫ್‌ಕಿನ್ನರು ಪ್ಲೇಗ್ ವಿರುದ್ಧ ಕಾರ್ಯವೆಸಗುವ ವ್ಯಾಕ್ಸೀನನ್ನು ಅದೇ ಸಮಯದಲ್ಲಿ ಬಳಕೆಗೆ ತಂದಿದ್ದರು. ಮಿಲಿಟರಿ ವೈದ್ಯರಾಗಿದ್ದ ರಾಸ್ ಮಲೇರಿಯಾ ಪರತಂತ್ರ ಜೀವಿಯನ್ನು ಕಂಡು ಹಿಡಿದಾಗ ವೈದ್ಯ ಸಮೂಹದವರಿಗೆ ಅದನ್ನು ಮನದಟ್ಟು ಮಾಡುವಲ್ಲಿ ಅನುಭವಿಸಿದ ಪಡಿಪಾಟಲಿನ ಅನುಭವವಿದ್ದು, ಹಾಫ್ಕಿನ್ನರು ಈಗ ಎದುರಿಸುತ್ತಿದ್ದ ಅನುಭವದ ಕಷ್ಟಕೋಟಲೆಗಳು ಅವರಿಗೆ ಅರಿವಾಗುತ್ತಿದ್ದವು. ಪುರಾತನ ಕಾಲದ ಹಲವಾರು ಸೂಕ್ಷ್ಮದರ್ಶಕ ಯಂತ್ರಗಳನ್ನಿರಿಸಿಕೊಂಡು ನಾನಾ ಬಗೆಯ ಸೊಳ್ಳೆಗಳಲ್ಲಿ ಮಲೇರಿಯಾದ ಪರತಂತ್ರಜೀವಿಯನ್ನು ಕಂಡು ಹಿಡಿಯುವಲ್ಲಿ ಹಲವಾರು ವರ್ಷಗಳನ್ನು ಕಳೆಯಬೇಕಾಗಿತ್ತು. ಪ್ರತಿಸಾರಿಯೂ ಪರಂತ್ರಜೀವಿಯು ಇನ್ನೇನು ಸಿಕ್ಕೇ ಬಿಟ್ಟಿತು ಎನ್ನುವಷ್ಟರಲ್ಲಿ ವಿಜ್ಞಾನದ ವಿಷಯಗಳ ಬಗೆಗೆ ಉದಾಸೀನ ಪ್ರವೃತ್ತಿಯ ಮಿಲಿಟರಿ ಮೆಡಿಕಲ್ ಸರ್ವಿಸ್ಸಿನ ಮೇಲಧಿಕಾರಿಗಳು ಮೇಜರ್ ರಾಸ್ ಅವರನ್ನು ವೈಜ್ಞಾನಿಕ ಸಂಶೋಧನೆಗಳನ್ನು ಕನಸಿನಲ್ಲೂ ಮಾಡಲಾಗದಂತ ದೇಶದ ಯಾವುದೋ ದಿಕ್ಕು ದೆಸೆಯಿಲ್ಲದ ಮೂಲೆಯ ಸ್ಥಳವೊಂದಕ್ಕೆ ವರ್ಗಾವಣೆ ಮಾಡಿ, ಅಲ್ಲಿ ಹಲವು ವರ್ಷಗಳು ಕೊಳೆಯುವಂತೆ ಮಾಡಿ ಬಿಡುತ್ತಿದ್ದರು. ಆದುದರಿಂದ ರೋನಾಲ್ಡ್ ರಾಸ್, ಹಾಫ್‌ಕಿನ್ನರ ಬಗೆಗೆ ಹೇಳಿಕೆ ನೀಡಲು ಬೇರೆಲ್ಲರಿಗಿಂತ ಹೆಚ್ಚು ಯೋಗ್ಯರಾದವರೆಂದು ಹೇಳಬಹುದು:

''ಕಾಯಿಲೆ ಕಸಾಲೆಗಳನ್ನು ವೈಜ್ಞಾನಿಕವಾಗಿ ಅಭ್ಯಸಿಸುವಲ್ಲಿ ಈ ದೇಶವು ಇತರೆಡೆಗಳಿಗಿಂತ ತುಂಬಾ ಹಿಂದೆ ಬಿದ್ದಿದೆ. ಆ ಬಗೆಗೆ ಸಾಕಷ್ಟು ಪ್ರಯೋಗಶಾಲೆಗಳಾಗಲೀ, ಕಾರ್ಯಕರ್ತರಾಗಲೀ ಇಲ್ಲವೇ ಇಲ್ಲವೆಂದರೂ ಸರಿಯೇ. ಮೆಡಿಕಲ್ ಮತ್ತು ಸ್ಯಾನಿಟರಿ ವಿಷಯಗಳ ಹುದ್ದೆಗಳಲ್ಲಿ ಕೇವಲ ಅಧಿಕಾರದ ಹಿರಿತನದಿಂದ ಮೇಲೇರಿದ ಕೆಲವರ ಕೈಯಲ್ಲಿ

ಕೇಂದ್ರೀಕೃತವಾಗಿದೆ; ವೈಜ್ಞಾನಿಕ ಕ್ಷೇತ್ರದಲ್ಲಿ ಪ್ರಾಮುಖ್ಯತೆಯುಳ್ಳವರಿಗೆ ಈ ಇಲಾಖೆಗಳಲ್ಲಿ ಸ್ಥಾನವೇ ಇಲ್ಲ. ಕಾಲರಾ, ಟೈಫಾಯಿಡ್, ಮಲೇರಿಯಾ ಮುಂತಾದ ವ್ಯಾಧಿಗಳು, ಜನಭರಿತ ಭಾರತೀಯ ಸಮುದಾಯವನ್ನು ಭಯಂಕರವಾಗಿ ಪೀಡಿಸುತ್ತಿರುವುದಾದರೂ, ಅವುಗಳ ಕಾರಣಗಳನ್ನು ಕಂಡು ಹಿಡಿದವರನ್ನು ಸಂದೇಹಾತ್ಮಕವಾಗಿ ಇಲ್ಲವೇ ತುಚ್ಛವಾಗಿ ಕಾಣಲಾಗುತ್ತಿದೆ; ಅವರ ಅನುಭವದ ಸಹಾಯವನ್ನು ಪಡೆದುಕೊಳ್ಳಲು ಯಾವುದೇ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುತ್ತಿಲ್ಲ'' ಎಂಬುದು ಅವರ ಹೇಳಿಕೆಯ ಸಾರಾಂಶವಾಗಿತ್ತು.

ಈ ದಿಸೆಯಲ್ಲಿ ರೋನಾಲ್ಡ್ ರಾಸ್ ಬ್ರಿಟಿಷ್ ವಸಾಹತುಶಾಹಿಗಳ ಆಡಳಿತದ ಜಡತ್ವ ಮತ್ತು ಉಪೇಕ್ಷೆಯನ್ನು ಹೊಡೆದೆಬ್ಬಿಸಲು ಮಾಡಿದ ಪ್ರಯತ್ನಗಳು ಯಶಸ್ವಿಯಾಗತೊಡಗಿದವು; ಹಾಗೂ ಅವರ ಶೋಧನೆಗೆ ಪ್ರಪಂಚದಾದ್ಯಂತ ಮನ್ನಣೆ ದೊರೆಯಿತು. ಹಾಗೆಯೇ ಮುಂದೊಂದು ದಿನ ವಿಜ್ಞಾನದ ಕಟ್ಟಾ ಬೆಂಬಲಿಗರಾದ ಅವರು ಹಾಫ್‌ಕಿನ್ನರ ರಕ್ಷಣಾರ್ಥವಾಗಿ ಗದೆಯನ್ನು ಕೈಗೆತ್ತಿಕೊಂಡರು **ಟೈಮ್ಸ್ ಆಫ್ ಇಂಡಿಯಾದ** ಮಾರ್ಚ್ 11ರ (1907) ಸಂಚಿಕೆಯಲ್ಲಿ ವಿಸ್ತಾರವಾದ ಪತ್ರವೊಂದನ್ನು ಬರೆದರು. ಅದರಲ್ಲಿ ಹಾಫ್‌ಕಿನ್ನರು 1893ರಲ್ಲಿ ಮೊಟ್ಟಮೊದಲು ಭಾರತಕ್ಕೆ ಕಾಲಿಟ್ಟಾಗಿನಿಂದ ಅವರನ್ನು 1904ರಲ್ಲಿ ಇಲ್ಲಿಂದ ಹೊರಹಾಕುವವರೆಗೆ ನಡೆದ ಸಂಗತಿಗಳನ್ನೆಲ್ಲಾ ಪುನರಾವಲೋಕನ ಮಾಡಿದ್ದರು.

''ಹಾಫ್‌ಕಿನ್ನರು ಪ್ಲೇಗಿನ ನಿರೋಧಕ್ಕಾಗಿ ನೀಡಿರಬಹುದಾದ ಒಟ್ಟು ಇನಾಕ್ಯುಲೇಷನ್‌ಗಳ ಸಂಖ್ಯೆಯನ್ನು ನಿರ್ಧಾರ ಮಾಡುವುದು ಕಷ್ಟವಾದರೂ, ಭಾರತವೊಂದರಲ್ಲೇ ಅರವತ್ತು ಲಕ್ಷಕ್ಕಿಂತಲೂ ಹೆಚ್ಚು ವ್ಯಾಕ್ಸೀನಿನ ಡೋಸುಗಳನ್ನು ಬಿಡುಗಡೆ ಮಾಡಿದ್ದಾರೆ. ಪ್ಲೇಗಿನ ಸಾಂಕ್ರಾಮಿಕತೆ ಅತಿಹೆಚ್ಚಾಗಿರುವ ಪ್ರದೇಶಗಳಲ್ಲಿನ ಜನ ಸಮುದಾಯಕ್ಕೆ ನೀಡಿದಾಗ ಶೇ.85ರಷ್ಟು ಸಾವುಗಳನ್ನು ತಡೆಯಲು ಸಾಧ್ಯವಾಗಿದೆ. ಬಹುಶಃ ಎಡ್ವರ್ಡ್ ಜೆನ್ನರನ್ನು (1749-1823) ಹೊರತು ಪಡಿಸಿದರೆ ಇವರಷ್ಟು ಹೆಚ್ಚು ಜನರ ಜೀವ ಉಳಿಸಿದವರು ಇನ್ನಾರೂ ಇರಲಾರರು''.

ಹಾಫ್‌ಕಿನ್ನರ ಇಂಥಾ ಮಾನವೀಯ ಥಳಥಳಿಸುವ ಕೆಲಸಕ್ಕೆ ದೊರೆತ ಪ್ರತಿಫಲವಾದರೂ ಏನು? ಎಂದು ರೋನಾಲ್ಡ್ ರಾಸ್ ಪ್ರಶ್ನೆ ಹಾಕುತ್ತಾರೆ. ಆ ಬಗೆಗೆ ಅವರೇ ಉತ್ತರಿಸಿರುವರಾದರೂ ಅದೂ ಸಹ ತೃಪ್ತಿಕರವಲ್ಲವೆಂದೇ ಹೇಳಬೇಕು.

''ಸರ್ಕಾರೀ ಸೇವೆಯಲ್ಲಿರುವ ನ್ಯಾಯಾಂಗ, ಮಿಲಿಟರಿ ಮತ್ತು ಆಡಳಿತ ನಡೆಸುವವರಿಗೂ, ಶ್ರೀಮಂತ ವರ್ತಕರಿಗೂ ಮತ್ತು ಹಿಂಬದಿಯಲ್ಲೇ ನಿಂತು ಸರ್ಕಾರವನ್ನು ದಿಕ್ಕು ತಪ್ಪಿಸುವ ರಾಜಕಾರಣಗಳಿಗೆಲ್ಲಾ ಪ್ರತಿವರ್ಷ ಅತಿ ಉದಾರತೆಯಿಂದ ನಿವೃತ್ತಿ ವೇತನಗಳನ್ನು ದಯಪಾಲಿಸುತ್ತಾರೆ; ಆದರೆ ಈ ಅನುಕೂಲತೆಗಳನ್ನು ನೀಡುವುದರಿಂದ ಯಾರಿಗೆ ಪ್ರಯೋಜನವಾಗುತ್ತದೆ ಅಥವಾ ಅದು ಯಾವ ತರಹೆಯ ಅನುಕೂಲತೆ

ನೀಡುತ್ತಿದ್ದಾರೆಂದು ಪ್ರಶ್ನಿಸಿದಾಗ ಉತ್ತರ ಹೇಳುವುದಕ್ಕೂ ಕಷ್ಟವಾಗಬಹುದು. ಆದರೆ ಇಲ್ಲೊಬ್ಬರು ತಮ್ಮ ಜೀವಕ್ಕೇ ಅಪಾಯವಾಗುವುದನ್ನು ಲೆಕ್ಕಿಸದೇ ಲಕ್ಷಾನುಗಟ್ಟಲೆ ಜನರ ಜೀವಗಳನ್ನು ರಕ್ಷಿಸಲು ಪಡಬಾರದ ಕಷ್ಟನಷ್ಟಗಳನ್ನನುಭವಿಸಿ ಶ್ರಮಿಸಿದವರಿದ್ದಾರೆ;ಅವರಷ್ಟೆ ಮಾನವೀಯ ಕಾರ್ಯವನ್ನು ಯಾವ ಅಧಿಕಾರಿ ಯಾವ ಮಾನವತಾವಾದಿ, ಅಥವಾ ಧೈರ್ಯಶಾಲಿ ಮಾಡಿದ್ದಾರೆ? ನಿಜ, ಅವರಿಗೂ ಕೆಲಸಕ್ಕಾಗಿ ವೇತನವನ್ನು ನೀಡಲಾಗಿದೆ; ಅವರಿಗಾಗಿಯೇ ಪ್ರಯೋಗಾಲಯವನ್ನು ಕಟ್ಟಿಸಿಕೊಟ್ಟಿದ್ದರು; ಆರ್ಡರ್ ಆಫ್ ಇಂಡಿಯನ್ ಎಂಪೈರ್ (C.I.E.) ಎಂಬ ಪ್ರಶಸ್ತಿಯನ್ನೂ ಸಹಾ ಇತ್ತು ಗೌರವ ಸೂಚಿಸಿದ್ದರು; ಆದರೆ ಅವರೀಗ ಕಾರ್ಯನಿರತರಾಗಿದ್ದ ಪ್ರಯೋಗಾಲಯವನ್ನು ತ್ಯಜಿಸಿ, ತಮ್ಮ ಕಾರ್ಯಕ್ಷೇತ್ರವನ್ನೇ ಬಿಟ್ಟುಹೋಗುವಂತಾಗಿದೆ''

ಡಾ॥ರಾಸ್ ಅವರು ಹಾಫ್‌ಕಿನ್ನರ ಮುಂಬಯಿಯ ಪ್ರಯೋಗಾಲಯದಲ್ಲೇ ಲಸಿಕೆಯೊಳಗಡೆ ಟೆಟನಸ್ ಬ್ಯಾಸಿಲೈಗಳ ಕಲುಷಿತವಾಗಿದ್ದವೆಂಬ ಅವರ ಶತ್ರುಗಳ ವಾದವನ್ನು ಸಂಪೂರ್ಣವಾಗಿ ಅಲ್ಲಗಳೆದರು. ಆ ಬಗೆಗೆ ಹಲವು ವಿಜ್ಞಾನಿಗಳು ಅಭಿಪ್ರಾಯಪಟ್ಟಂತೆ ಹಳ್ಳಿಯಲ್ಲಿ ವ್ಯಾಕ್ಸೀನೇಷನ್ ಮಾಡುತ್ತಿದ್ದಾಗ ಸ್ಥಳೀಯ ನೌಕರರ ತಪ್ಪಿನಿಂದ ಟೆಟನಸ್ ಬ್ಯಾಸಿಲೆಗಳು ಲಸಿಕೆ ಇದ್ದ ಬಾಟಲಿಗೆ ಸೇರಿದವೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ ಎಂದು ತಮ್ಮಪತ್ರದಲ್ಲಿ ಹೇಳಿದ್ದರು.

''ಒಂದು ವೇಳೆ ಪ್ರಯೋಗಾಲಯದಲ್ಲೇ ವ್ಯಾಕ್ಸೀನ್ ಜೊತೆ ಟೆಟನಸ್ ಬ್ಯಾಸಿಲೈಗಳು ಬೆರಕೆಯಾಗಿರಬಹುದೆಂದು ಹೇಳಿದರೂ ಅದಕ್ಕೆ ಪ್ರಯೋಗಾಲಯದ ನಿರ್ದೇಶಕರಿಗೇಕೆ ಶಿಕ್ಷೆಯಾಗಬೇಕು? ಪ್ರತಿದಿನ ಸಾವಿರಾರು ಡೋಸು ವ್ಯಾಕ್ಸೀನನ್ನು ಮುಂಬಯಿಯ ಪ್ರಯೋಗಾಲಯದಲ್ಲಿತಯಾರಾಗುತ್ತಿರುತ್ತವೆ. ಹಲವು ತೆರನ ಸಂಕೀರ್ಣ ಕಾರ್ಯಗಳು ಜರುಗಬೇಕಾಗುತ್ತದೆ; ಈ ಎಲ್ಲಾ ಕೆಲಸಕಾರ್ಯಗಳನ್ನು ಸ್ವತಃ ನಿರ್ದೇಶಕರೇ ತಮ್ಮ ಕೈಗಳಿಂದ ಮಾಡಲು ಸಾಧ್ಯವೇ? ಯಾವುದೇ ಒಂದು ಡೋಸ್‌ನಲ್ಲೂ ವ್ಯತ್ಯಾಸ ವಾಗುವುದಿಲ್ಲವೆಂದು ಅವರು ಭರವಸೆ ನೀಡಲು ಸಾಧ್ಯವೇ? ಒಂದು ಲಕ್ಷರೂಪಾಯಿಗಳ ನಾಣ್ಯಗಳನ್ನು ನೀಡಿದ ಸಂದರ್ಭದಲ್ಲಿ ಒಂದು ರೂಪಾಯಿ ಕೋಟಾದ್ದೆಂದು ಕಂಡು ಬಂದರೆ ಅವುಗಳನ್ನು ನೀಡಿದವನನ್ನೇ ಶಿಕ್ಷಿಸುವಂತಿದೆ ಈ ಪ್ರಕರಣ!''

ಪ್ರೊ:ರಾಸ್‌ರ ಲೇಖನ ಪ್ರಕಟವಾದ ಒಂದು ವಾರದಲ್ಲೇ ಇತರ ಕೆಲವರು ಹಾಫ್‌ಕಿನ್ನರ ಬೆಂಬಲಕ್ಕೆ ಮುಂದಾದರು. ಭಾರತದಲ್ಲಿದ್ದ ಆಂಗ್ಲೋ-ಇಂಡಿಯನ್ ಅಧಿಕಾರಿಗಳ ಒಂದು ಗುಂಪಿನ ಪಿತೂರಿ ಅದಾಗಿತ್ತೆಂದು ರಾಸ್ ಮಾರ್ಮಿಕವಾಗಿ ನುಡಿದ್ದದ್ದು ಇತರನ್ನೂ ಕಣಕ್ಕಿಳಿಸಿತು. ಲೀಡ್ಸ್ ವಿಶ್ವವಿದ್ಯಾಲಯದ ರೋಗಾಣು ಮತ್ತು ರೋಗ ಶಾಸ್ತ್ರಗಳ ಪ್ರಾಧ್ಯಾಪಕರಾಗಿದ್ದ ಪ್ರೊ:ಗ್ರುನ್‌ಬಾಮ್ ''ಇಂತಹ ಸಂದರ್ಭಗಳಲ್ಲಿ ಯಾರಾದರೊಬ್ಬ ಬಲಿಪಶುವಿನ ಮೇಲೆ ದೋಷಾರೋಪಣೆ ಹೊರಿಸಲು ಹುಡುಕಬೇಕಾಗುತ್ತದೆ; ಆಗ ಆ ಪ್ರಕರಣಕ್ಕೆ ಯಾರು ಕಾರಣವಾಗಿರಲಾರರೋ ಅವರನ್ನೇ

ಬಲಿಕೊಡುವುದು ಸ್ವಾಭಾವಿಕ'' ಎಂದು **ದ ಟೈಮ್ಸ್** ಪತ್ರಿಕೆಗೆ ಬರೆದ ಪತ್ರದಲ್ಲಿ ಉಲ್ಲೇಖಿಸಿದ್ದರು. ''ಪ್ರೊ.ರಾಸ್ ಅವರ ತೀಕ್ಷ್ಣವಾದ ಹಾಗೂ ಮನದಟ್ಟು ಮಾಡುವ ಪತ್ರದಿಂದ ಸಂಬಂಧಪಟ್ಟವರನ್ನು ಕಾರ್ಯೋನ್ಮುಖರಾಗುವಂತೆ ಮಾಡಲು ಅಸಾಧ್ಯವಾದರೆ, ಈ ವಿಷಯದ ಬಗೆಗೆ ಭಾರತ ಸರ್ಕಾರಕ್ಕೆ ಬಿನ್ನವಿಸಿಕೊಳ್ಳಬೇಕಾಗುತ್ತದೆ''ಎಂದು ರಾಜಿಯಾಗದಂಥ ದಾಟಿಯಲ್ಲಿ ಬರೆದಿದ್ದರು.

ಪ್ಯಾರಿಸ್ಸಿನಲ್ಲಿ ಡಾ।। ನಗೊಟ್ಟೇ ವಿಲ್‌ಬೋಜೆವಿಚ್ ಎಂಬ ಮಹಿಳಾ ವೈದ್ಯೆಯೊಬ್ಬರು **ಲಾಪ್ರೆಸ್ ಮಡಿಕೇಲೆ** ಪತ್ರಿಕೆಗೆ ಪತ್ರ ಬರೆದು ಹಾಫ್‌ಕಿನ್ನರಿಗೆ ಬೆಂಬಲ ತೋರಿಸಿದ್ದರು. ''ಪ್ಲೇಗಿನ ವಿರುದ್ಧ ಧೀರೋದಾತ್ತವಾಗಿ ಸೆಣಸುತ್ತಿರುವ ಪ್ಯಾಶ್ಚರರ ಹೆಸರಾಂತ ಶಿಷ್ಯರಲ್ಲೊಬ್ಬರನ್ನು ಕುರಿತ ಈ ವಿಷಯದಲ್ಲಿ ಫ್ರೆಂಚ್ ವೈದ್ಯಕೀಯ ಸಮುದಾಯ ಮೂಕ ಪ್ರೇಕ್ಷಕರಾಗಿ ಕುಳಿತುಕೊಳ್ಳುವಂತಿಲ್ಲ'' ಎಂದು ತಿಳಿಸಿದ್ದರು. ಅವರ ಇಂಗ್ಲೀಷ್ ಸಹೋದ್ಯೋಗಿಗಳು ಮೊದಲೇ ಬರೆದಂತೆ ಆಕೆಯೂ ಮಾಲ್ಕೋವಲ್ ದುರಂತದ ವಿವರಗಳನ್ನು ವಿವರವಾಗಿ ಪರಿಶೀಲಿಸಿ ಅದಕ್ಕೆ ಮುಂಬಯಿ ಪ್ರಯೋಗಾಲಯದ ನಿರ್ದೇಶಕರೇ ಕಾರಣವೆಂದು ದೂರುವುದು ಸರಿಯಲ್ಲವೆಂದು ವಾದಿಸಿದ್ದರು. ಲಂಡನ್ನಿನ ಲಿಸ್ಟರ್ ಇನ್ಸಿಟ್ಯೂಟ್‌ನವರು ನೀಡಿದ ಅಭಿಪ್ರಾಯಗಳನ್ನು ಸಮ್ಮತಿಸಿದವುದಿಲ್ಲ. ಅಂತಹ ದೋಷಾ ರೋಪಣೆಗಳಿಗೆ ಹಾಫ್‌ಕಿನ್ ಎಂದಿಗೂ ಬಾಧ್ಯರಲ್ಲ ಎಂದು ಖಡಾಖಂಡಿತವಾಗಿ ನಗೋಟ್ಟೀ ವಿಲ್‌ಬೋಜೆವಿಚ್ ಹೇಳಿದ್ದರು.

ಈ ರೀತಿಯಲ್ಲಿ ವಿಷಯದ ಬಗೆಗೆ ಪರಿಣಿತಿ ಪಡೆದ ವೈದ್ಯ ಸಮುದಾಯದವರೇ ನಿರ್ವಿವಾದ ಸತ್ಯವೆಂದು ಒಪ್ಪಿಗೆ ನೀಡುತ್ತಿದ್ದುದು ಹಾಫ್‌ಕಿನ್ನರ ಶತ್ರುಗಳಿಗೆ ಸಮ್ಮತಿಯಾಗುತ್ತಿರಲಿಲ್ಲ. ಆರ್ನಾಲ್ಡ್ ಲ್ಯಾಪಟನ್ ಎಂಬವರೊಬ್ಬರು **ದ ಟೈಮ್ಸ್** ಪತ್ರಿಕೆಗೆ ಬರೆದ ಪತ್ರದಲ್ಲಿ ಅವರಿಗೆ ಯಾವುದೇ ರೀತಿಯ ವ್ಯಾಕ್ಸೀನೇಷನ್‌ಗಳ ಬಗೆಗೆ ಅವು ಪ್ಯಾಶ್ಚರ್, ಅಥವಾ ಜೆನ್ನರ್‌ರವರದ್ದೇ ಆಗಿದ್ದರೂ ಸಹಾ ಅವುಗಳಲ್ಲಿ ನಂಬಿಕೆ ಇಲ್ಲ; ಕಾಲರಾ, ಪ್ಲೇಗ್, ಅಥವಾ ಮೈಲಿ ಬೇನೆಗಳನ್ನು ಅವುಗಳಿಂದ ತಡೆಯಲಾಗುವುದಿಲ್ಲ; ಕೇವಲ ಸ್ಯಾನಿಟರಿ ಕಾರ್ಯಕ್ರಮಗಳನ್ನು ಜರುಗಿಸುವುದರಿಂದ ಮಾತ್ರ ಸಾಂಕ್ರಾಮಿಕ ಕಾಯಿಲೆಗಳನ್ನು ತಡೆಗಟ್ಟಬಹುದೆಂಬುದು ಅವರ ಅಭಿಪ್ರಾಯವಾಗಿತ್ತು. ಕಾಲರಾ ಪ್ಲೇಗ್‌ಗಳ ವಿರುದ್ಧ ವ್ಯಾಕ್ಸೀನೇಷನ್ ಮಾಡುವುದೆಂದರೆ ರಕ್ತವನ್ನೇ ವಿಷಮಯವಾಗಿ ಪರಿವರ್ತಿಸುವು ದೆಂದರ್ಥವೆಂದು ವಾದಿಸಿದ್ದರು.

ವಿಕ್ಟೋರಿಯಾ ಬೀದಿಯ 7ನೇ ನಂಬರ್ ಮನೆಯಲ್ಲಿ ವಾಸವಾಗಿರುವ ವಿಳಾಸವನ್ನು ಮಾತ್ರ ನಮೂದಿಸಿದ್ದ ಈ ಪತ್ರದ ಕರ್ತೃನ ಸಾಮಾಜಿಕ ಅಂತಸ್ತೇನೆಂಬುದನ್ನು ತಿಳಿಸಿರಲ್ಲಿ. ಆದರೆ ಅವರನ್ನು ಸಮರ್ಥಿಸಿ ಇನ್ನೊಂದು ವಾರದಲ್ಲಿ ದ ಟೈಂಸ್ ಪತ್ರಿಕೆಯಲ್ಲಿ ಫ್ರೆಡರಿಕ್ ಲಿಲ್ಲೀ ಎಂಬವರು ದನಿಗೂಡಿಸಿದ್ದರು. ತಾವೊಬ್ಬ ಪಾರ್ಲಿಮೆಂಟ್ ಸದಸ್ಯರೆಂದು ಹೇಳಿಕೊಂಡು ಲ್ಯಾಪ್ಟನ್‌ರ ವಾದಕ್ಕೆ ಅನುಮೋದನೆ ನೀಡಿದ್ದರು. ಲಿಲ್ಲೀಯವರು ಬಹಳ ಹಿಂದೆ ಭಾರತದಲ್ಲಿ ಸರ್ಕಾರೀ ಸೇವೆಯಲ್ಲಿದ್ದವರು. ಅವರು ಬರೆದಿದ್ದರಲ್ಲಿ ಹಾಫ್‌ಕಿನ್ನರ

ವ್ಯಾಕ್ಸಿನೇಷನ್ ವಿರುದ್ಧವಾಗಿ ಏನೇನು ವಾದಗಳನ್ನು ಭಾರತದಲ್ಲಿದ್ದಾಗ ಇತರರು ಮುಂದೂಡುತ್ತಿದ್ದರೋ-ಸ್ಯಾನಿಟರಿ ಕಾರ್ಯಕ್ರಮಗಳು, ಜನರನ್ನು ವ್ಯಾಧಿಯಿಂದ ಬಳಲುವುದರಿಂದ ಬೇರ್ಪಡಿಸಿಡುವುದು-ಮುಂತಾದವನ್ನೇ ಮತ್ತೆ ಪುನರುಚ್ಚರಿಸಿದರು.

ಈ ತರಹೆಯ ವಾಗ್ಯುದ್ಧ **ದ ಟೈಮ್ಸ್** ಪತ್ರಿಕೆಯಲ್ಲಿ ಮುಂದಿನ ಒಂಬತ್ತು ತಿಂಗಳುಗಳು ಮುಂದುವರಿದವು. ತಾಂತ್ರಿಕ ವಿಷಯಗಳ-ವೈದ್ಯಕೀಯ-ಪತ್ರಿಕೆಗಳೂ ಸಹಾ ಆ ದಿಸೆಯಲ್ಲಿ ಹಿಂದೆ ಬೀಳಲಿಲ್ಲ. **ದ ಟೈಮ್ಸ್** ಪತ್ರಿಕೆಯ ಮುಖಾಂತರ ಅವರಿಗಾಗದಿದ್ದವರು ಹಾಫ್‌ಕಿನ್ನರ ಬಗೆಗೆ ಸಾರ್ವಜನಿಕರಲ್ಲಿ ಅಪಕೀರ್ತಿ ಉಂಟು ಮಾಡುವಲ್ಲಿ ಏನೆಲ್ಲಾ ತಂತ್ರಗಳನ್ನೂ ಬಳಸಿಕೊಳ್ಳಲು ತಯಾರಿದ್ದರು, 'ಅವರು ಮೆಡಿಕಲ್ ವಿಜ್ಞಾನ ಶಾಖೆಗೆ ಸೇರಿದವರಲ್ಲ; ಅದರಿಂದ ಹೊರಗಿದ್ದು ಕೊಂಡೇ ಸಾವಿರಾರು ಜನರನ್ನು ಬದುಕಿಸುವ ಸೋಗು ಹಾಕುತ್ತಿದ್ದಾರೆ'' ಎಂದು ಲಿಲ್ಲೀಯವರು ಇನ್ನೂ ಒಂದು ಪತ್ರ ಬರೆದಿದ್ದರು.

ರೋನಾಲ್ಡ್ ರಾಸ್ ಮತ್ತು ಇತರ ಕೆಲವು ನಿಷ್ಪಕ್ಷಪಾತ ಮನೋಭಾವದ ವಿಜ್ಞಾನಿಗಳು ಪ್ರತಿಗಾಮಿ ಕೂಟದವರು ತಮ್ಮದೇ ಆದ ನಿಲುವನ್ನು ಮುಂದುವರಿಸಿಕೊಂಡು ಹೋಗಲು ಬಿಡಲಿಲ್ಲ. ಕುಪಿತನಾದ ರಾಸ್ ಅವರು **ದ ಟೈಮ್ಸ್** ಪತ್ರಿಕೆಗೆ ಇನ್ನೂ ಮೂರು ಪತ್ರಗಳನ್ನು ಬರೆದರು; ಅವುಗಳಲ್ಲಿ ''ಭಾರತದಲ್ಲೀಗ ಪ್ರತಿ ವಾರವೂ ಪ್ಲೇಗ್ ರೋಗದಿಂದ ಇಪ್ಪತ್ತು ಸಾವಿರ ಜನರು ಸಾಯುತ್ತಿರುವಾಗಲೂ, ಹಾಫ್‌ಕಿನ್ನರ ವ್ಯಾಕ್ಸಿನನ್ನು ಬಳಸಲು ಒಪ್ಪಿಕೊಳ್ಳದಿರುವುದೊಂದು ಆಶ್ಚರ್ಯಕರ ಸಂಗತಿಯೆಂದು ಛೇಡಿಸಿದರು; ಆದರೂ ಭಾರತವನ್ನಾಳುತ್ತಿರುವವರು ಆ ವ್ಯಾಕ್ಸಿನನ್ನು ಕಂಡು ಹಿಡಿದವರನ್ನು ಮುಂಬಯಿಗೆ ವಾಪಸು ಕರೆಸಿ ಕೊಳ್ಳುವ ಯೋಚನೆ ಮಾಡದಿರುವುದುಬೇಸರ ಉಂಟುಮಾಡುತ್ತದೆ. ಇಡೀ ಪ್ರಹಸನ ಎಲ್ಲರನ್ನೂ ಕುಪಿತಗೊಳಿಸುತ್ತಿದೆ; ನಮ್ಮನ್ನಾಳುವ ಅಧಿಕಾರ ವರ್ಗದವರು ವೈಜ್ಞಾನಿವಾಗಿ ಚಿಂತಿಸತೊಡಗುವವರೆಗೂ, ಇಡೀ ರಾಷ್ಟ್ರವೇ ವಿನಾಶದತ್ತ ಸಾಗುತ್ತದೆ'' ಎಂದು ಉದ್ರಿಕ್ತರಾಗಿ ಬರೆದಿದ್ದರು.

ಈ ಸಮಯದಲ್ಲೇ ಹಾಫ್‌ಕಿನ್ನರ ಜೀವನ ಗಾಥೆಯ ಬಗೆಗೆ ಬೆಳಕು ಚೆಲ್ಲುವಂಥ ಹಲವು ಅಂಶಗಳನ್ನು ರೋನಾಲ್ಡ್ ರಾಸ್ ಅವರೇ ಹೊರಗೆಡಹಿದ್ದು ಗಮನಾರ್ಹ.

''ಹಾಫ್‌ಕಿನ್ನರು ಪ್ಲೇಗ್‌ನ ಪ್ರತಿಬಂಧಕ ವಿಧಾನವನ್ನು ಕಂಡು ಹಿಡಿದಾಗ ಅದರ ಬಗೆಗೆ ಸರ್ವಸ್ವಾಮ್ಯದ (Patent)ಸನ್ನದನ್ನು ಪಡೆದುಕೊಳ್ಳುವ ಹಕ್ಕುಳ್ಳವರಾಗಿದ್ದರೂ ಅದನ್ನು ಪಡೆದುಕೊಳ್ಳಲು ನಿರಾಕರಿಸಿದರು; ಸಾರ್ವಜನಿಕಗಾಗುವ ಪ್ರಯೋಜನವನ್ನು ಗಮನದಲ್ಲಿರಿಸಿಕೊಂಡು ಸ್ವಾಮ್ಯದ ಹಕ್ಕನ್ನು ಭಾರತ ಸರ್ಕಾರಕ್ಕೇ ಬಿಟ್ಟುಕೊಟ್ಟರು. ಅಂದಿನಿಂದ ಸರ್ಕಾರದವರು ಈ ತನಕ 60-70 ಲಕ್ಷ ಡೋಸ್ ವ್ಯಾಕ್ಸಿನನ್ನು ಬಿಡುಗಡೆ ಮಾಡಿರಬಹುದು, ಹಾಗೂ ಈಗಲೂ ಬಿಡುಗಡೆ ಮಾಡುತ್ತಲೇ ಇದ್ದಾರೆ. ಅದರ ಸಲುವಾಗಿ ''ರಾಯಧನ''ವನ್ನು ಡೋಸ್ ಒಂದಕ್ಕೆ ಒಂದೇ ಷಿಲ್ಲಿಂಗ್ ನಂತೆ ಲೆಕ್ಕ ಹಾಕಿದರೆ

ಹಾಫ್‌ಕಿನ್ನರಿಗೆ ದೊರೆಯುವ ಹಣಕಾಸಿನ ಮೊತ್ತದ ಅಂದಾಜು ಎಷ್ಟೆಂಬುದು ಹಾಗೂ ಅದನ್ನು ನಿರಾಕರಿಸಿದ್ದರಿಂದ ಅವರು ರಾಷ್ಟ್ರಕ್ಕೆ ನೀಡಿದ ದಾನದ ಬೆಲೆ ಅರ್ಥವಾಗಬಹುದು''

ರಾಸ್ ಅವರು ಮುಂದುವರಿದು ಹಾಫ್‌ಕಿನ್ನರು ಜನ ಸಮುದಾಯಕ್ಕೆ ನೀಡಿದ ಉದಾರ ದಾನದಿಂದ ದೊರೆತ ಉಪಕಾರವನ್ನು ಮರೆತು ಮಾಲ್ಕೋವಲ್ ಪ್ರಕರಣದ ನಂತರ ಅವರ ವೇತನವನ್ನು ಅರ್ಧಕ್ಕಿಳಿಸಿದರು; ಮತ್ತು ಅಂತಿಮವಾಗಿ ಅದನ್ನು ಮುಂದಿನ ವರ್ಷ ಸಂಪೂರ್ಣವಾಗಿ ಸ್ಥಗಿತಗೊಳಿಸಿಬಿಟ್ಟರು. ಈಗಲಾದರೂ ಸರ್ಕಾರದವರು ''ತಾವು ಎಸಗಿದ ದೊಡ್ಡ ತಪ್ಪನ್ನು ಸರಿಪಡಿಸಿಕೊಂಡು ಹೋಗಬೇಕು; ಇಲ್ಲವೇ ಹಾಫ್‌ಕಿನ್ನರ ವ್ಯಾಕ್ಸೀನನ್ನು ಈ ತನಕ ಬಳಸಿಕೊಂಡಿದ್ದಕ್ಕೆ ನ್ಯಾಯುತವಾದ ರಾಯಧನ ಕೊಡುವ ಏರ್ಪಾಡು ಮಾಡುವುದಲ್ಲದೆ, ಮುಂದೆ ಅದನ್ನು ಬಳಸಿಕೊಂಡಾಗಲೆಲ್ಲಾ ರಾಯಧನದ ಸಲುವಳಿಯನ್ನು ಮುಂದುವರಿಸುತ್ತಲೇ ಇರಬೇಕು'' ಎಂಬ ವಾದವನ್ನು ಮುಂದೊಡ್ಡಿದ್ದರು.

ಹಾಫ್‌ಕಿನ್ನರ ಸ್ವಭಾವ ಬಲ್ಲವರಿಗೆ ಈ ಎರಡನೆಯ ಆಯ್ಕೆಯನ್ನೆಂದೂ ಅವರು ಯೋಚನೆ ಮಾಡಿದವರೇ ಅಲ್ಲ. ತಮಗೆ ಬರಬಹುದಾದ ಆರ್ಥಿಕ ಲಾಭದ ಯೋಚನೆಗಿಂತಲೂ ಲಂಡನನ್ನಿನಲ್ಲಿದ್ದಾಗಲೂ ಭಾರತದಲ್ಲಿ ಪ್ರತಿದಿನ ಪ್ಲೇಗಿನಂದ ಸಾವಿಗೊಳಗಾಗುತ್ತಿರುವವರ ಚಿಂತೆಯೇ ಅವರನ್ನು ಬಾಧಿಸುತ್ತಿತ್ತಂತೆ. ಈ ಸಮಯದಲ್ಲಿ ಅವರಿಗೆ ಮತ್ತು ಅವರು ತಯಾರಿಸಿದ ವ್ಯಾಕ್ಸೀನಿನ ಉಂಟಾಗಿರಬಹುದಾದ ತಪ್ಪುಗ್ರಹಿಕೆಗಳನ್ನು ಹೋಗಲಾಡಿಸಲು ಅವರೇ ಲೇಖನಿಯನ್ನು ಹಿಡಿಯಬೇಕಾಯಿತು; ಆಗ ಅವರು **ದ ಟೈಮ್ಸ್** ಪತ್ರಿಕೆಗೆ ಬರೆಯತ್ತಿದ್ದ ಲೇಖನಗಳಲ್ಲಿ ತಮಗುಂಟಾಗಿರಬಹುದಾದ ಯಾವುದೇ ವ್ಯಥೆ ಅಥವಾ ಅನಿಶ್ಚಿತ ಭವಿಷ್ಯದ ಬಗೆಗೆ ಪ್ರಸ್ತಾಪ ಮಾಡದೇ ವ್ಯಾಕ್ಸೀನಿನ ಹಿಂದೆ ಅಡಗಿದ್ದ ವೈಜ್ಞಾನಿಕ ಸಿದ್ಧಾಂತಗಳು, ತಯಾರಿಸಿದ ರೀತಿ ನೀತಿ, ಅದರ ಬಳಕೆಯಿಂದ ಉಂಟಾದ ಗುಣಾವಗುಣಗಳು,ಪ್ರತಿಫಲಗಳ ಬಗೆಗೆ ಮಾತ್ರ ವಿವರವಾಗಿ ಬರೆಯುತ್ತಿದ್ದರು.

ಜೂನ್ 1907ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಮಾಲ್ಕೋವಾಲ್ ದುರಂತದ ಬಗೆಗೆ ಬೃಹದ್ಗಾತ್ರದ ವರದಿಯೊಂದನ್ನು ಪ್ರಕಟಿಸಿತು. ಖ್ಯಾತ ವಿಜ್ಞಾನಿಗಳ ತಂಡವೊಂದು ಆ ಬಗೆಗೆ ಲಭ್ಯವಿದ್ದ ದಾಖಲೆಗಳನ್ನೆಲ್ಲಾ ಪರಾಮರ್ಶಿಸಿತು, ಹಿಂದೆ ಹಲವರು ಜರುಗಿಸಿದ್ದ ವಿಚಾರಣಾ ವರಣೆಗಳನ್ನೂ ಪರಿಶೀಲಿಸಿದರು. ವ್ಯಾಕ್ಸೀನೇಷನ್ ದೃಢೀಕರಣ ಪತ್ರಗಳನ್ನೂ ನೋಡಿತು. ಹಾಗೆ ಅವರಿಗೆ ಒದಗಿದ ಸಾಕ್ಷ್ಯಾಧಾರಗಳಿಂದ ಹಾಫ್‌ಕಿನ್ನರ ವಿರುದ್ಧ ಯಾವುದೇ ಕ್ರಮಗಳನ್ನು ಜರುಗಿಸಲು ಸಾಧ್ಯವಿಲ್ಲವೆಂಬುದು ಅವರ ತೀರ್ಮಾನವಾಯಿತು. ಅದೇ ಪಾರ್ಲಿಮೆಂಟಿನ ತೀರ್ಮಾನವೂ ಆಯಿತು.

ಅದೇ ಸಮಯದಲ್ಲಿ ಹಲವು ಜನ ಪ್ರಮುಖ ವೈದ್ಯರು, ವಿಜ್ಞಾನಿಗಳೆಲ್ಲಾ ಸೇರಿ ಸಹಿ ಮಾಡಿದ್ದ ಪತ್ರವೊಂದು **ದ ಟೈಮ್ಸ್** ಪತ್ರಿಕೆಯಲ್ಲಿ ಪ್ರಕಟವಾಯಿತು. ಅವರೆಲ್ಲರೂ ''ಹಾಫ್‌ಕಿನರಿಗೆ ಈ ಪ್ರಕರಣದಲ್ಲಿ ಉಂಟಾದ ಅನ್ಯಾಯವನ್ನು ಹೋಗಲಾಡಿಸುವುದರಲ್ಲಿ

ತೆಗೆದುಕೊಳ್ಳುವ ಎಲ್ಲಾ ಕ್ರಮಗಳಿಗೆ ನಮ್ಮ ಸಮ್ಮತಿ ಇದೆ. ಆದುದರಿಂದ ಭಾರತ ಸರ್ಕಾರವು ಅವರನ್ನು ದೋಷಾರೋಪಣೆ ಮುಕ್ತಗೊಳಿಸಿ ಬಹಿರಂಗ ಹೇಳಿಕೆ ನೀಡಬೇಕೆಂದು ಒತ್ತಾಯಿಸುತ್ತೇವೆ ಎಂದು ಬರೆದಿದ್ದರು. ಆ ಪತ್ರಕ್ಕೆ ಸಹಿ ಮಾಡಿದವರಲ್ಲಿ ಸರ್ವ ಶ್ರೇಷ್ಠ ವ್ಯಕ್ತಿಗಳಿದ್ದರು; ಪ್ರೊ: ರೋನಾಲ್ಡ್ ರಾಸ್, ಲಂಡನ್ನಿನ ಕಿಂಗ್ಸ್ ಕಾಲೇಜಿನಲ್ಲಿ ರೋಗ ಶಾಸ್ತ್ರ ಪ್ರಧ್ಯಾಪಕರಾಗಿದ್ದ ಪ್ರೊ: ಟೆನ್ನಾರ್ ಹ್ಯೂಲೆಟ್, ಅದೇ ಕಾಲೇಜಿನಲ್ಲಿ ರೋಗಶಾಸ್ತ್ರದ ಪ್ರೊ.ಡಬ್ಲ್ಯೂ.ಜೆ.ಸಿಂಪ್ಸನ್, ಲೀಡ್ಸ್ ವಿಶ್ವವಿದ್ಯಾನಿಲಯದ ಆರೋಗ್ಯ ಶಾಸ್ತ್ರದ ಪ್ರಾಧ್ಯಾಪಕರಾದ ಪ್ರೊ. ಆಲ್ಬರ್ಟ್ ಗ್ರ್ಯುನ್ ಬಾವಮ್; ಬರ್ಮಿಂಗ್ ಹ್ಯಾಮ್ ವಿಶ್ವವಿದ್ಯಾಲಯದ ರೋಗಶಾಸ್ತ್ರದ ಪ್ರಾಧ್ಯಾಪಕರಾದ ಆರ್.ಎಫ್.ಸಿ ಲೈಯಿತ್, ರಾಯಲ್ ಇನ್ಸಿಟಟ್ಯೂಟ್ ಆಫ್ ಪಬ್ಲಿಕ್ ಹೆಲ್ತ್ ಅಧ್ಯಕ್ಷರಾಗಿದ್ದ ವಿಲಿಯಂ ಆರ್.ಸ್ಮಿತ್, ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಜಿ.ಸಿಮ್ಸ್ ವುಡ್ ಹೆಡ್, ಮುಂದುವರಿದ ಮಿಣಿ ಜೀವಿ ಶಾಸ್ತ್ರ ಉಪನ್ಯಾಸಕ ಇ.ಕ್ಲೈನ್, ಎಡಿನ್‌ಬರೋ ವಿಶ್ವವಿದ್ಯಾಲಯದ ಸಾರ್ವಜನಿಕ ಆರೋಗ್ಯ ವಿಭಾಗದ ಪ್ರಾಧಾಯಪಕರಾದ ಸಿ.ಎಚ್.ಸ್ಟೂವರ್ಟ್ ಮತ್ತು ಅವರ ಅಮೇರಿಕನ್ ಸಹೋದ್ಯೋಗಿ, ರಾಕ್‌ಫೆಲ್ಲರ್ ಇನ್ಸಿಟಿಟ್ಯೂಟ್‌ನ ನಿರ್ದೇಶಕರಾಗಿದ್ದ ಸೈಮನ್ ಫ್ಲೆಕ್ಸ್ ನರ್ ಮುಂತಾದವರು ಆ ಹೇಳಿಕೆಗೆ ಸಹಿ ಮಾಡಿದ್ದರು.

ನ್ಯಾಯ ಚಕ್ರವು ಒಂದು ಸುತ್ತು ತಿರುಗಿ ನಿರ್ಧಾರಕ್ಕೆ ಬರಲು ಅರ್ಧವರ್ಷವೇ ಬೇಕಾಯಿತು. ಈ ನಡುವೆ ಅವರ ವಿರೋಧಿಗಳು ಪ್ಲೇಗ್ ವ್ಯಾಕ್ಸೀನಿನ ಉಪಯುಕ್ತತೆ ಬಗೆಗೆ ಹಲವು ಬಾರಿ ತಮ್ಮ ಅನುಮಾನಗಳನ್ನು ವ್ಯಕ್ತಪಡಿಸುತ್ತಲೇ ಇದ್ದರು. ಅಂತಿಮವಾಗಿ ನ್ಯಾಯವೇ ವಿಜಯಸಾಧಿಸಿತು. ಭಾರತ ಸರ್ಕಾರವು ತಾನೇ ಸೃಷ್ಟಿಸಿದ ಆಪಾದನೆಗಳಿಗೆ ವಿಜ್ಞಾನ ಲೋಕದವರ ಬೆಂಬಲ ಪಡೆಯುವಲ್ಲಿ ವಿಫಲವಾಯಿತು. ಅವರ ಮೇಲಿನ ಆಪಾದನೆ ಗಳನ್ನೆಲ್ಲಾ ಹಿಂತೆಗೆದುಕೊಂಡಿರುವುದಾಗಿ 1907ರ ಅಕ್ಟೋಬರ್ 24ರಂದು ಹಾಫ್‌ಕಿನ್ನರಿಗೆ ತಿಳಿಸಿತು. ಅವರು ಕೂಡಲೇ ಭಾರತಕ್ಕೆ ಹಿಂದಿರುಗಬೇಕೆಂದು ಕೇಳಿಕೊಂಡಿತಲ್ಲದೆ, ಅವರು ಇಷ್ಟಪಡುವ ವಿಜ್ಞಾನ ಸಂಸ್ಥೆಯ ನಿರ್ದೇಶಕರ ಹುದ್ದೆಯನ್ನು ನೀಡುವ ಭರವಸೆಯನ್ನು ಸಹಾ ಸರ್ಕಾರ ನೀಡಿತ್ತು.

ಸರ್ಕಾರದ ಈ ನಿರ್ಧಾರ ಹಾಫ್‌ಕಿನ್ನರಲ್ಲಿ ಸಮ್ಮಿಶ್ರ ಪ್ರತಿಕ್ರಿಯೆಯುಂಟುಮಾಡಿತು. ಯಾವುದೇ ಬಗೆಯ ನಿರ್ಧಾರಕ್ಕೆ ಬರುವುದು ಸ್ವಲ್ಪ ಕಷ್ಟವೇ ಆಯಿತು. ಒಂದು ಕಡೆ ಅವರ ಜೀವಮಾನದಲ್ಲೆಲ್ಲ ಶ್ರಮಿಸಿದ ಕಾರ್ಯ ಪ್ರತಿಫಲ ನೀಡಿದ ಸಂತೃಪ್ತಿಯಿತ್ತು. ಅವರು ತಯಾರು ಮಾಡಿದ ವ್ಯಾಕ್ಸೀನ್ ಪ್ರತಿದಿನ ಬಳಕೆಯಾಗಿ ಸಾವಿರಗಟ್ಟಲೆ ಜನ ಜೀವದಾನ ಪಡೆಯುತ್ತಿದ್ದು ಅವರೀಗಅದನ್ನು ಮುಂದುವರಿಸಲು ಭಾರತಕ್ಕೆ ಹೋಗಲೇಬೇಕೆಂದು ಅವರ ಅಂತರ್ಯ ಮಿಡಿಯುತ್ತಿತ್ತು. ಇನ್ನೊಂದು ಕಡೆ ಅವರ ವಿರುದ್ಧವೇ ಕಾರ್ಯವೆಸಗಿದ ನಿಷ್ಠುರ ಮನೋಭಾವದವರ ಕೈ ಕೆಳಗೆ ಮತ್ತೆ ಕೆಲಸ ಮಾಡುವುದು ಅಸಹ್ಯಕರವೆನಿಸುತ್ತಿತ್ತು. ಅವರೆಲ್ಲರ ಕೊಳಕು ರಾಜಕೀಯ ಚದುರಂಗದ ದಾಳವಾಗಿ ಮತ್ತೊಮ್ಮೆ ಹೋಗುವುದಕ್ಕೆ

ಇಷ್ಟವೂ ಇರಲಿಲ್ಲ. ಬಹುಕಾಲದಿಂದ ನೆನೆಗುದಿಗೆ ಬಿದ್ದಿದ್ದ ವಿವಾದವೊಂದರಲ್ಲಿ ಅವರು ಜಯಗೊಳಿಸಿದ್ದರಾದರೂ, ಆ ತನಕ ಅನುಭವಿಸಿದ ಯಾತನೆಗೆ ಬೆಲೆ ಕಟ್ಟಲು ಸಾಧ್ಯವೇ' ಎಂದು ಹಾಫ್‌ಕಿನ್ಸರು ಆರೋಪಗಳಿಂದ ವಿಮುಕ್ತರಾದಾಗ ಅವರ ಭಾವನೆಗಳ ಬಗೆಗೆ **ಲ್ಯಾನ್ಸೆಟ್** ಪತ್ರಿಕೆ ವ್ಯಾಖ್ಯಾನ ಬರೆದಿತ್ತು.

ಅವರ ವಿರುದ್ಧದ ಆರೋಪಗಳನ್ನು ಹಿಂತೆಗೆದುಕೊಂಡ ಸುದ್ದಿ ಪ್ರಕಟವಾಗುತ್ತಿದ್ದಂತೆಯೇ ಪ್ರಪಂಚದ ಪೂರ್ವ-ಪಶ್ಚಿಮದ ಮೂಲೆ ಮೂಲೆಗಳಿಂದ ವಿಜ್ಞಾನಿಗಳು, ರಾಜಕಾರಣಿಗಳು ಮತ್ತು ಸಾರ್ವಜನಿಕ ಮುಖಂಡರುಗಳಿಂದ ಅಭಿನಂದನೆಗಳ ಸುರಿಮಳೆಯೇ ಹರಿಯಿತು; ಭಾರತ ಮತ್ತು ರಷ್ಯಾದ ಸಾಮಾನ್ಯ ಜನರು ಸಹಾ ಈ ಸುದ್ದಿಯಿಂದ ಪುಳಕಿತರಾದರು. ಬಹುಪಾಲು ಜನರು ಅವರು ಭಾರತಕ್ಕೆ ಹಿಂದಿರುಗಿ ಹಿಂದೆ ದೀಕ್ಷೆ ಪಡೆದವರಂತೆ ಜರುಗಿಸುತ್ತಿದ್ದ ಕಾರ್ಯವನ್ನು ಪುನರಾರಂಭಿಸುತ್ತಾರೆಂದು ಹಾರೈಸಿದ್ದರು.

## ಮತ್ತೆ ಭಾರತಕ್ಕೆ

ತಮ್ಮ ಹಿತೈಷಿಗಳು, ಸ್ನೇಹಿತರು ಮತ್ತು ಪ್ರಪಂಚದಾದ್ಯಂತ ಇದ್ದ ಅಭಿಮಾನಿಗಳ ಇಷ್ಟಕ್ಕನುಸಾರ ಹಾಫ್‌ಕಿನ್ ಮತ್ತೆ ಭಾರತಕ್ಕೆ ಹಿಂದಿರುಗುವ ನಿರ್ಧಾರ ಮಾಡಿದರು. ಲಂಡನ್ನಿನಲ್ಲಿ ಭಾರತದ ಆಡಳಿತ ನಿರ್ವಹಿಸುವ ಕಾರ್ಯದರ್ಶಿಗಳಿಗೆ ಪತ್ರ ಬರೆದು ತಮ್ಮ ನಿರ್ಧಾರವನ್ನು ತಿಳಿಸಿದರು. ಆದರೆ ಈ ದಿಸೆಯಲ್ಲಿ ಇನ್ನೂ ಒಂದು ಕಿರುಕುಳ ಅವರನ್ನು ಕಾದಿತ್ತು; ಮುಂಬಯಿ ಪ್ರಯೋಗಾಲಯದ ನಿರ್ದೇಶಕರ ಹುದ್ದೆ ಅಷ್ಟರಲ್ಲೇ ಭರ್ತಿಯಾಗಿದ್ದರಿಂದ ಅವರಿಗೆ ಅಲ್ಲಿ ಸ್ಥಾನವಿರಲಿಲ್ಲ. ಆದರೂ ಆ ಬಗೆಗೆ ತಕರಾರು ಎತ್ತದೇ ಕಲ್ಕತ್ತಾದಲ್ಲಿ ಕಾರ್ಯನಿರ್ವಹಿಸಲು ಸಮ್ಮತಿಸಿದರು. ಈ ಎಲ್ಲಾ ಬೆಳವಣಿಗೆಗಳಿಂದ ಅವರಲ್ಲಿ ಒಂದು ಬಗೆಯ ಉದಾಸೀನ ಪ್ರವೃತ್ತಿ ಬೆಳೆಯಲಾರಂಭಿಸಿತ್ತು; ಭಾರತಕ್ಕೆ ಹಿಂದಿರುಗುವಾಗಲೇ ಅವರಿಗೆ ಆಶಾಭಂಗವಾಗಿ, ಭಗ್ನಹೃದಯಿಯಾಗಿದ್ದರು; ಅವರೀಗ ಒಬ್ಬಂಟಿಯಾಗಿ ಇರುವುದನ್ನು ಇಷ್ಟಪಡುವಂತಿದ್ದರು.

ಭಾರತದಲ್ಲಿ ಕಾಲ ಉರುಳಿದಂತೆಲ್ಲಾ ಯಾವುದೇ ಬದಲಾವಣೆಗಳಾಗುತ್ತಿರಲ್ಲಿವೆಂಬುದು ಯಾರಿಗಾದರೂ ಗೋಚರವಾಗುವಂತಿತ್ತು. ಕಾಲರಾ ಮತ್ತು ಪ್ಲೇಗು ಹೆಚ್ಚು ಕಡಿಮೆ ಹಿಂದಿನಂತೆಯೇ ತಮ್ಮ ಪಾಲಿನ "ಸುಂಕ"ವನ್ನು ತೆಗೆದುಕೊಳ್ಳುತ್ತಲೇ ಇದ್ದವು; ಹಾಗೆಯೇ ವಸಾಹತುಶಾಹಿಯು ಆಡಳಿತ ದೇವಶನ್ನು ಬಡತನ ಅಜ್ಞಾನ ಮತ್ತು ಬರಗಾಲಗಳತ್ತ ತಳ್ಳುತ್ತಲೇ ಇತ್ತು. ಆದರೂ ಬದಲಾವಣೆಗಳಾಗುತ್ತಿರಲ್ಲಿವೆಂದು ಹೇಳಲಾಗದು. ಪೂನದಲ್ಲಿನ **ಕೇಸರಿ** ಪತ್ರಿಕೆಯನ್ನು ಪ್ರಕಟಿಸುತ್ತಿದ್ದ ಬಾಲಗಂಗಾಧರ ತಿಲಕರು ಜೈಲಿನಲ್ಲಿ ಆರು ವರ್ಷಗಳ ಕಠಿಣ ಶಿಕ್ಷೆ ಅನುಭವಿಸುತ್ತಾ ಕಾಲ ಕಳೆಯುವಂತಾಗಿತ್ತು. ಹಿಂದಿನ ಕಾಲದಲ್ಲಾಗಿದ್ದರೆ ಅಂತಹ ಉಗ್ರಶಿಕ್ಷೆಯನ್ನೂ ಜನ ಸಹಿಸಿಕೊಂಡು ಸುಮ್ಮನಿದ್ದು

ಬಿಡುತ್ತಿದ್ದರು. ಆದರೆ ಇದೀಗ 1908ರ ಸಮಯ; ಜನರಲ್ಲಿ ಸ್ವಲ್ಪ ಮಟ್ಟಿನ ಜಾಗ್ರತೆ ಉಂಟಾಗಿತ್ತು. ತಮ್ಮ ಆರಾಧ್ಯದೈವ ಮತ್ತು ರಾಷ್ಟ್ರನಾಯಕರಾದ ತಿಲಕರನ್ನು ಜೈಲಿಗೆ ಹಾಕಿದ್ದು ಮುಂಬಯಿಯ ಕಾರ್ಮಿಕ ವರ್ಗವನ್ನು ರೊಚ್ಚಿಗೆಬ್ಬಿಸಿತು. ಭಾರತವೂ ಆಳರಸನ ದೌರ್ಜನ್ಯಗಳನ್ನು ಸಾಕಷ್ಟು ಸಹನೆಯಿಂದ ಸಹಿಸಿಕೊಂಡಿತ್ತು. ಅದೇ ಮೊದಲ ಬಾರಿಗೆ ಮುಂಬಯಿಯ ಕಾರ್ಮಿಕವರ್ಗದವರು ರಾಜಕೀಯ ಕಾರಣಕ್ಕಾಗಿ ಮುಷ್ಕರ ಹೂಡಿದ್ದರು.

ಪ್ಲೇಗ್ ಮತ್ತು ಕಾಲರಾಗಳು ಸ್ವಲ್ಪ ಕುಗ್ಗಿದ ಮಟ್ಟದಲ್ಲಿಯಾದರೂ ತಮ್ಮ ಉಪಟಳ ವನ್ನು ಮುಂದುವರಿಸಿದ್ದವು. ಹಿಂದೆ ಸಾವಿರಗಟ್ಟಲೆ ಜರುಗುತ್ತಿದ್ದ ಇನಾಕ್ಯುಲೇಷನ್ ಮೊತ್ತ ಈಗ ಲಕ್ಷಾಂತರ ಮೊತ್ತದಲ್ಲಾಗುತ್ತಿದ್ದುವ; ಸಾಂಕ್ರಾಮಿಕವು ಹರಡುವುದನ್ನು ತಡೆಯುವುದಕ್ಕೆ ಅದರಿಂದ ಕೋಟೆಯನ್ನು ನಿರ್ಮಿಸಿದಂತಾಗಿತ್ತು. ಭಾರತವೊಂದರಲ್ಲೇ 1909ರ ಸಮಯಕ್ಕೆ ಅವುಗಳ ಸಂಖ್ಯೆ ಎಂಭತ್ತು ಲಕ್ಷಕ್ಕಿಂತಲೂ ಹೆಚ್ಚಾಗಿತ್ತು. ಅದು 1940ರ ಹೊತ್ತಿಗೆ ಮುನ್ನೂರ ಐವತ್ತು ಲಕ್ಷವನ್ನು ಮೀರಿತ್ತು. ಅಮೇರಿಕಾದ ಖ್ಯಾತ ವೈದ್ಯ ಡಾ|| ಬಿಯೆಲ್ಸ್ ಅವರು ಸತಾರಾ ಸಂಸ್ಥಾನದಲ್ಲಿ ಮೊದಲ ಮಹಾಯುದ್ಧಕ್ಕಿಂತಲೂ ಹಿಂದೆ ನೋಡಿದ ದೃಶ್ಯದ ಬಗೆಗೆ ದಾಖಲು ಮಾಡಿದ್ದಾರೆ'' ಇನಾಕ್ಯುಲೇಷನ್ ಕೇಂದ್ರಗಳ ಎದುರಿಗೇ ರಾಶಿ ರಾಶಿ ಜನರು ಕಾಯ್ದುನಿಂತಿದ್ದು ನಾಮುಂದು ತಾಮುಂದು ಎಂದು ನುಗ್ಗಾಡುತ್ತಿದ್ದರು. ಷರಟುಗಳು ಹರಿಯುತ್ತಿದ್ದರೂ ಲೆಕ್ಕಿಸದೆ ವೈದ್ಯರ ಹತ್ತಿರ ಹೋಗುವುದಕ್ಕೆ ತವಕಪಟ್ಟು ನುಗ್ಗುತ್ತಿದ್ದರು. ಹಿಂದೆ ಪುಸಲಾಯಿಸಿ ಕರೆತರಲು ಅವರಿಗೆ ಎರಡು ದಿನ ಕೂಲಿಯ ಮಜೂರಿ ಕೊಡಲಾಗುತ್ತಿದ್ದುದನ್ನು ಈಗ ನೆನಪಿಸಕೊಳ್ಳುವುದೂ ಅಸಾಧ್ಯ''.

ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸ್ವಾಯತ್ತತೆಯನ್ನು ಗಳಿಸಿಕೊಳ್ಳುವ ಮೊದಲ ಹೆಜ್ಜೆಯಾಗಿ ಭಾರತೀಯರಲ್ಲಿ ಈ ರೀತಿಯ ಬದಲಾವಣೆಗಳಾಗುತ್ತಿದ್ದುವೆಂಬುದು ಹಾಫ್‌ಕಿನ್ನರ ಅಭಿಪ್ರಾಯವಾಗಿತ್ತಂತೆ. ಆದರೂ ಅದೇ ಸಮಯದಲ್ಲಿ ಬರಗಾಲ, ಬಡತನ ಮತ್ತು ಅಜ್ಞಾನಗಳು ಈಗಲೂ ತಾಂಡವವಾಡುತ್ತಿದುದ್ದನ್ನು ಸಹ ಅವರು ಗಮನಿಸುತ್ತಿದ್ದರು. ಜೊತೆ ಜೊತೆಗೆ ಅವರು ನೀಡುತ್ತಿದ್ದ ರೋಗ ನಿರೋಧಕ ವ್ಯಾಕ್ಸೀನು ಶ್ರೀಮಂತರಿಗೆ ರಕ್ಷಣೆ ಸಿಕ್ಕು ಅವರು ಮತ್ತಷ್ಟು ಆನಂದಮಯ ಜೀವನ ನಡೆಸುವುದಕ್ಕೆ ಸಹಾಯ ಮಾಡಿ, ಬಡವರನ್ನು ಮತ್ತಷ್ಟು ಕಡು ಬಡತನದ ಜೀವನಕ್ಕೆ ತಳ್ಳುತ್ತಿರುವಿನೋ ಎಂಬಅಪರಾಧೀ ಮನೋಭಾವ ಅವರನ್ನು ಕಾಡತೊಡಗಿತು. ಅವರಲ್ಲಿ ಯಾವ ಭಾವನೆಗಳಿರುತ್ತಿದ್ದವೋ ಎಂಬುದನ್ನು ಹೇಳಲಾಗದಿದ್ದರೂ, ದಿನಗಳುರುಳಿದಂತೆಲ್ಲಾ ಸಂಕೋಚ ಮತ್ತು ಖಿನ್ನತೆ ಲಕ್ಷಣಗಳು ಎದ್ದುಕಾಣುತ್ತಿದ್ದವೆಂಬುದು ಅವರ ಸಮಕಾಲೀನರ ಅಭಿಪ್ರಾಯವಾಗಿತ್ತು.

ಸಾವಿರದೊಂಬೈನೂರ ಹದಿನೈದರ ಹೊತ್ತಿಗೆ ಅವರಿಗೆ 55 ವರ್ಷಗಳಾಗುತ್ತಿದ್ದು ನಿವೃತ್ತಿ ಹೊಂದುವ ಕಾಲ ಒದಗಿಬಂದಿತ್ತು. ಸರ್ಕಾರದಿಂದ ನಿವೃತ್ತಿ ಆದೇಶ ಪಡೆದು ಕೊಂಡು ಯುರೋಪಿಗೆ ಹಿಂದಿರುಗಿದರು. ಭಾರತದಲ್ಲಿ ಅವರು ಬಿಟ್ಟುಹೋಗುತ್ತಿದ್ದ ''ಆಸ್ತಿ''ಯ ಬಗೆಗೆ ಅವರಲ್ಲಿ ಹೆಮ್ಮೆಯುಂಟಾಗಿತ್ತೆಂಬುದರಲ್ಲಿ ಸಂದೇಹವಿರಲಿಲ್ಲ

''ರೋಗದ ಸಾಂಕ್ರಾಮಿಕತೆ ಅತಿ ಹೆಚ್ಚಾಗಿರುವ ಪ್ರದೇಶಗಳಲ್ಲಿ ಹಾಫ್‌ಕಿನ್ಸರ ವ್ಯಾಕ್ಸಿನನ್ನು ಬಳಸಿದರೆ ಶೇ.85ರಷ್ಟು ಸಾವಿನ ಪ್ರಮಾಣವನ್ನು ಇಳಿಸುತ್ತಿತ್ತು. ಇದರರ್ಥವನ್ನು ಭಾರತದಲ್ಲಿ ಲಕ್ಷಗಟ್ಟಲೆ ಡೋಸ್ ವ್ಯಾಕ್ಸೀನುಗಳು ಬಿಡುಗಡೆಯಾಗುತ್ತಿರುವ ಹಿನ್ನಲೆಯನ್ನು ಗ್ರಹಿಸಬಹುದು'' ಎಂದು **ಲ್ಯಾನ್ಸೆಟ್** ಪತ್ರಿಕೆ ಹಾಫ್‌ಕಿನ್ ನಿವೃತ್ತಿಯಾಗುವ ಸಮಯದಲ್ಲಿ ಬರೆದಿತ್ತು.

೧೪

# ಕೊನೆಯ ದಿನಗಳು

ಭಾರತದಲ್ಲಿ ನಿವೃತ್ತಿಯಾದನಂತರ ಹಾಫ್‌ಕಿನ್ ಯುರೋಪಿಗೆ ಹಿಂದಿರುಗಿದರು. ಜೀವಮಾನವೆಲ್ಲಾ ಮದುವೆಯಾಗದೇ ಇದ್ದ ಹಾಫ್‌ಕಿನ್ನರಿಗೆ ಒಬ್ಬಂಟಿ ಜೀವನ ಒಗ್ಗಿಹೋಗಿತ್ತು. ಈಗಲೂ ಪೇಟೆ ಪಟ್ಟಣಗಳ ಗೌಜು ಗದ್ದಲಗಳನ್ನು ಇಷ್ಟಪಡದೆ ಪ್ಯಾರಿಸ್‌ನ ಹತ್ತಿರದ ಬೊಲೋಗ್ನೆ-ಸುರ್-ಸ್ಪೇಯಿನ್ (Boulogne-sur-seine)ಎಂಬ ಪುಟ್ಟ ಊರಿನಲ್ಲಿ ನೆಲೆಯಾಗಿ ನಿಂತರು.ಈಗ ವಿಜ್ಞಾನಕ್ಕೆ ಸಂಬಂಧಿಸಿದ ಎಲ್ಲಾ ಕೆಲಸ ಕಾರ್ಯಗಳನ್ನು ತ್ಯಜಿಸಿದ್ದರೂ, ಸಮಸ್ಯೆಗಳು ಕೆಲ ಸಾರಿ ಅವರನ್ನು ಹುಡುಕಿಕೊಂಡು ಬರುತ್ತಿದ್ದವು. ಅವರು ಫ್ರಾನ್ಸಿನಲ್ಲಿ ನೆಲಸಿದ ವರ್ಷವೇ ಬ್ರಿಟಿಷ್ ಸರ್ಕಾರದವರು ಸೈನ್ಯದಲ್ಲಿರುವವರಿಗೆ ಟೈಫಾಯಿಡ್ ಮತ್ತಿತರ ಸೋಂಕು ರೋಗಿಗಳ ವಿರುದ್ಧ ಇನಾಕ್ಯುಲೇಷನ್ ಮಾಡಿಸುವ ಬಗೆಗೆ ಸಮಸ್ಯೆಯೊಂದು ಉದ್ಭವಿಸಿತು. ಮೆಡಿಟರೇನಿಯನ್ ವಲಯದಲ್ಲಿದ್ದ ಭಾರತೀಯ ಸೈನಿಕರ ತುಕಡಿಯೊಂದನ್ನು ಯುದ್ದ ರಂಗಕ್ಕೆ ಕಳುಹಿಸುವ ಮೊದಲು ಅವರಿಗೆಲ್ಲಾ ಇನಾಕ್ಯುಲೇಷನ್ ಮಾಡುವುದನ್ನು ಮಿಲಿಟರಿ ಜನರಲ್‌ಗಳು ವಿರೋಧಿಸಿದರಂತೆ. ಸರ್ಕಾರ ಆ ಬಗೆಗೆ ಹಾಫ್‌ಕಿನ್ನರ ಅಭಿಪ್ರಾಯವನ್ನು ಕೇಳಿ, ಅವರನ್ನು ನಿಷ್ಪಕ್ಷಪಾತ ಸಲಹೆಗಾರರನ್ನಾಗಿ ನೇಮಿಸಿತು. ಲಭ್ಯವಿದ್ದ ಎಲ್ಲಾ ವಿಚಾರಗಳನ್ನು ಗಣನೆಗೆ ತೆಗೆದುಕೊಂಡ ಅವರು ಮೊದಲಿಗೆ 300 ಜನ ಸೈನಿಕರಿಗೆ ಪ್ರಾಯೋಗಿಕವಾಗಿ ಇನಾಕ್ಯುಲೇಷನ್ ಮಾಡಬೇಕೆಂತಲೂ, ಅದರ ಪರಿಣಾಮವನ್ನನುಸರಿಸಿ ಉಳಿದವರಿಗೆ ಮಾಡಬಹುದೆಂದು ನೀಡಿದ ಸಲಹೆಗೆ ಎಲ್ಲರೂ ಮಣಿಯಬೇಕಾಯಿತು. ಯುರೋಪಿನ ರಣರಂಗದಲ್ಲಿದ್ದ ಬ್ರಿಟಿಷ್ ಸೈನಿಕರಿಗೆಲ್ಲಾ 1916 ಹೊತ್ತಿಗೆ ಟೈಫಾಯಿಡ್ ವಿರುದ್ಧ ವ್ಯಾಪಕವಾಗಿ ವ್ಯಾಕ್ಸಿನೇಷನ್ ಮಾಡಲು ಇದರಿಂದ ದಾರಿ ಸುಗಮವಾಯಿತು.

ಮುಂದಿನ ವರ್ಷಗಳಲ್ಲಿ ಹಾಫ್‌ಕಿನ್ ಯಾವುದೇ ಸುದ್ದಿಗಳಲ್ಲಿದೆ ತಮ್ಮ ಹಳ್ಳಿ ಜೀವನ ನಡೆಸುತ್ತಿದ್ದರು. ಕೆಲವು ಧಾರ್ಮಿಕ ಸಂಸ್ಥೆಗಳ ಕೆಲಸ ಕಾರ್ಯಗಳಲ್ಲಿ ಮಾತ್ರ ಆಗಾಗ್ಗೆ ಭಾಗವಹಿಸುತ್ತಿದ್ದರಂತೆ. ಯುರೋಪು ಈಗ ಹೆಚ್ಚು ಕಡಿಮೆ ಅವರನ್ನು ಮರೆತೇಬಿಟ್ಟತ್ತು. ಹಾಫ್‌ಕಿನ್ ಸುಮಾರು ಕಾಲು ಶತಮಾನದ ಕಾಲರಾ, ಪ್ಲೇಗುಗಳ ಸಮಸ್ಯೆಯನ್ನು ಬಗೆ ಹರಿಸಲು ಜೀವನದ ಹಂಗು ತೊರೆದು ಸೆಣಸಿದ ಐತಿಹಾಸಿಕ ಆಂದೋಲನ ಈಗ 1920ರ ಹೊತ್ತಿಗೆ ಅಷ್ಟೇನೂ ಪ್ರಮುಖ ಘಟನೆಯಂತೆ ಪರಿಗಣನೆಗೆ ಬರುತ್ತಿರಲಿಲ್ಲ. ಆದರೆ

ಭಾರತದಲ್ಲಿ ಅವರು ಎಂದೆಂದಿಗೂ ಪ್ರಾತಃ ಸ್ಮರಣೀಯ ವ್ಯಕ್ತಿಯಾಗಿಯೇ ಉಳಿದು ಕೊಂಡಿದ್ದರು. ಕೋಟ್ಯಾಂತರ ಜನರನ್ನು ಸಾವಿನ ದವಡೆಯಿಂದ ಹೊರಗೆಳೆದು ರಕ್ಷಿಸಿದ ಆರಾಧ್ಯ ದೈವವನ್ನು ಮರೆಯುವುದಾದರೂ ಎಂತು? ಮುಂಬಯಿಯಯಲ್ಲಿ ಅವರು ಕಾರ್ಯವೆಸಗುತ್ತಿದ್ದ ಪ್ಲೇಗ್ ಪ್ರಯೋಗಾಲಯವನ್ನು ''ಹಾಫ್‌ಕಿನ್ ಇನ್ಸಿಟಿಟ್ಯೂಟ್'' ಎಂದು 1925ರಲ್ಲಿ ನಾಮಕರಣ ಮಾಡಲಾಯಿತು. ಅದರಿಂದ ಭಾರತೀಯರಿಗೆ ಅಮೂಲ್ಯವಾದ ಸೇವೆ ಸಲ್ಲಿಸಿದವರೊಬ್ಬರ ಹೆಸರು ಅಜರಾಮರವಾಗಿ ಉಳಿದುಕೊಳ್ಳು ವಂತಾಯಿತು. ಸಮಾರಂಭಕ್ಕೆ ಹಾಫ್‌ಕಿನ್ ತಮ್ಮ ಶುಭಾಶಯವನ್ನು ಕಳುಹಿಸಿ ಭಾರತದಲ್ಲಿ ಅವರು ಕಳೆದ ದಿನಗಳನ್ನು ಸ್ಮರಿಸಿಕೊಂಡಿದ್ದರಂತೆ.

ಹಾಫ್‌ಕಿನ್ನರಿಗೆ 65 ವರ್ಷಗಳಾಗುವ ಹೊತ್ತಿಗೆ 1925ರಲ್ಲಿ ಭಾರತ ಮತ್ತು ತಾಯ್ನಾಡಾದ ರಷ್ಯಾಗಳಿಗೆ ಭೇಟಿಕೊಡಬೇಕೆಂಬ ಮನಸ್ಸಾಯಿತಂತೆ. ಕಾರಣಾಂತರ ಗಳಿಂದ ಭಾರತಕ್ಕೆ ಪ್ರಯಾಣ ಮಾಡಲು ಆಗದಿದ್ದರೂ ರಷ್ಯಾಕ್ಕೆ 1927ರಲ್ಲಿ ಹೋಗಲು ಸಾಧ್ಯವಾಯಿತು. ಅವರಿಗೆ ಹಿಂದೆ ಒಡೆಸ್ಸಾದಲ್ಲಿ ನಿಕಟವರ್ತಿಗಳಾಗಿದ್ದ ಡಾ॥ ಬರ್ದಾಕ್‌ರ ಮನೆಯಲ್ಲೇ ಕೆಲ ಕಾಲ ತಂಗಿದ್ದರು. ಅಷ್ಟರಲ್ಲೇ ರಷ್ಯಾದಲ್ಲಿ ಮಹಾಕ್ರಾಂತಿ ಸಫಲವಾಗಿದ್ದು ಕಮ್ಯುನಿಷ್ಟರ ಸೋವಿಟ್ ಗಣರಾಜ್ಯ ಅಸ್ತಿತ್ವಕ್ಕೆ ಬಂದಿತ್ತು. ರಷ್ಯಾದಲ್ಲಿನ ಝಾರ್ ಸರ್ವಾಧಿಕಾರತ್ವವನ್ನು ಕೊನೆಗೊಳಿಸಲು ಸ್ವತಃ ಹಾಫ್‌ಕಿನ್ನರೇ ಕ್ರಾಂತಿಕಾರಿಯಾಗಿ ಕಾರ್ಯ ನಿರ್ವಹಿಸಿ, ಪಡಬಾರದ ಕಷ್ಟನಷ್ಟಗಳನ್ನುಭವಿಸಿದ್ದರು. ಪ್ರಸ್ತುತ ಅಲ್ಲಾದ ಬದಲಾವಣೆಗಳನ್ನೇ ಅರಿತುಕೊಳ್ಳಲು ಉತ್ಸುಕರಾಗಿದ್ದರಲ್ಲಿ ಆಶ್ಚರ್ಯವೇನಿಲ್ಲ. ಡಾ॥ ಬರ್ದಾಕ್‌ರ 16 ವರ್ಷದ ಮಗನ ಜೊತೆ ಒಡೆಸ್ಸಾದ ಬೀದಿಬೀದಿಗಳಲ್ಲಿ ಓಡಾಡಿದರು. ಕಮ್ಯುನಿಸ್ಟ್ ಸರ್ಕಾದವರು ಜರುಗಿಸುತ್ತಿದ್ದ ಹಲವಾರು ಜನೋಪಯೋಗಿ ಕಾರ್ಯಗಳು ಅವರನ್ನು ಮುದ ಗೊಳಿಸಿದವು. ಅವರು ಹಿಂದೆ ಅಲ್ಲಿದ್ದಾಗ ಯೆಹೂದ್ಯ ಜನಾಂಗದವರನ್ನು ಹೀನಾಯವಾಗಿ ಕಂಡು, ಕಷ್ಟ ಕೋಟಲೆಗಳಲ್ಲಿ ಸಿಲುಕಿಸುತ್ತಿದ್ದರು. ಈಗ ಕಾಲ ಬದಲಾಗಿ ಯಹೂದ್ಯರ ಕ್ಷೇಮಾಭಿವೃದ್ಧಿಯ ಬಗೆಗೆ ಜರುಗುತ್ತಿದ್ದ ಕಾರ್ಯಕ್ರಮಗಳನ್ನು ಆಸಕ್ತಿಯಿಂದ ಕೇಳಿ ತಿಳಿದುಕೊಂಡರು.

ಹಳೆಯ ಸ್ನೇಹಿತ ಡಾ॥ಬರ್ದಾಕ್ ಮತ್ತು ಅವರ ಕುಟುಂಬದವರ ಜೊತೆ ಕುಳಿತು ತಮ್ಮ ಹಿಂದಿನ ನೆನಪುಗಳನ್ನು ಸ್ಮರಿಸಿಕೊಂಡರು. ಅವರೊಡನೆ ಅತ್ಯಂತ ನಿಕಟವಾಗಿ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ರೋಮನೆನ್ ಕೋ ಸಹೋದರರಿಬ್ಬರೂ ಅಷ್ಟರಲ್ಲೇ ಗತಿಸಿ ಹೋಗಿದ್ದು ತುಂಬಾ ವ್ಯಥೆಪಡುವ ವಿಷಯವಾಗಿತ್ತು. ಡಾ॥ಬರ್ದಾಕ್‌ರ ಪತ್ನಿ ಕುತೂಹಲಭರಿತರಾಗಿ ಅವರು ಭಾರತದಲ್ಲಿ ಮೊಟ್ಟಮೊದಲು ಪ್ಲೇಗ್ ಇಂಜೆಕ್ಷನ್ ಸ್ವತಃ ಅವರ ಮೇಲೆ ಪ್ರಯೋಗಿಸಿಕೊಂಡಾಗ ಭಯ ಇರಲಿಲ್ಲವೇ ಎಂದು ವಿಚಾರಿಸಿದರು. ಅದಕ್ಕೆ ಆಕೆಯ ಪತಿ ಡಾ॥ಬರ್ದಾಕ್ 1886ರಲ್ಲಿ ಪ್ಯಾಶ್ಚರ್ ಇನ್ಸಿಟಟ್ಯೂಟ್‌ನಲ್ಲಿ ರೇಬೀಸ್ ಇಂಜಕ್ಷನ್ ತೆಗೆದುಕೊಳ್ಳುವಲ್ಲಿ ಮೊದಲಾಗಿದ್ದು ಜ್ಞಾಪಕ ಬಂದು ಅವರು ಆ ಬಗೆಗೆ ಭಯಪಡಲೇ ಇಲ್ಲವೆಂದರಂತೆ!

ಒಡೆಸ್ಸಾದಲ್ಲಿ ಸ್ವಲ್ಪ ಕಾಲ ಕಳೆದ ನಂತರ ಹಾಫ್‌ಕಿನ್ ತಮ್ಮ ಸಂಬಂಧಿಕರಿದ್ದ ಮಾಸ್ಕೋ ಮತ್ತು ಬರ್ನಾವುಲ್ ಪಟ್ಟಣಗಳಿಗೆ ಭೇಟಿ ನೀಡಿದರು. ಅಲ್ಲಿ ಆಪ್ತೇಷ್ಟರಿಂದ ಸುತ್ತುವರಿದ ಅವರೀಗ ಅತಿಥಿಯಾಗಿ ಬೇರೊಂದು ದೇಶದಲ್ಲಿರುವುದನ್ನೇ ಮರೆತಂತಾಗಿತ್ತು. ದೂರದ ಸೈಬೀರಿಯಾಕ್ಕೂ ಭೇಟಿ ನೀಡಿ ಅಲ್ಲಿದ್ದ ಹಿಂದಿನ ಪರಿಸ್ಥಿತಿಗಳಿಗೆ ಈಗ ಆದ ಬದಲಾವಣೆಗಳನ್ನು ಕಂಡು ಹರ್ಷಿತರಾದರು. ಒಟ್ಟಿನಲ್ಲಿ ನವರಷ್ಯಾ, ಬಹಳ ಕಾಲದಿಂದ ಕಾಯಿಲೆಯಿಂದ ನರಳುತ್ತಿದ್ದ ರೋಗಿಯೊಬ್ಬ ಚೇತರಿಸಿಕೊಳ್ಳುತ್ತಿರುವಂತೆ ಕಾಣಿಸಿತಂತೆ.

ವಯಸ್ಸಾಗುತ್ತಾ ಬಂದಿದ್ದ ಹಾಫ್‌ಕಿನ್ನರೀಗ ಅರ್ಥವಾದ ಇನ್ನೊಂದು ಸಂಗತಿಯೂ ಇತ್ತು; ತಾಯಿನಾಡನ್ನು ತ್ಯಜಿಸಿ ಹೊರದೇಶಗಳಿಗೆ ಹೋಗಿ ಬಹಳ ವರ್ಷಗಳೇ ಸಂದು ಹೋಗಿದ್ದವು. ತಮ್ಮ ಸ್ವಂತ ನಾಡಿನ ಬಗೆಗೆ ಅವರ ಅಪಾರ ಗೌರವ ಮತ್ತು ಪ್ರೀತ್ಯಾಧರಗಳಿದ್ದವಾದರೂ, ಅಲ್ಲಿ ಅವರೀಗ ತೀರಾ ಹೊಸಬರಾಗಿ ಬಿಟ್ಟಿದ್ದರು. ಬಹುಶಃ ಅವರ ಪರಿಚಯದ ಸ್ನೇಹಿತರು, ಬಂಧುಗಳಲ್ಲಿ ಬಹುಪಾಲು ಜನರು ಆಗಲೇ ಗತಿಸಿಹೋಗಿದ್ದರು. ಹುಟ್ಟಿಬೆಳೆದ ದೇಶವಾದ ರಷ್ಯದಲ್ಲೇ ಇನ್ನುಳಿದ ಕಾಲವನ್ನು ಕಳೆಯಲು ನಿರ್ಧರಿಸಿದರೂ, ಯುರೋಪಿನಲ್ಲಿದ್ದಂತೆಯೇ ಇಲ್ಲಿಯೂ ಒಬ್ಬಂಟಿಯಾಗುವ ಸಾಧ್ಯತೆಗಳೇ ಇದ್ದವು. ಅಲ್ಲದೆ ಈಗ ಬದಲಾಗಿದ್ದ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸನ್ನಿವೇಶಗಳಿಗೂ ಹೊಂದಿಕೊಳ್ಳುವುದು ಕಷ್ಟಕರ ಆಗುತ್ತಿತ್ತು. ಒಂದು ರೀತಿಯ ನಿರಾಶಾಭಾವದಿಂದಲೇ ಮತ್ತೆ ಫ್ರಾನ್ಸಿನ ತಮ್ಮ ಪುಟ್ಟ ಊರಿಗೆ ಹಿಂತಿರುಗಿದರು. ಅವರ ಅಂತ್ಯದ ಕೆಲವು ವರ್ಷಗಳು ಮನೆಯಿಂದ ಹೊರಬರುವುದೇ ಅಪರೂಪವಾಗಿತ್ತಂತೆ; ಬಹುಶಃ ಅವರ ಜೀವಿತ ಕಾಲದ ನೆನಪುಗಳ ಸರಮಾಲೆಗಳ ಸ್ಮರಣೆಯಲ್ಲೇ ಕಾಲ ಕಳೆಯುತ್ತಿದ್ದರೆನಿಸುತ್ತದೆ.

ವ್ಲಾದಿಮಿರ್ ಹಾಫ್‌ಕಿನ್ ತಮ್ಮ 71ನೇ ವಯಸ್ಸಿನಲ್ಲಿ ಲಸಾನೆ ಪಟ್ಟಣದ ಹೋಟೆಲಿನ ಕೊಠಡಿಯೊಂದರಲ್ಲಿ (ಅಕ್ಟೋಬರ್ 26, 1930) ಕೊನೆಯುಸಿರೆಳೆದರೆಂದು ರಾಯಿಟರ್ ಸುದ್ದಿಸಂಸ್ಥೆ ವರದಿ ಮಾಡಿತು. ಪ್ರಪಂಚ ಪರ್ಯಟನೆಯ ಸಮಯದಲ್ಲಿ ಅವರು ಸಾಮಾನ್ಯವಾಗಿ ತಂಗಲು ಆರಿಸಿಕೊಳ್ಳುತ್ತಿದ್ದುದು ಅದೇ ಹೋಟೆಲ್ ಆಗಿತ್ತು.

ಮರುದಿನ ಪ್ರಪಂಚಾದ್ಯಂತ ವೈದ್ಯಕೀಯ ಪತ್ರಿಕೆಗಳು ಅವರ ಬಗೆಗೆ ಅತೀವ ಸಂತಾಪ ವ್ಯಕ್ತಪಡಿಸಿ ಮೃತ್ಯುಲೇಖನಗಳನ್ನು ಪ್ರಕಟಿಸಿದವು. ಅವರ ಸ್ನೇಹಿತರು, ನಿಕಟವರ್ತಿಗಳೇ ಅಲ್ಲದೆ, ಅವರ ವಿರೋಧಿಗಳೂ ಸಹಾ ಅವರ ವ್ಯಕ್ತಿತ್ವ, ಸಾಧನೆಗಳನ್ನು ಸ್ಮರಿಸಿ ಗುಣಗಾನ ಮಾಡಿದರು. ಭಾರತದ ಸ್ನೇಹಿತ ಮತ್ತು ರಕ್ಷಕರಾಗಿದ್ದ ಅವರಿಗೆ ಡೆಲ್ಲಿ, ಕಲ್ಕತ್ತಾ ಹಾಗೂ ಮುಂಬಯಿಯ ಪತ್ರಿಕೆಗಳು ಅತೀವ ಸಂತಾಪ ವ್ಯಕ್ತಪಡಿಸಿದವು. ಅಕ್ಟೋಬರ್ 27ರಂದು ಮುಂಬಯಿಯಲ್ಲಿ ಸಾರ್ವಜನಿಕ ಶೋಕಾಚರಣೆ ನಡೆಯಿತು. ಭಾರತದಲ್ಲಿ ಹಾಫ್‌ಕಿನ್ನರ ಜೀವಂತ ಸ್ಮಾರಕವಾಗಿ ಮುಂಬಯಿಯ ಹಾಫ್‌ಕಿನ್ ಇನ್‌ಸ್ಟಿಟ್ಯೂಟ್ ರಾರಾಜಿಸುತ್ತಿದೆ ಅಂದಿನಿಂದ ಇಂದಿನವರೆಗೂ. 1994ರಲ್ಲಿ ಸೂರತ್‌ನಲ್ಲಿ

ಪ್ಲೇಗ್ ಕಾಣಿಸಿಕೊಂಡಾಗಲೂ ಸಹ ನಿರೋಧಕ ವ್ಯಾಕ್ಸೀನು ತಯಾರಿಸಿ ಸದಾ ಭಾರತೀಯರ ರಕ್ಷಣೆಗಾಗಿ ಪಣತೊಟ್ಟು ನಿಂತುಕೊಂಡಿದೆ. ಅದರ ಅರವತ್ತನೇ ವರ್ಷಾಚರಣೆ 1959ರಲ್ಲಿ ಜರುಗಿತು. ಅದೀಗ ಇಡೀ ಆಗ್ನೇಯಾ ಏಷ್ಯಾ ವಲಯದಲ್ಲೆಲ್ಲಾ ಅತ್ಯುತ್ತಮ ಸಂಶೋಧನಾಲಯವೆಂಬ ಹೆಸರುಗಳಿಸಿಕೊಂಡಿದೆ. ಅದರಲ್ಲಿ ಒಂದು ನೂರು ಸಂಶೋಧಕರು, 250 ಜನ ಜನತಾಂತ್ರಿಕ ಸಹಾಯಕರು ಕಾರ್ಯ ನಿರ್ವಹಿಸುತ್ತಿದ್ದು ಹನ್ನೊಂದು ಬೇರೆ ಬೇರೆ ವಿಭಾಗಗಳಿವೆ. ಅಲ್ಲಿ ಪ್ಲೇಗ್, ಕಾಲರಾ, ಟೈಫಾಯಿಡ್, ರೇಬೀಸ್, ವ್ಯಾಕ್ಸೀನುಗಳು ತಯಾರಾಗುತ್ತಿವೆ. ಇಲ್ಲಿ ತಯಾರಾದ ವ್ಯಾಕೀನ್ಸುಗಳು ಭಾರತಾದ್ಯಂತವಲ್ಲದೆ, ಹೊರದೇಶಗಳಲ್ಲಿ ಬಳಕೆಯಾಗುತ್ತಿವೆ. ಮುಂದೆ 1974ರಲ್ಲಿ ಹಾಫ್‌ಕಿನ್ ಇನ್ಸಿಟಿಟ್ಯೂಟ್ ಪ್ಲಾಟಿನಂ ಜೂಬಿಲಿಯನ್ನೂ ಆಚರಿಸಿ, ಇದೀಗ 1999ರಲ್ಲಿ ಶತಮಾನೋತ್ಸವ ಆಚರಿಸಿತು.

ರಾಷ್ಟ್ರಪಿತ ಮಹಾತ್ಮಾಗಾಂಧಿಯವರು 1935ರಲ್ಲಿ ಹಾಫ್‌ಕಿನ್ ಇನ್ಸಿಟಿಟ್ಯೂಟ್‌ಗೆ ಭೇಟಿ ಇತ್ತ ಕ್ಷಣವನ್ನು ಇಲ್ಲಿ ಸ್ಮರಿಸುವುದು ಸರಿಯೆನಿಸುತ್ತದೆ. ಆ ಸಮಯದಲ್ಲಿ ಪ್ಲೇಗ್ ಮಹಾಮಾರಿ ಗುಜರಾತ್ ಪ್ರಾಂತ್ಯದಲ್ಲಿ ಹರಡಿ ಅಪಾರ ಹಾನಿಯುಂಟುಮಾಡುತ್ತಿತ್ತು. ಗಾಂಧೀಜಿಯವರು ತಮ್ಮ ರಾಜಕೀಯ ಮತ್ತು ಸಾಮಾಜಿಕ ಕಾರ್ಯಕಲಾಪಗಳ ನಡುವೆಯೂ ಬಿಡುವು ಮಾಡಿಕೊಂಡು ಪ್ಲೇಗ್‌ನ್ನು ನಿಯಂತ್ರಿಸುವ ಕಾರ್ಯದಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದರು. ಕಟ್ಟಾ ಅಹಿಂಸಾವಾದಿಯಾಗಿದ್ದ ಅವರು ಗುಜರಾತಿನ ಜನ ಸಮೂಹಕ್ಕೆ ಪ್ಲೇಗ್ ವ್ಯಾಕ್ಸೀನೇಷನ್ ಮಾಡಿಸುವ ಬಗೆಗೆ ಆಸಕ್ತರಾದರು. ಆದರೆ ಪ್ರಯೋಗಾಲಯದಲ್ಲಿ ಪ್ರಾಣಿಗಳನ್ನು ಬಳಸಿಕೊಂಡು ವ್ಯಾಕ್ಸೀನ್ ತಯಾರಿಸುವ ವಿಧಾನ ಅಷ್ಟಾಗಿ ಸರಿಯೆನಿಸಿರಲಿಲ್ಲ. ಆದರೂ ತಾವೇ ಸ್ವತಃ ಹಾಫ್‌ಕಿನ್ ಇನ್ಸಿಟಿಟ್ಯೂಟ್‌ಗೆ ಭೇಟಿ ನೀಡಿ ಅಲ್ಲಿ ಜರುಗುವ ಪ್ರಯೋಗ ಪರೀಕ್ಷೆಗಳನ್ನು ವೀಕ್ಷಿಸುವ ಅಭಿಲಾಷೆ ವ್ಯಕ್ತಪಡಿಸಿದರಂತೆ. ಅವರ ಅನುಯಾಯಿಗಳಲ್ಲಿ ಕೆಲವರು ಎರಡು ದಿನ ಮೊದಲೇ ಇನ್ಸಿಟಿಟ್ಯೂಟ್‌ಗೆ ಭೇಟಿ ನೀಡಿ ಅದರ ನಿರ್ದೇಶಕರಾಗಿದ್ದ ಮೇಜರ್ ಜನರಲ್ ಸಾಹೇಬ್‌ಸಿಂಗ್ ಶೋಖೇ (Sabib Singh Sokhey) ಯವರೊಡನೆ ಮಹಾತ್ಮರ ಭೇಟಿಯ ಬಗೆಗೆ ಚರ್ಚಿಸಿದರು. ಗಾಂಧೀಜಿಯವರಿಗೆ ಬಹುಶಃ ಹಿಡಿಸಲಾಗದ ಪ್ರಾಣಿ ಪ್ರಯೋಗಗಳ ಬಗೆಗೆ ತಿಳಿಸಿ, ಆ ಬಗೆಗೆ ಮಾಹಿತಿ ನೀಡುವ ದಿಸೆಯಲ್ಲಿ ಎಚ್ಚರವಹಿಸಬೇಕೆಂದು ಸೂಕ್ಷ್ಮವಾಗಿ ತಿಳಿಸಿದ್ದರಂತೆ.

ಗೊತ್ತಾದ ದಿನ ಮಹಾತ್ಮಾಗಾಂಧಿಯವರು ಇನ್ಸಿಟಿಟ್ಯೂಟ್‌ಗೆ ಬಂದರು. ನಿರ್ದೇಶಕರು ಅವರನ್ನು ಅತ್ಯಾದರದಿಂದ ಬರಮಾಡಿಕೊಂಡು ಅವರನ್ನು ಪ್ರಯೋಗಾಲಯಕ್ಕೆ ಕರೆದುಕೊಂಡು ಹೋದರು. ಅಲ್ಲಿ ಹಲವು ಚಿತ್ರಪಟಗಳ ಸಹಾಯದಿಂದ ವ್ಯಾಕ್ಸಿನೇಷನ್ ಸಿದ್ಧಾಂತದ ಹಿಂದೆ ಅಡಗಿರುವ ತತ್ವಗಳನ್ನು ವಿವರಿಸಿ, ಇನಾಕ್ಯುಲೇಷನ್ ಲಸಿಕೆಗಳನ್ನು ತಯಾರಿಸುವ ವಿಧಾನವನ್ನು ತೋರಿಸಿದರು. ಅಲ್ಲಿ ಸಾಕುತ್ತಿದ್ದ ಸಾವಿರಾರು ಗಿನಿ ಇಲಿಗಳು ಮೊಲಗಳನ್ನೂ ಸಹಾ ಅವರು ನೋಡಿದರು. ಅವರಿಗೆ ವಿಷಯದ ಬಗೆಗೆ

ಒಪ್ಪಿಗೆಯಾಯಿತೋ ಇಲ್ಲವೋ ತಕ್ಷಣ ತಿಳಿಯಲಿಲ್ಲ. ನಿರ್ದೇಶಕರ ಕಛೇರಿಯಿಂದ ಹೊರಟು ತಮ್ಮ ಕಾರಿನತ್ತ ನಡೆದರು. ತಕ್ಷಣ ಮನಸ್ಸು ಬದಲಾಯಿಸಿ, ಮತ್ತೆ ನಿರ್ದೇಶಕರೊಡನೆಯೇ ಅವರ ಕಚೇರಿಗೆ ಬಂದು ಕುಳಿತು ಕೊಂಡರು. ನಿರ್ದೇಶಕರು ಆ ತನಕ ಹೇಳಿದ್ದು ತಮಗೆ ಸಮ್ಮತಿಯಾಗಿದೆಯೆಂತಲೂ, ಅದನ್ನು ಗುಜರಾತಿನ ಅಪಾರ ಜನಸ್ತೋಮದ ಮೇಲೆ ಬಳಸುವ ಮೊದಲು ಅದನ್ನು ತಾವೇ ಅನುಭವಿಸುವ ಮನಸ್ಸು ಮಾಡಿರುವುದಾಗಿ ಹೇಳಿದರು; ಹಾಗೂ ತಮಗೆ ಆಗಲೇ ಇನಾಕ್ಯುಲೇಷನ್ ಮಾಡುವಂತೆ ತಿಳಿಸಿದರು. ಅವರಿಗೂ ಪ್ಲೇಗ್ ನಿರೋಧಕ ಇನಾಕ್ಯುಲೇಷನ್ ಮಾಡಲಾಯಿತು. ಮುಂದಿನ 24 ಗಂಟೆಗಳೊಳಗೆ ಗುಜರಾತಿನಲ್ಲಿ ಅಪಾರ ಜನ ಸ್ತೋಮವನ್ನು ಉದ್ದೇಶಿಸಿ ಮಾತನಾಡಿದರು. ಪ್ಲೇಗ್‌ನ್ನು ನಿರ್ಮೂಲ ಮಾಡುವ ಮೊದಲ ಹಂತವಾಗಿ ಅವರೆಲ್ಲರೂ ಇನಾಕ್ಯುಲೇಷನ್ ಮಾಡಿಸಿಕೊಳ್ಳಲೇ ಬೇಕೆಂದು ಹಿತವಚನನುಡಿದರು. ಜೊತೆಗೆ ಇಲಿಗಳ ನಾಶ ಮಾಡುವ ಕಾರ್ಯವೂ ಜರುಗಬೇಕೆಂದರು. ಇದರಿಂದ ಇನಾಕ್ಯುಲೇಷನ್ ಪದ್ಧತಿಗೆ ಮತೀಯ ವಿರೋಧಕ್ಕೆ ತೆರೆ ಎಳೆದಂತಾಯಿತು. ಹಾಫ್‌ಕಿನ್ನರ ಜೀವಮಾನದ ಕೆಲಸವೂ ಸಾರ್ಥಕತೆ ಪಡೆಯಿತು.

ವೈಜ್ಞಾನಿಕ ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರ ಹೆಸರುಗಳು ಮಾನವ ಇತಿಹಾಸದ ಪುಟಗಳಲ್ಲಿ ಕಾಣಿಸಿಕೊಳ್ಳುವುದು ತೀರಾ ಅಪರೂಪ. ಅದರಲ್ಲಿ ರಾಜ-ಮಹಾರಾಜರು, ಮಂತ್ರಿ ಮಹೋದಯರು, ಮಿಲಿಟರಿ ಜನರಲ್‌ರಿಗೆ ಹೆಚ್ಚಿನ ಪ್ರಾಮುಖ್ಯತೆ ಇರುತ್ತದೆ. ಪ್ಯಾಶ್ಚರ್, ಹಾಫ್‌ಕಿನ್ನರಂತವರು ಇದಕ್ಕೆ ಹೊರತಾಗುತ್ತಾರೆಂತಲೇ ಹೇಳಬಹುದು. ಏಕೆಂದರೆ ಅವರಂತಹವರೇ ಒಂದು ರೀತಿಯ ಇತಿಹಾಸವನ್ನೇ ಸೃಷ್ಟಿಮಾಡಿರುತ್ತಾರೆ. ರಾಜಮಹಾ ರಾಜರು, ವೀರಸೇನಾನಿಗಳು ರಣರಂಗಗಳಲ್ಲಿ ಅದೆಷ್ಟೋ ಜಯಗಳಿಸಲು ಸಮರ್ಥ ರಾಗಿದ್ದರೂ ಕೆಲ ಸಾರಿ ಅವರನ್ನೇ ಬೆನ್ನಟ್ಟದ ಕಾಲರಾ ಪ್ಲೇಗುಗಳಂಥ ವ್ಯಾಧಿಗಳ ಉಪಟಳ ದಿಂದ ಹಿಂಜರಿಯುವಂತಾದುದನ್ನು ಇತಿಹಾಸ ಸಾರಿ ಸಾರಿ ಹೇಳುತ್ತಿಲ್ಲವೆ? ಅದೆಲ್ಲಕ್ಕಿಂತ ಪ್ರಪಂಚದ ಎಲ್ಲಾ ಕಡೆ ಈ ಸಾಂಕ್ರಾಮಿಕಗಳಿಂದ ಇಡೀ ಜನ ಸಮುದಾಯವೇ ನಿರ್ನಾಮವಾಗಿ ಹೋಗಬಹುದಾದ ಸಂದರ್ಭಗಳಲ್ಲಿ ಹಾಫ್‌ಕಿನ್ನರಂಥ ಧೀರೊದಾತ್ತ ವಿಜ್ಞಾನಿಗಳು ಸ್ವತಃ ತಮ್ಮ ಜೀವದ ಹಂಗು ತೊರೆದು ಸೆಣಸಾಡಿದ್ದರಿಂದಲ್ಲವೇ ನಾವೆಲ್ಲಾ ಈಗ ಬದುಕಿ ಉಳಿದಿರುವುದು? ಆದ್ದರಿಂದ ಹಾಫ್‌ಕಿನ್ನರು ಮಾನವ ಇತಿಹಾಸದ ಪುಟಗಳಲ್ಲಿ ಕಾಣಿಸಿಕೊಳ್ಳುವ ಕೆಲವೇ ವಿಜ್ಞಾನಿಗಳ ಸಾಲಿನಲ್ಲಿ ಸೇರಿ ಹೋಗಿದ್ದಾರೆ. ಸ್ವತಃ ಅವರೇ ಇತಿಹಾಸ ಪುರುಷರಾದರು. ಭಾರತೀಯರಾದ ನಾವಂತೂ ನಮ್ಮ ಇರುವಿಗೇ ವ್ಲಾದಿಮಿರ್ ಹಾಫ್‌ಕಿನ್ನರಿಗೆ ಎಷ್ಟು ಋಣಿಯಾಗಿದ್ದರೂ ಸಾಲದೆನಿಸುತ್ತಿದೆ.

# ೧೫

# ಉಪಸಂಹಾರ

ಈ ತನಕ ವಿವರಿಸಿದ ವ್ಲಾದಿಮಿರ್ ಹಾಫ್‌ಕಿನ್ನರ ಜೀವನಗಾಥೆಯನ್ನು ಹಿಂದಿರುಗಿ ನೋಡಿದಾಗ, ''ಎತ್ತಣಮಾಮರ, ಎತ್ತಣ ಕೋಗಿಲೆ? ಎತ್ತಿಂದೆತ್ತಣ ಸಂಬಂಧವಯ್ಯಾ?'' ಎಂಬ ಶಿವಶರಣರ ವಚನ ಒಂದಿಲ್ಲೊಂದು ಕಾರಣದಿಂದ ನೆನಪಿಗೆ ಬರುವಂತಿದೆ. ರಷ್ಯಾದಲ್ಲಿ ಜನಿಸಿದ ಹಾಫ್‌ಕಿನ್ ಫ್ರಾನ್ಸ್‌ನಲ್ಲಿ ಸಂಶೋಧನಾ ನಿರತರಾಗಿ, ಭಾರತದಲ್ಲಿ ಕಾರ್ಯನಿರ್ವಹಿಸಿ, ಸ್ವಿಟ್ಸರ್‌ಲೇಂಡಿನಲ್ಲಿ ಪರಲೋಕ ಯಾತ್ರೆ ಗೈಯುತ್ತಾರೆ; ವಿದ್ಯಾರ್ಥಿ ದೆಸೆಯಲ್ಲಿ ಉಗ್ರ ತಮ ಕ್ರಾಂತಿಕಾರಿಯಾಗಿ, ನಿರಂಕುಶ ಪ್ರಭುತ್ವದ ವಿರುದ್ಧ ಸಿಡಿದೆದ್ದು ಕಷ್ಟಕೋಟಲೆಗಳಿಗೆ ಸಿಲುಕಿ, ಮುಂದೆ ಜೀವಮಾನವನ್ನೆಲ್ಲಾ ಸಂಶೋಧನೆಗಳಲ್ಲಿ ನಿರತರಾದ ಹಾಪ್‌ಕಿನ್ ನಿಸ್ವಾರ್ಥ ಸೇವೆ ಮತ್ತು ಮಾನವೀಯ ಮೌಲ್ಯಗಳ ಪ್ರತಿಪಾದಕರಾಗುತ್ತಾರೆ; ಕೋಟ್ಯಾಂತರ ಜನರನ್ನು ಮಾರಕ ಪಿಡುಗಗಳಿಂದ ಪಾರುಮಾಡಿ ಮಾನವಕುಲದ ಸಂರಕ್ಷ ರಾಗುತ್ತಾರೆ. ಸ್ವದೇಶದಲ್ಲಿ ಬಂದೂಕು, ಬಾಂಬುಗಳನ್ನು ಹಿಡಿದು ದೌರ್ಜನ್ಯಕಾರರನ್ನು ಸದೆಬಡಿಯಲು ಸಜ್ಜಾದವರು ವಿದೇಶವೊಂದರಲ್ಲಿ ಜೀವರಕ್ಷ ವ್ಯಾಕ್ಸೀನುಗಳ ಸಹಕಾರರಾಗಿ ಸೇವೆಯ ಸಾಕ್ಷಾತ್ಕಾರ ಪಡೆಯುತ್ತಾರೆ. ಜೀವರಕ್ಷಕಗಳಾಗಿರಬಹುದೆಂಬ, ಆದರೂ ಜೀವಕಂಟಕವೂ ಆಗಿ ಪರಿಣಮಿಸಿಬಹುದಾದ ತಾವೇ ತಯಾರಿಸಿದ ಒಂದಲ್ಲ ಎರಡು ಬಗೆಯ ವ್ಯಾಕ್ಸೀನುಗಳ ಮೊಟ್ಟಮೊದಲ ಮಾನವ ಪ್ರಯೋಗ ಪಶುವಾಗುವ ಕೆಚ್ಚೆದೆಯ ದಾರ್ಷ್ಟ್ಯ ಅವರದಾಗಿತ್ತು. ತಮ್ಮನ್ನೇ ಪಣವಾಗಿಟ್ಟುಕೊಂಡು ಇತರರನ್ನು ಸಂರಕ್ಷಿಸುವಲ್ಲಿ ಮುಂದಾದ ಕೆಲವೇ ಐತಿಹಾಸಿಕ ವಿಜ್ಞಾನಿಗಳಲ್ಲಿ ಹಾಫ್‌ಕಿನ್ನರೂ ಒಬ್ಬರು. ತ್ಯಾಗ, ನಿಸ್ವಾರ್ಥ ಸೇವೆಗಳಿಗೆ ಇನ್ನೊಂದು ಹೆಸರೇ ವ್ಲಾದಿಮಿರ್ ಹಾಫ್‌ಕಿನ್ನರೆಂದರೆ ತಪ್ಪಾಗಲಾರದು.

ಈ ಕೃತಿಯ ಆರಂಭದಲ್ಲಿ ನಮ್ಮವರೇ ಆದ ಮತ್ತೊಬ್ಬ ಮಹಾನ್ ಕ್ರಾಂತಿಕಾರಿ ಆಧ್ಯಾತ್ಮಸಾಧನೆಯ ಶಿಖರಕ್ಕೇರಿದ ಮಹರ್ಷಿ ಅರವಿಂದೋ ಅವರ ಜೀವನ ವಿಧಾನಕ್ಕೆ ಹಾಫ್‌ಕಿನ್ನರನ್ನು ಹೋಲಿಸಲಾಗಿದೆಯಷ್ಟೆ. ನೀಳಕಾಯದ, ಮಂದಸ್ಮಿತ ಮುಗ್ಧ ಬಡ ವಿದ್ಯಾರ್ಥಿಯೊಬ್ಬ ಭೂಗತ ಕ್ರಾಂತಿಕಾರಿಯಾಗಿದ್ದಾನೆಂಬುದು ವ್ಯಾಪಕ ಪತ್ತೆದಾರಿ ಜಾಲವನ್ನು ಬೀಸಿದ್ದ ಝಾರ್ ದೊರೆಯ ಅಧಿಕಾರಿಗಳಿಗಷ್ಟೇ ಚಳ್ಳೇಹಣ್ಣು ತಿನಿಸುವುದರಲ್ಲಿ ಹಾಫ್‌ಕಿನ್ ನಿಷ್ಣಾತರಾಗಿದ್ದರು. ಹಲವು ಸಲ ಬಂಧನಕ್ಕೊಳಗಾಗಿ ಬಿಡುತ್ತಿದ್ದರೂ, ಅದ್ಹೇಗೋ ನಿರ್ದೋಷಿಯೆಂಬಂತೆ ನಟಿಸಿ ಪಾರಾಗುತ್ತಿದ್ದರು. ಸ್ವದೇಶದಲ್ಲಿ

ಅಧಿಕಾರಿಶಾಹಿಯ ಕಿರುಕುಳಗಳನ್ನು ಸಹಿಸಲಾಗದೆ ದೂರದ ಫ್ರಾನ್ಸಿಗೆ ತೆರಳಬೇಕಾಗುತ್ತದೆ. ಅಲ್ಲಿಯೂ ಆಕಸ್ಮಿವೋ ಎಂಬಂತೆ ಅವರ ಅಭಿಲಾಷೆಯಂತೆ ವಿಜ್ಞಾನಿಯಾಗಿ, ಕಾಲರಾ ರೋಗದ ವಿರುದ್ಧ ಕಾರ್ಯವೆಸಗುವ ವ್ಯಾಕ್ಸೀನನ್ನು ಆವಿಷ್ಕರಿಸಿದ್ದಲ್ಲದೆ, ತಾವೇ ಸ್ವತಃ ಪ್ರಯೋಗಿಸಿಕೊಳ್ಳುವ ಧೀರೋದ್ಧಾತತೆಯನ್ನು ಪ್ರಕಟಿಸುತ್ತಾರೆ.

ಯುರೋಪಿನ ದೇಶಗಳಲ್ಲಿ ಕಾಲರಾ ವ್ಯಾಕ್ಸೀನನ್ನು ಪ್ರಯೋಗಿಸಲು ಅನುಕೂಲಗಳೊದಗದಿದ್ದಾಗ ಕಂಡು ಕೇಳರಿಯದ ದೂರದ ಭಾರತಕ್ಕೆ ಹೊರಡಲೂ ಹಿಂಜರಿಯುವುದಿಲ್ಲ. ಅಲ್ಲೂ ಹಲವಾರು ಅಡೆತಡೆಗಳಿದ್ದಾಗ್ಯೂ ಕಾಲರಾವನ್ನು ಹತೋಟಿಗೆ ತರುವಲ್ಲಿ ಯಶಸ್ವಿಯಾಗುತ್ತಾರೆ; ಅಷ್ಟರಲ್ಲೇ ಪ್ರತ್ಯಕ್ಷವಾದ ಮತ್ತೊಂದು ಪಿಡುಗಾದ ಪ್ಲೇಗನ್ನು ನಿಯಂತ್ರಿಸುಲ್ಲೂ ಅವಿರತವಾಗಿ ಶ್ರಮಿಸಿ ಜಯಶಾಲಿಯಾಗುತ್ತಾರಲ್ಲದೆ, ಅದರ ಮೊದಲ ಪ್ರಯೋಗಕ್ಕೂ ಅವರೆ ಮೈಯೊಡ್ಡುತ್ತಾರೆ; ಮುಂದೆ ಪ್ಲೇಗ್ ಮಹಾ ಮಾರಿಯೂ ಸಹ ಅವರಿಗೆ ಮಣಿಯಲೇ ಬೇಕಾಗುತ್ತದೆ. ಆದರೆ ಕೆಲವರ ದ್ವೇಷ, ಅಸೂಯೆ, ಅಜ್ಞಾನಗಳಿಗೆ ಬಲಿ ಪಶುವಾಗಿ ಕೆಲಸದಿಂದ ವಜಾ ಆಗುವಂಥ ಹೀನಾಯ ಪರಿಸ್ಥಿತಿ ಅವರಿಗೊದಗುತ್ತದೆ. ಅಂತಿಮವಾಗಿ ಸತ್ಯಕ್ಕೆ ಜಯವಾಯಿತಾದರೂ ಆ ಮಹಾನ್ ವಿಜ್ಞಾನಿ ಅನುಭವಿಸಿದ ಅಪಮಾನಕರ ಸ್ಥಿತಿಯ ಛಾಯೆ ಅವರಿಂದ ಮಾಯವಾಗಲೇ ಇಲ್ಲ.

ಸದಾ ಅಂತರ್ಮುಖಿ, ಸೌಮ್ಯ ಸ್ವಭಾವದ ಮಿತಭಾಷಿ ಯಾಗಿದ್ದ ಹಾಫ್‌ಕಿನ್ ಜೀವಮಾನವೆಲ್ಲಾ ಒಬ್ಬಂಟಿಯಾಗಿಯೇ ಕಳೆದರು. ವಿಜ್ಞಾನವೆಂಬ ವಧುವನ್ನು ಕೈಹಿಡಿದ ಅವರಿಗೆ ಮದುವೆಯಾಗಲು ಪುರುಸೊತ್ತಾದರೂ ಎಲ್ಲಿತ್ತು? ಅವರನ್ನು ವಿರೋಧಿಸಿ ಕಿರುಕುಳ ಕೊಟ್ಟು ಕೇಡು ಬಯಸಿದವರೊಡನೆ ಅವರೆಂದೂ ಅಹಿತಕರವಾಗಿ ವರ್ತಿಸಿದ ನಿದರ್ಶನಗಳಿರಲಿಲ್ಲ. ಅವರೊಬ್ಬ ಸ್ಥಿತ ಪ್ರಜ್ಞರೆಂಬುದೇ ಸರಿಯಾದ ಹೋಲಿಕೆ. ಭಾರತದ ಮುಗ್ಧ ಬಡಜನರ ಬವಣೆಗಳಿಗೆ ಕನಿಕರಪಟ್ಟು ನಿಸ್ವಾರ್ಥದಿಂದ ಕಾರ್ಯವೆಸಗಿ ಉಪಕಾರ ಮಾಡಿದ ಹಾಫ್‌ಕಿನ್ನರನ್ನು ಭಾರತೀಯರೂ ಸಹಾ ತಮ್ಮ ಆರಾಧ್ಯದೈವವೆಂದೇ ಪರಿಗಣಿಸಿದ್ದರು.

ವಿಜ್ಞಾನಿಯೊಬ್ಬ ಜೀವಿಸಿರುವಾಗಲೇ ಅವನ ಸಂಶೋಧನೆಯ ಪರಿಣಾಮಗಳು ಫಲ ಬಿಟ್ಟು ಅದನ್ನು ಅನುಭವಿಸುವ ಅವಕಾಶ ಒದಗುವುದು ತೀರಾ ಅಪರೂಪವೇ ಸರಿ. ಡಾ॥ಹಾಫ್‌ಕಿನ್ ತಮ್ಮ ಜೀವತ ಕಾಲದಲ್ಲೇ ಅವರು ಆವಿಷ್ಕರಿಸಿದ್ದ ಕಾಲರಾ, ಪ್ಲೇಗ್ ವ್ಯಾಕ್ಸೀನು ಫಲಪ್ರದವಾದುದು ಅವರ ಸಂಶೋಧನ ಕರ್ತೃತ್ವಕ್ಕೆ ಸಂದ ಫಲವೆಂದೇ ಹೇಳಬೇಕು; ವಿಜ್ಞಾನ ಮಾರ್ಗದಲ್ಲಿ ಅವರಿಗಿದ್ದ ದೃಢನಂಬಿಕೆ, ಶ್ರದ್ಧಾಪೂರ್ವ ಮತ್ತು ಸಮರ್ಪಣಾ ಭಾವದ ಕಾರ್ಯಕ್ಷಮತೆಗಳು ಅವರಿಗೆ ಅಂತಿಮವಾಗಿ ಸಂತೃಪ್ತಿಯುಂಟು ಮಾಡಿದ್ದವು. ಪಟ್ಟಭದ್ರ ಹಿತಾಸಕ್ತ ಕೆಲವರಿಂದ ಅವರಿಗೆ ಸ್ವಲ್ಪಮಟ್ಟಿಗೆ ಕೆಟ್ಟಹೆಸರು ಹಾಗೂ ಅವಮಾನಕರ ಪರಿಸ್ಥಿತಿ ಉಂಟಾದರೂ, ನಿಜಸ್ಥಿತಿ ಬಯಲಾದಾಗ ಅವರು ಮತ್ತೆ ಉದಯ ಸೂರ್ಯನಂತೆ ಬೆಳಗಿದರು. ಅವರಂತೆ ವೈಜ್ಞಾನಿಕ ಸಂಶೋಧನೆಗಳಲ್ಲಿ ಸಮರ್ಪಣಾ

ಭಾವದಿಂದ ಅರ್ಪಿಸಿಕೊಂಡವರು ತೀರಾ ವಿರಳ; ಬಹುಶಃ ಆ ದಿಸೆಯಲ್ಲಿ ಹೆಸರಿಸಬಹು ದಾದವರೆಂದರೆ ಭಾರತೀಯ ಡಾ॥ ಯಲ್ಲಾ ಪ್ರಗಡ ಸುಬ್ಬರಾಯರೊಬ್ಬರೆನಿಸುತ್ತದೆ.

ಅವರು ಜೀವಿಸಿದಾಗಲೇ ಹಲವು ಸತ್ಕಾರ, ಸನ್ಮಾನ, ಬಹುಮಾನಗಳು ದೊರಕಿದ್ದರಲ್ಲಿ ಆಶ್ಚರ್ಯವೇನಿಲ್ಲ. ಬ್ರಿಟಿಷ್ ಸರ್ಕಾರದವರು 1897ರಲ್ಲೇ ಕಂಪ್ಯಾನಿಯನ್ ಆಫ್ ದ ಆರ್ಡರ್ ಆಫ್‌ದ ಇಂಡಿಯನ್ ಎಂಪೈರ್ C.I.E. ಸನ್ನದನ್ನು ದಯಪಾಲಿಸಿತ್ತು. ಎರಡನೆಯ ಯುದ್ಧಾನಂತರ ಹಾಫ್‌ಕಿನ್ನರು ನಿವೃತ್ತರಾಗಿ ಯುರೋಪಿನಲ್ಲಿದ್ದಾಗ ಅವರಿಗೆ ಇನ್ನೂ ಹೆಚ್ಚಿನ ಗೌರವ ಸಲ್ಲಿಸುವ ಅಭಿಲಾಷೆ ಸರ್ಕಾರಕ್ಕೆ ಇತ್ತಂತೆ. ಆ ಸಮಯದಲ್ಲಿ ಅವರ ವಾಸ ಸ್ಥಳದ ಪತ್ತೆಯಾಗದೇ ಅದು ಸಾಧ್ಯವಾಗಿರಲಿಲ್ಲ. ಮುಂಬಯಿಯಲ್ಲಿ 1899ರಿಂದಲೂ ಅವರು ಕಾರ್ಯಕ್ಷೇತ್ರವಾಗಿದ್ದ ಸಂಶೋಧನಾಲಯವನ್ನು 'ಹಾಫ್‌ಕೀನ ಇನ್ಸಿಟಿಟ್ಯೂಟ್' ಎಂದು (Haffkine Institute) 1925ರಲ್ಲಿ ನಾಮಕರಣಮಾಡಿ, ಅವರ ಹೆಸರನ್ನು ಚಿರಸ್ಥಾಯಿಯಾಗಿಸಲಾಗಿದೆ. ಅದೀಗ (1999) ಶತಮಾನೋತ್ಸವ ಆಚರಿಸಿತು. ಭಾರತ ಸರ್ಕಾರ 1964ರಲ್ಲಿ ವಿಶೇಷ ಅಂಚೆ ಚೀಟಿಯನ್ನು ಪ್ರಕಟಿಸಿ ಗೌರವಿಸಿತು. ಭಾರತವೇ ಅಲ್ಲದೆ ಬ್ರಿಟಿಷ್, ಫ್ರಾನ್ಸ್ ಮತ್ತು ಈ ರಷ್ಯಾದ ಹಲವು ವೈಜ್ಞಾನಿಕ ಸೊಸೈಟಿಗಳು, ಅಕಾಡೆಮಿ ಮುಂತಾದ ಘನತೆವೆತ್ತ ಸಂಘ ಸಂಸ್ಥೆಗಳು ಅವರಿಗೆ ಗೌರವ ಸದಸ್ಯತ್ವ ನೀಡಿಯೋ ಇಲ್ಲವೆ ಬಹುಮಾನಗಳನ್ನಿತ್ತು ಸತ್ಕರಿಸಿವೆ.

ಮೈಲಿ, ಕಾಲರಾ, ಪ್ಲೇಗ್‌ಗಳಂಥ ಸಾಂಕ್ರಾಮಿಕ ರೋಗಗಳು ಇಡೀ ಮಾನವ ಕುಲವನ್ನೇ ವಿನಾಶಮಾಡಿ ಬಿಡುತ್ತವೆಯೋ ಎಂಬ ಶಂಕೆಯ ಕಾಲವೊಂದಿತ್ತು. ಮೈಲಿಯಂಥ ಮಾರಕ ಪಿಡುಗನ್ನು ಪ್ರಸ್ತುತ ಈ ಗೋಳದಿಂದಲೇ ಹೊರಗಟ್ಟಲಾಗಿದೆ; ಕಾಲರಾ, ಪ್ಲೇಗುಗಳು ಈಗ ವಿನಾಶದ ಅಂಚಿನಲ್ಲಿವೆ. ಈ ಸಾಧನೆಗಳ ಹಿಂದೆ ಎಡ್ವರ್ಡ್ ಜೆನ್ನರ್, ಲೂಯಿ ಪ್ಯಾಶ್ಚರ್, ರಾಬರ್ಟ್‌ಕಾಖ್, ವ್ಲಾದಿಮಿರ್ ಹಾಫ್‌ಕಿನ್ನರಂಥ ಮಹಾನ್ ವಿಜ್ಞಾನಿಗಳ ನಿಸ್ವಾರ್ಥ ಸೇವಾ ಕೈಂಕರ್ಯ ಇದೆಯೆಂಬುದನ್ನು ಮರೆಯಲಾಗದು.

ಸೋಂಕು ರೋಗಗಳನ್ನು ತಡೆಗಟ್ಟುವಲ್ಲಿ ಸಾಕಷ್ಟು ಪ್ರಗತಿಯಾಗಿರುವುದಾದರೂ, ಜನ ಹೆಚ್ಚಾಗಿ ಸೇರುವ ಜಾತ್ರೆ, ಪರಿಷೆಗಳ ಸಂದರ್ಭದಲ್ಲಿ ಕಾಲರಾ ಈಗಲೂ ತಲೆಯೆತ್ತುತ್ತಲೇ ಇದೆ; ಪ್ಲೇಗು ಸಹಾ ಇತ್ತೀಚಿನ ವರ್ಷಗಳಲ್ಲಿ ಪ್ರಪಂಚದ ಹಲವು ಕಡೆ ಕಾಣಿಸಿಕೊಂಡಿದೆ. ಭಾರತದಲ್ಲಿ 1993ರಲ್ಲಿ ಅದರ ಹಠಾತ್ ಧಾಳಿಯಾದಾಗ ದೇಶಾದ್ಯಂತ ಉಂಟಾದ ಭಯಭೀತಿಗಳನ್ನು ಮರೆಯಲು ಸಾಧ್ಯವೇ? ಈ ದಿಸೆಯಲ್ಲಿ ಬರೇ ವಿಜ್ಞಾನಿಗಳಾಗಲೀ, ವೈದ್ಯರಾಗಲೀ ಕಾರ್ಯಪ್ರವೃತ್ತರಾದರೆ ಸಾಲದು; ಸರ್ಕಾರ, ಸಮಾಜದವರು ತಮ್ಮ ಸುತ್ತಲ ಪರಿಸರದ ಸ್ವಚ್ಛತೆ, ನೈರ್ಮಲೀಕರಣ ಹಾಗೂ ಮಲಮೂತ್ರಗಳ ಸೂಕ್ತ ಸಾಗಣೆ ಬಗೆಗೆ ಆಸಕ್ತಿ ವಹಿಸದಿದ್ದರೆ ವಿಜ್ಞಾನಿಗಳ ತ್ಯಾಗ ಬಲಿದಾನಗಳು ವ್ಯರ್ಥವೇ ಸರಿ.

ಆದರೂ ವಿಜ್ಞಾನಿಗಳು ಕಣ್ಣುಮುಚ್ಚಿಕೊಂಡು ವಿಶ್ರಾಂತರಾಗಿಲ್ಲ. ಹಾಫ್‌ಕಿನ್ನರು ಕಳೆದ ಶತಮಾನದಲ್ಲಿ ಕಂಡುಹಿಡಿದ ಕಾಲರಾ ವ್ಯಾಕ್ಸೀನು ಪ್ರಸ್ತುತ ಸಮಯದಲ್ಲಿ ಓಬೀ

ರಾಯನ ಕಾಲದಂತಾಗುವ ಪರಿಸ್ಥಿತಿ ಉಂಟಾಗಿದೆ. ಕಾಲರಾ ವ್ಯಾಧಿಯ ಲಕ್ಷಣಗಳನ್ನುಂಟು ಮಾಡುವಲ್ಲಿ "ಹೊರಜೀವಿಷ" (ಎಕ್ಸೋಟಾಕ್ಸಿನ್- EXOTOXIN) ಎಂಬ ಹೊಸ ಅಂಶದ ಪಾತ್ರಸಾಬೀತಾಗಿದೆ. ನಮ್ಮವರೇ ಆದ ಕಲ್ಕತ್ತಾದ ಶಂಭುನಾಥಡೇ (1915-1985)ಯವರು 1950ರದಶಕದಲ್ಲಿ ಅದನ್ನು ಪತ್ತೆಮಾಡಿ ಕಾಲರಾ ಸಂಶೋಧನೆಗೆ ವಿಶ್ವವಾದ್ಯಂತ ಹೊಸ ತಿರುವನ್ನೇ ಉಂಟು ಮಾಡಿದ್ದಾರೆ. ಅದರಿಂದಾಗಿ ಅವರೀಗ ಒಬ್ಬ ವಿಶ್ವವಿಖ್ಯಾತ ವಿಜ್ಞಾನಿಯಾಗಿ ಪರಿಗಣಿಸಲ್ಪಟ್ಟಿದ್ದಾರೆ. ಅದನ್ನು ಮೂಲವಾಗಿಟ್ಟುಕೊಂಡು ಬಾಯಿ ಮೂಲಕ ನೀಡಬಹುದಾದ ವ್ಯಾಕ್ಸೀನು (Oral Cholera Vaccine) ಈಗ ಬಳಕೆಗೆ ಬರುತ್ತಿದೆ. ಬಹುಶಃ ಹಿಂದೆ ಹಾಫ್‌ಕಿನ್ ತಯಾರಿಸಿದ ವ್ಯಾಕ್ಸೀನಿಗಿಂತ ಉತ್ತಮ ಫಲಿತಾಂಶ ನೀಡುತ್ತಿದೆಯಲ್ಲದೆ, ಜನರಿಗೆ ನೀಡುವುದಕ್ಕೆ ಸುಲಭ ಹಾಗೂ ಸರಳವಾಗಿದೆ ಕೂಡ.

ಹಾಫ್‌ಕಿನ್ ಕಳೆದ ಶತಮಾನದ ಅಂತ್ಯದಲ್ಲಿ ಪ್ಲೇಗ್ ನಿಯಂತ್ರಣಕ್ಕಾಗಿ ವ್ಯಾಕ್ಸೀನನ್ನು ಆವಿಷ್ಕರಿಸುವ ಸಂದರ್ಭದಲಿ ಅದರ ಖಚಿತವಾದ ಚಿಕಿತ್ಸೆಗೆ ಪ್ರಸ್ತುತ ಲಭ್ಯವಿರುವಂಥ ಜೀವಿರೋಧಕ ಮದ್ದುಗಳು ಲಭ್ಯವಿರಲಿಲ್ಲ. ಮೊದಲು ಬೆಳಕಿಗೆ ಬಂದ ಪೆನಿಸಿಲಿನ್ ಸರಣಿಯ ಜೀವಿರೋಧಕಗಳು ಪ್ಲೇಗ್ ಬ್ಯಾಸಿಲೈಗಳ ವಿರುದ್ಧ ಯಶಸ್ವಿಯಾಗುತ್ತಿರಲಿಲ್ಲ. ಆದರೆ ಭಾರತ ಸಂಜಾತ ಡಾ॥ ಯಲ್ಲಾಪ್ರಗಡ ಸುಬ್ಬರಾಯರ ನೇತೃತ್ವದಲ್ಲಿ ಅಮೆರಿಕೆಯಲ್ಲಿ ಆವಿಷ್ಕಾರಗೊಂಡ ಟೆಟ್ರಾಸೈಕ್ಲಿನ್ ಗುಂಪಿನ ಮದ್ದುಗಳು (1947) ಪ್ಲೇಗ್ ವಿರುದ್ಧ ರಾಮಬಾಣದಂತೆ ಕಾರ್ಯವೆಸಗಿದವು. ಜೊತೆಗೆ ಹಾಪ್‌ಕಿನ್ನರ ವ್ಯಾಕ್ಸೀನಿನ ಬಳಕೆಯಿಂದ ಪ್ಲೇಗ್ ಬಹುಪಾಲು ಹತೋಟಿಗೆ ಬಂದಿರುವುದಾದರೂ ಪ್ರಪಂಚದ ಹಲವು ಕಡೆ ಆಗಿಂದಾಗ್ಗೆ ತಲೆಯೆತ್ತುವುದು ತಪ್ಪಿಲ್ಲ. ಅಲ್ಲದೆ ಪ್ಲೇಗ್ ಇನ್ನೂ ಒಂದು ರೀತಿಯಲ್ಲಿ ಅಪಾಯಕಾರಿಯಾಗುವ ಸಾಧ್ಯತೆಗಳೀಗ ಬೆಳಕಿಗೆ ಬರುತ್ತಿವೆ. ಪ್ಲೇಗ್ ಬ್ಯಾಸಿಲೈಗಳನ್ನು ಯುದ್ಧ ರಂಗದಲ್ಲಿ ಜೈವಿಕಾಸ್ತ್ರಗಳಾಗಿ (germ war-fare) ಪ್ರಯೋಗಿಸುವ ಸಾಧ್ಯತೆಗಳು ಇತ್ತೀಚಿನ ದಿನಗಳಲ್ಲಿ ಕಂಡು ಬರುತ್ತಿವೆ. ಈ ದಿಸೆಯಲ್ಲಿ ಇರಾಕ್ ಇಂತಹ ಜೈವಿಕಾಸ್ತ್ರ ಹೊಂದಿದೆಯೆಂಬ ಶಂಕೆ ಬಲವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಸೂರತ್ ಪ್ರದೇಶದಲ್ಲಿ ಪ್ಲೇಗ್ ಹಟಾತ್ತನೆ ತಲೆದೋರಿದಾಗ ನೆರೆ ರಾಷ್ಟ್ರವೊಂದು ಪ್ಲೇಗಿನ ಬ್ಯಾಸಿಲೈಗಳನ್ನು ಆ ಪ್ರದೇಶದಲ್ಲಿ ಬಿಡುಗಡೆ ಮಾಡಿದ್ದಿರಬಹುದೆಂಬ ದೂರುಗಳೂ ಇದ್ದವು. ಅದರಿಂದ ಕೆಲವು ರಾಷ್ಟ್ರಗಳು ಅದರಲ್ಲೂ ಬ್ರಿಟನ್ನಿನವರು ಹೊಸ ತಂತ್ರವೊಂದರಿಂದ ಪ್ಲೇಗ್ ವ್ಯಾಕ್ಸೀನನ್ನು ಆವಿಷ್ಕರಿಸುತ್ತಿದ್ದು ಸಧ್ಯದಲ್ಲೇ ಬಿಡುಗಡೆಯಾಗಲಿದೆ. ಅದನ್ನು ಬಹುಪಾಲು ಯುದ್ಧರಂಗದಲ್ಲಿ ಹೋರಾಡುವ ಸೈನಿಕರಿಗೆ ನೀಡಿ, ಶತ್ರುಗಳು ಪ್ಲೇಗ್ ಬ್ಯಾಸಿಲೈಗಳಿಂದ ಜೈವಿಕಧಾಳಿ ನಡೆಸಿದರೆ ಅವರಿಗೆ ತೊಂದರೆಯಾಗದಂತೆ ರಕ್ಷಣೆ ಒದಗಿಸುತ್ತದೆಂದು ನಂಬಲಾಗಿದೆ.

ಇತ್ತೀಚಿನ ಈ ಬೆಳವಣಿಗೆಗಳಿಂದ ಹಾಫ್‌ಕಿನ್ನರಂಥ ವಿಜ್ಞಾನಿಗಳ ಸಾಧನೆಗಳಿಗೇನೂ ಧಕ್ಕೆ ಬರುವುದಿಲ್ಲ. ಅವರು ಜೀವಿಸಿದ್ದ ಕಾಲದಲ್ಲಿ ವಿನಾಶದ ಅಂಚಿನಲ್ಲಿದ್ದ ಮಾನವ

ಕುಲವನ್ನು ತಮ್ಮ ಕಾಲರಾ ಮತ್ತು ಪ್ಲೇಗ್ ವ್ಯಾಕ್ಸೀನುಗಳಿಂದ ಸಂರಕ್ಷಿಸಿದ್ದಾರೆ. ಬರೇ ಭೂ ಸೈನ್ಯದ ಕಾರ್ಯಾಚರಣೆಯಿಂದ ಆ ಕಾಲದಲ್ಲಿ ಜರುಗುತ್ತಿದ್ದ ಯುದ್ಧಕ್ಕೆ ಅವರ ಆವಿಷ್ಕಾರಗಳು ಸೂಕ್ತವಾಗಿದ್ದವು. ಬಹುಪಾಲು ಆಕಾಶರಂಗದಲ್ಲಿ ನಡೆಯುವ ಯುದ್ಧದ ಕಾರ್ಯಾಚರಣೆಯ ಅಪಾಯಗಳಿಗೆ ಹೊಸತಂತ್ರಗಳೇ ಬೇಕಾಗುತ್ತವೆ. ಅದರಿಂದ ರಾಜಕೀಯ ಅಥವಾ ಸಾಮಾಜಿಕ ಕ್ಷೇತ್ರಗಳಲ್ಲಿ ಏನೇ ನಡೆಯುತ್ತಿದ್ದರೂ, ವೈದ್ಯರು ಮತ್ತು ವಿಜ್ಞಾನಿಗಳು ನಿದ್ದೆಯಿಲ್ಲದ ರಾತ್ರಿಗಳನ್ನು ಕಳೆಯುವುದು ತಪ್ಪಲಾರದು.

## ಪಾರಿಭಾಷಿಕ ಪದಕೋಶ

ಅ

| | |
|---|---|
| ಅಂಗಕ್ರಿಯಾಶಾಸ್ತ್ರ | Physiology |
| ಅಂಗರಚನಾ ಶಾಸ್ತ್ರ | Anatomy |

ಆ

| | |
|---|---|
| ಆಂಥ್ರಾಕ್ಸ್-ನೆರಡಿ ರೋಗ | Anthrax |
| ಆಂಟಿಬಾಡಿ-ರೋಧ ವಸ್ತು | |
| ಆಲಿಸಿಕೊಳ್ಳುವುದು | Ausculation |
| ಆಹಾರ ಮಾಧ್ಯಮ-ರೋಗಾಣುಗಳನ್ನು ಬೆಳೆಸಲು ಉಪಯೋಗಿಸುವ ಆಹಾರ | Culture media |
| ಆರೋಗ್ಯ ಶಾಸ್ತ್ರ | Hygiene |

ಉ

| | |
|---|---|
| ಉರಿಯೂತ | Inflammation |

ಎ

| | |
|---|---|
| ಎಕ್ಸ್‌ರೇ | X-ray |

ಔ

| | |
|---|---|
| ಔಷಧ ಸಂಹಿತೆ | Meteria mediea-phrmocophoea |

ಕ

| | |
|---|---|
| ಕನಿಷ್ಟ ಮಾರಕಡೋಸ್ | Minamall ethal Dose -MLD |
| ಕರಾಳ ಮೃತ್ಯು | Black Death |
| ಕಸಿಕಟ್ಟುವುದು | Grafting (Transplantation) |
| ಕಾಲರಾ (ವಾಂತಿಭೇದಿ) | Cholera |
| ಕ್ವಾರೆಂಟೀನ್-ಸೋಂಕುರೋಗವನ್ನು ಹರಡದಂತೆ 40 ದಿನ ಬೇರ್ಪಡಿಸುವುದು | Quarantine |
| ಕೀಲುವಾತಬೇನೆ | Arthritis |
| ಕೀವಿನ ಬೊಬ್ಬೆ-ಕೀವು ತುಂಬಿದ ಗುಳ್ಳೆ | Vsicle |
| ಕೋಪೆಕ್ಸ್-ರಷ್ಯಾದೇಶದ ತಾಮ್ರದ ನಾಣ್ಯ | Kopeck |

ಗ

| | |
|---|---|
| ಗಿನಿ ಇಲಿ (ಪ್ರಯೋಗಕ್ಕೆ ಬಳಸುವ ಇಲಿ, ಮೊಲ ಇತ್ಯಾದಿ) | Guinae Pig |

ಚ

| | |
|---|---|
| ಚರ್ಮದಡಿ ಇಂಜಕ್ಷನ್ | Subcutaneous intection |

ಟ

| | |
|---|---|
| ಟಾಕ್ಸಿನ್ (ಜೀವಿಷ) | (Toxin) |
| ಟ್ಯುಬರ್ ಕ್ಯುಲಸ್ ಬ್ಯಾಸಿಲ್ಲೈ-ಕ್ಷಯರೋಗಾಣು | (T.B.Bacilli) |
| ಟೈಫಸ್-ಹೇನು-ಕೂರೆಜ್ವರ | Fever (Typhus) |

ತ

| | |
|---|---|
| ತಟ್ಟಿ ಪರೀಕ್ಷೆಮಾಡುವುದು | Percussion |
| ತಾಪನಿಯಂತ್ರಣಯಂತ್ರ | Thermostat |
| ತೀನಿಕಣತೆ-ರಕ್ತಗತವಾಗುವ ರೋಗಾಣುಗಳನ್ನು ಬಿಳೀರಕ್ತಕಣಗಳು ನುಂಗುವುದು | Phagocytosis |

ದ

| | |
|---|---|
| ಗೋಮಾಂಸಾರ-ದನದ ಮಾಂಸಾಹಾರ | Beef Broth |
| ದುಗ್ಧಗ್ರಂಥಿ | Lymphnodes |

ಧ

| | |
|---|---|
| ಧನುರ್ವಾಯು (ಸೆಟೆರೋಗ) | Tetanus |
| ಧರ್ಮಪ್ರವರ್ತಕ | Apostle |

ನ

| | |
|---|---|
| ನ್ಯಾಯಶಾಸ್ತ್ರ ಸಿದ್ಧಾಂತ | Political Philoshophy |
| ನಿಯಂತ್ರಿತ ಪ್ರಯೋಗ | Controled Experiments |
| ನೇತ್ರದರ್ಶಕ ಬ್ಯಾಟರಿ | Ophthalmoscope |
| ನೈರ್ಮಲ್ಯಾಧಿಕಾರಿ | Sanitary Officer |

ಪ

| | |
|---|---|
| ಪರತಂತ್ರ ಜೀವಿ | Parasite |
| ಪ್ರನಾಳ | Test Tube |
| ಪ್ರಾಣಿಶಾಸ್ತ್ರ | Zoology |

| | |
|---|---|
| ಫ್ಲಾಸ್ಕ್-ಗಾಜಿನ ಬುದ್ದಲಿ | Flask |
| ಪ್ರಕೃತಿ ವಿಜ್ಞಾನ | Natural Science |
| ಪುಪ್ಪಸದುರಿತ | Pneumonia |
| ಪ್ರೋಟೋ ಜೋವಾ-ಏಕಾಣುಪ್ರಾಣಿವರ್ಗ | Protozoa |
| ಪ್ಲೇಗ್ | Plague |
| ಪ್ಲೇಗ್‌ಬ್ಯುಬೋನಿಕ್-ದುಗ್ಧಗ್ರಂಥಿಯ | Bubonic P |
| ಪ್ಲೇಗ್ ನ್ಯೂಮೋನಿಕ್-ಶ್ವಾಸಕೋಶಡಿಖ್ಖ | Pneumonic |
| ಪ್ಲೇಗ್ ಸೆಪ್ಟಿಸೀಮಿಕ್-ನೆತ್ತರ ನಂಜು | Septcaemic |
| ಪ್ಲೇಗ್ ಜಸ್ಟೀನಿಯನ್-ಜಸ್ಟೀನಿಯನ್ ದೊರೆ ಕಾಲದ | Justinian |

ಬ

| | |
|---|---|
| ಬ್ಯಾಸಿಲೈ- ರೋಗಕಾರಕ ಮಿಣಜೀವಿಗಳ ವಿಧ | Bacilli |
| ಬ್ಯಾಕ್ಟೀರಿಯಾ | Bacteria |
| ಬ್ಯಾಕ್ಟೀರಿಯಾ ಲಜಿಸ್ಟ್-ರೋಗಾಣು ಶಾಸ್ತ್ರಜ್ಞ | Bacterialogist |
| ಬೆಳೆಗಳು-ಮಿನಿಜೀವಿಗಳನ್ನು ಬೆಳೆಸುವ | Ulture of Microbes |
| ಬೇರ್ಪಡಿಸುವ ಶಿಬಿರ | Isolation camp |

ಮ

| | |
|---|---|
| ಮರೆವಣಿ (ವಿನಾಯಿತಿ) | Immunity |
| ಮರೆವಣೆ ಶಾಸ್ತ್ರಜ್ಞ | Immunologist |
| ಮಿಣಜೀವಿ-ಸೂಕ್ಷ್ಮಾಣು ಜೀವಿ | Microbe, Bacteria etc |
| ಮೈಲಿರೋಗ | Smallpox |

ರ

| | |
|---|---|
| ರಕ್ತದ ಗುಂಪು | Blood Groups |
| ರಸಿಕೆ (ಲಸಿಕೆ) | Lymph, Serum |
| ರಾಜಕೀಯ ಅರ್ಥಶಾಸ್ತ್ರ | Political Economy |
| ರಾಸಾಯನಿಕ ಶಾಸ್ತ್ರ | Chemistry |
| ರೂಬೆಲ್ಸ್-ರಷ್ಯಾದಲ್ಲಿ ರೂಪಾಯಿಯಂಥ ನಾಣ್ಯ | Rubles |
| ರೇಬಿಸ್ (ನಾಯಿ ಹುಚ್ಚು) | Rabies |
| ರೋಗನಿರೋಧಕ ಶಕ್ತಿ | Immunity |
| ರೋಗಶಾಸ್ತ್ರ | Pathology |

ಲ

| | |
|---|---|
| ಲಸಿಕೆ (ರಸಿಕೆ, ದೇವಿ ಹಾಕುವ ರಸ) | Vaccine (Inoculation) |
| ಲೋಳ್ಪರೆ (ಒಳಪರೆ) | Mucous membrane |

ವ

| | |
|---|---|
| ವಶೀಕರಣ ವಿದ್ಯೆ | Mesmerism |
| ವ್ಯಾಕ್ಸೀನು (ದೇವಿಹಕುವ ಲಸಿಕೆ, ಇನಾಕ್ಯುಲೇಷನ್) | Vaccine, Inoculation |
| ವಿಬ್ರಿಯೋ-ಕಾಲರಾ ರೋಗಾಣುಜಾತಿ | Vibrio |
| ವಿಷಮತೆ-ರೋಗಾಣು | Virulance |
| ವಿಷಮಶೀತ ಜ್ವರ | Typhoid Fever (Thphoid) |

ಷ

| | |
|---|---|
| ಷಿಲ್ಲಿಂಗ್ -ಬ್ರಿಟಿಷರ ಒಂದು ಬೆಳ್ಳಿ ನಾಣ್ಯ | Shilling |

ಸ

| | |
|---|---|
| ಸಮತಾವಾದ | Communism |
| ಸತ್ವಕುಂದಿಸುವುದು | Attenuate |
| ಸ್ವಾಮ್ಯ ಸನ್ನದು | Patent |
| ಸಾಂಕ್ರಾಮಿಕ | Endemic |
| ಸಾಂಕ್ರಾಮಿಕ-ಮಹಾ | Panndemc |
| ಸಾಂಕ್ರಾಮಿಕ-ಪ್ರಾಣಿ | Epizootic |
| ಸಾಂಕ್ರಾಮಿಕ ರೋಗ ತಜ್ಞ | Epidemlologist |
| ಸಿಮಿಟಿಕ್-ಸಿಮಿಟಿಕ್ ಎಂಬ ಜನಾಂಗ | Semitci |
| ಸಿಫಿಲಿಸ್ (ಒಂದು ಮೇಹರೋಗ) | Syphillis |
| ಸೂಕ್ಷ್ಮದರ್ಶಕ ಯಂತ್ರ | Microscope |
| ಸೋಂಕುರೋಗ-ಒಬ್ಬರಿಂದೊಬ್ಬರಿಗೆ ಹರಡುವ | Infectious Disease |
| ಸ್ಟ್ರೆಪ್ಟೋಕಾಕಸ್-ಮಿಣಜೀವಿಗಳ ಎರಡು ವಿಧ | Streprococcus |
| | Staphylococcus |
| ಸ್ಟೈಫೈಲೋಕಾಕಸ್ | Staphlocoecus |

ಹ

| | |
|---|---|
| ಹಬೆಯುಗ (ಉಗಿಯಂತ್ರದ ಕಾಲ) | Steam Age |
| ಹಸಿರು ಯೂಗ್ಲೀನಾ (ಒಂದು ಬಗೆಯ ಏಕಾಣುಜೀವಿ) | Green Euglena |

| | |
|---|---|
| ಹಿಪ್ಪೋಕ್ರಿಟಿಸ್ ಶಪಥ-ವೈದ್ಯವೃತ್ತಿಯನ್ನು ಆರಂಭಿಸುವಾಗ ತೆಗೆದುಕೊಳ್ಳುವ ಶಪಥ | Hippocratis oath |
| ಹಾಫ್‌ಕೀನೀಕರಿಸು (ಇನಾಕ್ಯುಲೇಷನ್ ಮಾಡು) | Haffkinise |
| ಹೈಸ್ಕೂಲು | Gymansium |

## ಆಕರ ಗ್ರಂಥಗಳು


1. The story of Dr.Haffkine: Mark Popovsky Progress Publishers, Mascow
2. Haffkine Institute Platinum Jubille Commenoration Volume (1899-1974): Haffkine Institute, Parel, Bombay-12
3. Devils, Drugs and Doctors : Howard W. Haggard (1954): Pocket Books, INC. Newyork, N.Y.
4. ಮುಳ್ಳು ಹಾದಿಯ ಪಯಣಿಗ-ಡಾ||ಟಿ.ವಿಶ್ವನಾಥರಾವ್ (ಶ್ರೀನಾಗಾನಂದ) ಧಾರಾವಾಹಿ, ಉತ್ಥಾನ ಮಾಸಪತ್ರಿಕೆ-ಫೆಬ್ರವರಿ-ಸೆಪ್ಟೆಂಬರ್ 1986, ಬೆಂಗಳೂರು.

# ನಮ್ಮಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| 1. **ಮುಷ್ಟಿಯಲ್ಲಿ ಮಿಲೇನಿಯಂ** | ನಾಗೇಶ ಹೆಗಡೆ | 60-00 |
| 2. **ಮನಕೊರೆವ ದೈಹಿಕ ಕಾಯಿಲೆಗಳು** | ಡಾ॥ ಡಿ.ಕೆ. ಮಹಾಬಲರಾಜು | 65-00 |
| 3. **ಉರ್ದು ಕಾವ್ಯದಲ್ಲಿ ಮದಿರೆ ಮತ್ತು ಯೌವನ** | ಶಾಂತರಸ | 50-00 |
| 4. **ಶತಾಯು** (ಕಾದಂಬರಿ) | ಸೂರ್ಯಕುಮಾರಿ | 95-00 |
| 5. **ಪದಕಟ್ಟಿ ಹಾಡೇನ** (ಕವನ ಸಂಕಲನ) | ಡಾ॥ ಬಸವರಾಜ ಸಬರದ | 45-00 |
| 6. **ಬೆಂಕಿ ಮಳೆ** (ಕಥಾ ಸಂಕಲನ) | ಬಾನು ಮುಷ್ತಾಕ್ | 60-00 |
| 7. **ಕಂಬಾಳು** (ಗ್ರಾಮೀಣ ಬದುಕಿನ ಚಿತ್ರಣ) | ಸಿದ್ಧಗಂಗಯ್ಯ | 160-00 |
| 8. **ಗಿಲ್ಗಮಿಷ್** (ಮಹಾಕಾವ್ಯಾಧಾರಿತ ನಾಟಕ) | ಜವರನಹಳ್ಳಿ ಸಿದ್ಧಪ್ಪ | 70-00 |
| 9. **ನಮ್ಮೂರಿನ ನೆನಪುಗಳು** | ಡಾ॥ ಚಂದ್ರಪ್ಪಗೌಡ | 40-00 |
| 10. **ಜಾನಪದ ಶಾಸ್ತ್ರಸಿದ್ಧಾಂತಗಳು** | ಡಾ॥ ವೀರಣ್ಣದಂಡೆ | 150-00 |
| 11 **ನನ್ನ ಕತೆ - ನಮ್ಮ ಕತೆ** (ಕೌಟುಂಬಿಕ ಹಿಂಸೆಯ ವಿರುದ್ಧ ಹೋರಾಡಿದ ದಿಟ್ಟ ಮಹಿಳೆಯ ಸಾಹಸಗಾಥೆ) | ಫ್ಲೇವಿಯಾ ಅನು : ನೇಮಿಚಂದ್ರ | 30-00 |
| 12. **ಕುರುಕ್ಷೇತ್ರದ ಕಮಲ** (ಕಥಾ ಸಂಕಲನ) | ಎಸ್. ಸಂಧ್ಯಾ | 60-00 |
| 13. **ಚುನಾವಣೆ ಚುನಾವಣೆ** | ಜಿ.ಪಿ. ಬಸವರಾಜು | 35-00 |
| 14. **ಕಾರ್ಗಿಲ್ಲಿನ ಕರೆ** | ಸಂ.ಜಿ.ಎಂ. ಶಿರಹಟ್ಟಿ | 35-00 |
| 15. **ಕಳಿಂಗ ಸೂರ್ಯ** (ಲೇಖನಗಳ ಸಂಗ್ರಹ) | ಎಂ.ಪಿ. ಪ್ರಕಾಶ್ | 80-00 |
| 16. **ಹನ್ನೊಂದು ನಾಟಕಗಳು** (ಪುನರ್ ಮುದ್ರಣ) | ಪ್ರೊ॥ ಚಂದ್ರಶೇಖರ ಪಾಟೀಲ | 75-00 |
| 17. **ಬೇರೊಂದು ದಾರಿ** (ಕಥಾ ಸಂಕಲನ) | ಕೆ.ಆರ್. ಸಂಧ್ಯಾರೆಡ್ಡಿ | 30-00 |
| 18. **ಬದುಕೆಂಬ ದಿವ್ಯ** (ಕಾದಂಬರಿ) | ಡಾ॥ ಕಮಲಾ ಹೆಮ್ಮಿಗೆ | 75-00 |
| 19. **ಅಲೀಬಾಬಾ ಮತ್ತು ನಲವತ್ತು ಕಳ್ಳರು** (ಮಕ್ಕಳ ನಾಟಕ) | ಡಾ॥ ಚಂದ್ರಶೇಖರ ಕಂಬಾರ | 45-00 |
| 20. **ಪುಷ್ಪರಾಣಿ** (ಮಕ್ಕಳ ನಾಟಕ) | ಡಾ॥ ಚಂದ್ರಶೇಖರ ಕಂಬಾರ | 30-00 |
| 21. **ಐದುಮಕ್ಕಳ ನಾಟಕಗಳು** | ಎ.ಎಸ್. ಮೂರ್ತಿ | 75-00 |

| | | |
|---|---|---|
| 22. **ಚಂಪಕ ರಾಜಕುಮಾರಿ** (ಮಕ್ಕಳ ಕಥೆಗಳು) | ಶಾರದಾ ಹೆಮ್ಮಿಗೆ | 40-00 |
| 23. **ಹಳ್ಳಿಯತ್ತ ಸುತ್ತಮುತ್ತ** (ಮಕ್ಕಳ ಪ್ರವಾಸ ಕಥನ) | ಶಾರದಾ ಹೆಮ್ಮಿಗೆ | 40-00 |
| 24. **ಮಾಯದ ಕೋಲು** (ಮಕ್ಕಳ ಕಥೆಗಳು) | ಶಾರದಾ ಹೆಮ್ಮಿಗೆ | 48-00 |
| 25. **ಸ್ವಾತಂತ್ರ್ಯವೇ ಸ್ವರ್ಗ** (ಮಕ್ಕಳ ಕವನಗಳು) | ಶಾರದಾ ಹೆಮ್ಮಿಗೆ | 40-00 |
| 26. **ಆಡಿ ಬಾ ನನ ಕಂದಾ** (ಶಿಶುಗೀತೆಗಳು) | ಲಿಂಗಣ್ಣ ಬಂಧುಕಾರ್ | 25-00 |
| 27. **ಪ್ರಜ್ಞಾ** (ಹೆಣ್ಣು ಮಗು ಮತ್ತು ಸ್ತ್ರೀ ಸಂವೇದನೆ ಕುರಿತ ಲೇಖನಗಳು) | ಸಿ.ಜಿ. ಮಂಜುಳಾ | 35-00 |
| 28. **ಹೇಳದಿರಲಾರೆ** (ಅರಳುಮರಳಿನ ಸ್ವಗತ ಲಹರಿ) | ಶಾರದಾ ಹೆಮ್ಮಿಗೆ | 45-00 |
| 29. **ಪತ್ರಿಕೆ ಓದಿ ಕನ್ನಡ ಕಲಿ** | ಎಸ್. ಸೀತಾಲಕ್ಷ್ಮೀ | 50-00 |
| 30. **ಧಾರೆ** (ಕವನ ಸಂಕಲನ) | ಬಿ.ಟಿ. ಕುಮುದಾ ನಾಯಕ | 40-00 |
| 31. **ಕುಶಲೋಪರಿ** (ಆರೋಗ್ಯ ಬರಹಗಳು) | ಡಾ॥ ವಿ. ರಾಜೇಂದ್ರ | 60-00 |
| 32. **ಪೊಳ್ಳಿನೊಳಗಿನ ಪಕ್ಷಿ** (ತತ್ವ ಪದಗಳು) | ಡಾ॥ ಕಮಲಾ ಹೆಮ್ಮಿಗೆ | 80-00 |
| 33. **ಬದುಕು ಕೊಟ್ಟಿದ್ದು ಕಲಿಸಿದ್ದು** (ಆತ್ಮಕಥನ) | ಶಾರದಾ ಹೆಮ್ಮಿಗೆ | 45-00 |
| 34. **ಕ್ಷಣಿಕವಲ್ಲದ ಕ್ಷಣಗಳು** (ಕವನ ಸಂಕಲನ) | ಎಸ್. ಮಾಲತಿ | 25-00 |
| 35. **ಲಾವಣಿ : ಒಂದು ಹಕ್ಕಿ ನೋಟ** (ಜಾನಪದ) | ಡಾ॥ ಕಮಲಾ ಹೆಮ್ಮಿಗೆ | 25-00 |
| 36. **ಹರಕು ತುಟಿ ಮಹಾತ್ಮೆ** (ಹಾಸ್ಯ ಲೇಖನಗಳು) | ಎಚ್.ಎಲ್. ಕೇಶವಮೂರ್ತಿ | 10-00 |
| 37. **ಕಾವ್ಯ** (ಚಲನಚಿತ್ರವಾಗಿರುವ ಕಾದಂಬರಿ) | ವಿಜಯಾಮೂರ್ತಿ | 80-00 |
| 38. **ಪ್ರಾಸಂಗಿಕ** (ಲೇಖನಗಳು) | ಎಚ್. ಎಂ. ಚನ್ನಯ್ಯ | 12-00 |
| 39. **ವ್ಯಕ್ತಿ ಮತ್ತು ಪರಂಪರೆ** (ಲೇಖನಗಳು) | ಕೆ.ವಿ. ತಿರುಮಲೇಶ್ | 10-00 |
| 40. **ಸಮಾಜವಾದ** | ಮಂಗ್ಳೂರ ವಿಜಯ | 3-00 |
| 41. **ಗಂಡಸರು** | ವೀಣಾ ಶಾಂತೇಶ್ವರ | 4-00 |

೧೯ನೇ ಶತಮಾನದಲ್ಲಿ ಅಸಂಖ್ಯ
ಮಾನವರ ಬಲಿ ತೆಗೆದುಕೊಳ್ಳುತ್ತಿದ್ದ
ಪ್ಲೇಗ್ ವ್ಯಾಧಿಗೆ ನಿಯಂತ್ರಕ ಲಸಿಕೆ
ಕಂಡು ಹಿಡಿದ ಡಾ॥ಹಾಫ್‌ಕಿನ್‌ರ
ಜೀವನಗಾಥೆ ಇಲ್ಲಿದೆ. ಬಡಜನರ
ಮನೆಗಳ ಬಾಗಿಲಿಗೇ ಹೋಗಿ
ಪ್ರೀತಿಯಿಂದ ಚಿಕಿತ್ಸೆ ನೀಡುತ್ತಿದ್ದ
ಇವರು ಪ್ಲೇಗ್ ಲಸಿಕೆಯನ್ನು ತಮ್ಮ
ಮೇಲೆ ಮೊದಲು ಪ್ರಯೋಗಿಸಿಕೊಂಡು
ಅದರ ಪರಿಣಾಮ ಅರಿತವರು.
ಭಾರತ ಸರ್ಕಾರದ ಕ್ರಿಮಿಶಾಸ್ತ್ರಜ್ಞರಾಗಿದ್ದ
ಡಾ॥ಹಾಪ್‌ಕಿನ್ ಮುಂಬಯಿ
ರೋಗಾಪಹಾರಿ ಸಂಶೋಧನಾ ಸಂಸ್ಥೆಯ
ಸ್ಥಾಪಕರೂ ಹೌದು. ತಮ್ಮ ಜೀವಿತಾವಧಿಯಲ್ಲಿ
ಎದುರಿಸಬೇಕಾದ ಎಲ್ಲ ವಿಪತ್ತುಗಳಲ್ಲಿಯೂ
ಆತ್ಮಸ್ಥೈರ್ಯ ಕಳೆದುಕೊಳ್ಳದೆ ಒಂದು
ಧೀರೋದಾತ್ತ ಬಾಳನ್ನು ಬಾಳಿದ
ಡಾ॥ ವ್ಲಾದಿಮಿರ್ ಹಾಫ್‌ಕಿನ್‌ರ
ಜೀವನ ಅಂತಃಕರಣ ತಬ್ಬುವಂಥಹದು.



ವೈದ್ಯಕೀಯ ಕ್ಷೇತ್ರದಲ್ಲಿ ಪ್ರಸಿದ್ಧರಾದ
ಡಾ॥ಚಂದ್ರಪ್ಪಗೌಡ ಅವರು ಮಹಾನ್
ಚೇತನವೊಂದರ ಜೀವನವನ್ನು ವಿಶಿಷ್ಟತೆಯೊಂದಿಗೆ
ಕನ್ನಡಿಗರಿಗೆ ಇಲ್ಲಿ ಪರಿಚಯಿಸಿದ್ದಾರೆ.





ನೆಲಮನೆ ಪ್ರಕಾಶನ
ಶ್ರೀರಂಗಪಟ್ಟಣ